# ವೀರಶೈವ ದರ್ಶನ

( ಶ್ರೀ ಕುಮಾರಸ್ವಾಮಿಗಳವರ ಉಪನ್ಯಾಸಗಳ ಸಂಗ್ರಹ )

ಸಂಪಾದಕರು :

ವೀ. ರು. ಕೊಪ್ಪಳ, ಎಂ. ಎ., ಬಿ. ಟಿ.,

ಧಾರವಾಡ

ನವಕಲ್ಯಾಣಮಠ

ಧಾರವಾಡ

# ಒಳಪಿಡಿ


| ಅ.ಸಂ. | ವಿಷಯ | ಪುಟ |
|---|---|---|
| ೧ | ನಮ್ಮ ಮಾತು .... .... .... .... | ೧—೧೦ |
| ೨ | ಮುನ್ನುಡಿ .... .... .... .... | ೧—೪ |
| ೩ | ವೀರಶೈವ ದರ್ಶನ .... .... .... .... | ೧—೧೨ |
| ೪ | ಶೂನ್ಯ ಸಂಪಾದನೆ .... .... .... .... | ೧—೧೩ |
| ೫ | ಇಷ್ಟಲಿಂಗ ರಹಸ್ಯ .... .... .... .... | ೧—೮ |
| ೬ | ಚತುರ್ವಿಧ ಸಾರಾಯ ಸಂಪತ್ತು .... .... .... | ೧—೧೩ |
| ೭ | ಮೂರುತಿ .... .... .... .... | ೧—೧೦ |
| ೮ | ಶಿವಶರಣರ ವಚನ ಮುದ್ರಿಕೆಗಳ ಇಂಗಿತ .... .... | ೧—೧೪ |
| ೯ | ಮಾತುಗಾರಿಕೆಯ ಮೈಮೆ .... .... .... | ೧—೬ |
| ೧೦ | ಸಾಹಿತ್ಯ ಮತ್ತು ಸ್ವಾನುಭಾವ .... .... .... | ೧—೪ |
| ೧೧ | ಸಾಹಿತ್ಯ ಪ್ರಪಂಚದಲ್ಲಿ ವಚನಗಳ ಸ್ಥಾನ .... .... | ೧—೧೮ |
| ೧೨ | ವೀರಶೈವ ‘ನೆಲ್ಸನ್ ಶಾಂಗ್’ .... .... .... | ೧—೧೦ |
| ೧೩ | ವೀರಶೈವವು ಎತ್ತ ಸಾಗಿದೆ? .... .... .... | ೧—೧೨ |
| ೧೪ | ಲಿಂಗವಂತ ಧರ್ಮ ಸಾರಸರ್ವಸ್ವ .... .... .... | ೧—೨೬ |
| ೧೫ | ಚಾಮರಸನ ಪ್ರಭುಲಿಂಗಲೀಲೆ .... .... .... | ೧—೨೪ |
| ೧೬ | ಶ್ರೀ ರೇವಣ್ಣನ ಸಿದ್ಧಿ ಸಾಮರ್ಥ್ಯ .... .... .... | ೧—೧೮ |

# ವೀರಶೈವ ದರ್ಶನ

(ಶ್ರೀ ಕುಮಾರಸ್ವಾಮಿಗಳು, ಬಿ. ಎ.,
ನವಕಲ್ಯಾಣಮಠ, ಧಾರವಾಡ ಅವರ ಉಪನ್ಯಾಸಗಳ ಸಂಗ್ರಹ)



ಸಂಪಾದಕರು:
ವೀ. ರು. ಕೊಪ್ಪಳ, ಎಂ. ಎ., ಬಿ. ಟಿ.,
ಧಾರವಾಡ



ನವಕಲ್ಯಾಣಮಠ
ಧಾರವಾಡ

ಮುದ್ರಕರು:
ರಕ್ಷಾಕವಚ ಮೊದಲಾದವು ಧಾರವಾಡದ ತೋಂಟದಾರ್ಯ ಮುದ್ರಣಾಲಯದಲ್ಲಿ
ಶ್ರೀ. ಶಿ. ಬ. ಹರಿಹರ ಅವರಿಂದ ಮುದ್ರಿತವಾದವು.

ಸಾಹಿತ್ಯ ಸಮಿತಿ ಪತ್ರಿಕೆ, ಜಯಕರ್ನಾಟಕ, ಶಿವಾನುಭವ ಈ ಪತ್ರಿಕೆಗಳಲ್ಲಿ ಅಚ್ಚಾದ
ಲೇಖಗಳ ಹೆಚ್ಚಿನ ಪ್ರತಿ(off-prints)ಗಳ ಸಂಗ್ರಹ.



ಪ್ರಕಾಶಕರು:
ಧಾರವಾಡ ನವಕಲ್ಯಾಣಮಠದಲ್ಲಿ ಶ್ರೀ. ವೀ. ರು. ಕೊಪ್ಪಳ, ಎಂ. ಎ., ಬಿ. ಟಿ.
ಅವರು ಪ್ರಸಿದ್ಧಗೊಳಿಸಿದರು.

# ನಮ್ಮ ಮಾತು

ಶ್ರೀ ಕುಮಾರಸ್ವಾಮಿಗಳವರು ಶ್ರೀ ಗುರುಸಿದ್ಧ ಪ್ರಭುದೇವರು ನವಕಲ್ಯಾಣ ಮಠ ಅವರ ಉತ್ಕಟವಾದ ಇಚ್ಛೆಯ ಪೂರ್ತಿಗಾಗಿ ಮತ್ತು ಮಠದ ಉದ್ದೇಶ ಸಾಧನೆಗಾಗಿ ಪ್ರಯತ್ನಶೀಲರಾಗಿದ್ದ ವ್ಯಕ್ತಿಗಳಲ್ಲಿ ಪ್ರಮುಖರು. ಅವರಿಂದ ಯಾವ ತರಹದ ಕಾರ್ಯವು ನೆರವೇರಿದೆ ಎಂಬುದನ್ನು ಇಲ್ಲಿ ತಿಳಿಯಪಡಿಸಲು ಆನಂದ ವೆನಿಸುತ್ತದೆ.

ಲಿಂಗವಂತ ಧರ್ಮದ ಮತ್ತು ಶಿವಶರಣರ ತತ್ವಗಳನ್ನು ಬೀರುವ ಅವರ ಕಾರ್ಯವು ನವಕಲ್ಯಾಣ ಮಠದ ರಚನೆಯಿಂದಲೇ ಪ್ರಾರಂಭವಾಯಿತು. ೧೯೩೫ರಲ್ಲಿ ಶ್ರೀ ಗುರುಸಿದ್ಧಪ್ರಭುದೇವರ ಸುವರ್ಣಮಹೋತ್ಸವದ ಕೊನೆಯ ಮಂಗಲ ದಿನವೇ ಅವರ ಆಜ್ಞಾನುಸಾರವಾಗಿ "ಶಿವಧರ್ಮ"ದ ಬಗೆಗೆ ಅಪ್ರತಿಮವಾದ ವ್ಯಾಖ್ಯಾನವು ಜರುಗಿತು. ಅಂದು ಶಿವಶರಣರ ತತ್ವ, ಅನುಭವ, ಮಠದ ರಚನೆಯ ಉದ್ದೇಶ ಇವುಗಳ ವಿಷಯವಾಗಿ ತಿಳಿಸಲಾಯಿತು. ಅಂದಿನಿಂದ ಸಮಾಜದ ಹಿತೈಕ ದೃಷ್ಟಿಯಿಂದ ಏನೊಂದೂ ಫಲಾಪೇಕ್ಷೆ ಯಿಲ್ಲದೆ ಕೇವಲ ನವಕಲ್ಯಾಣಮಠದ ವೆಚ್ಚದಿಂದಲೇ ಈ ವಿಷಯದಲ್ಲಿ ಅವಿಶ್ರಾಂತವಾಗಿ ಪರಿಶ್ರಮಪಟ್ಟಿರುವರವರು. ಧಾರವಾಡದ ಹೊರಗಿನ ಅವರ ವ್ಯಾಖ್ಯಾನ ಪ್ರವಚನಗಳು ಹುಬ್ಬಳ್ಳಿಯಲ್ಲಿ ತಾ. ೨೬-೨೭-೨೮ ಜುಲೈ ೧೯೩೬ ಈ ಮೂರು ದಿವಸಗಳವರೆಗೆ "ಶಿವಶರಣರ ಸಂಪಾದನೆ" ಎಂಬ ವಿಷಯ ವನ್ನು ಕುರಿತು ಮಾಡಿದ ವ್ಯಾಖ್ಯಾನಗಳಿಂದ ಪ್ರಾರಂಭವಾಗುತ್ತವೆ. ಅಂದಿ ನಿಂದ "ಶರಣಮಾರ್ಗ ಶ್ರೇಷ್ಠತೆ" "ಶರಣರೂ ವಿಕಾಸವಾದವೂ" "ಶರಣರ ಅನುಭಾವವಿದ್ಯೆ" ಶರಣರ "ಚತುರ್ವಿಧ ಸಾರಾಯ ಸಂಪತ್ತು" ಶರಣರ "ಶೂನ್ಯಸಂಪಾದನೆ" ಶರಣರ "ಇಷ್ಟಲಿಂಗಾನುಭಾವ" "ಶರಣರ ಷಟ್‌ಸ್ಥಲ ಸಾಧನೆ" "ಶರಣರ ಅಷ್ಟಾವರಣನಿಷ್ಠೆ" "ಪಂಚಾಚಾರಗಳು" "ಪಂಚಾಚಾರವೂ ಶರಣರ ಸಾಮ್ಯವಾದವೂ" "ಶರಣರೂ ಸ್ವಾನುಭಾವವೂ" "ಮೂರುತಿ" "ವೀರಶೈವದರ್ಶನ" "ವೀರಶೈವ ಮತದ ವೈಶಿಷ್ಟ್ಯ" "ವೀರಶೈವ ಸಂಸ್ಕೃತಿ" "ಅನುಭಾವಿಗಳ ವಚನ" "ಸಾಹಿತ್ಯ ಪ್ರಪಂಚದಲ್ಲಿ ವಚನಗಳ ಸ್ಥಾನ" ".ಮಾತುಗಾರಿಕೆಯ ಮೈಮೆ" ಇತ್ಯಾದಿ ಇತ್ಯಾದಿಯಾದ ವಿಷಯುಗಳನ್ನು ಕುರಿತು ಹಲವಾರು ಸ್ಥಳಗಳಲ್ಲಿ ನೂರಾರು ವ್ಯಾಖ್ಯಾನ ಪ್ರವಚನಗಳನ್ನು ಅವರು ಮಾಡಿರು ವರು. ಧಾರವಾಡ, ಹುಬ್ಬಳ್ಳಿ, ವಿಜಾಪುರ, ಲೋಣಿ, ಚಡಚಣ, ನಿವರಗಿ, ಸೊಲ್ಲಾ ಪುರ, ಮೈಂದರಗಿ, ಮಹಾಗಾಂವ, ಮುಂಬಯಿ, ಕೊಲ್ಲಾಪೂರ, ಗಡಇಂಗ್ಲಜ, ಮುನವಳ್ಳಿ, ಗೋಕಾಕ, ಸಿದ್ಧಗಂಗಾ, ಬೆಂಗಳೂರು ಮೊದಲಾದ ಊರುಗಳಲ್ಲಿ

ಅವರ ವ್ಯಾಖ್ಯಾನಗಳನ್ನು ಕೇಳಿ ಬೆರಗಾಗದವರಿಲ್ಲ; ಬೆರಳು ಕಚ್ಚದವರಿಲ್ಲ. ಅವರ ಪಾಂಡಿತ್ಯವೂ ಪ್ರಶಂಸನೀಯವೇ ಆಗಿರುವದು. ಅರ್ಥಶಾಸ್ತ್ರ, ರಾಜನೀತಿಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ, ತತ್ವಶಾಸ್ತ್ರ, ಅನುಭವಶಾಸ್ತ್ರ, ಯೋಗಶಾಸ್ತ್ರ ಹೀಗೆ ಎಲ್ಲ ಶಾಸ್ತ್ರಗಳಲ್ಲಿ ಅವರಿಗೆ ಗತಿಯುಂಟು. ಸಾಹಿತ್ಯ ಸಂಗೀತ ಗಳಲ್ಲಿಯೂ ಅವರಿಗೆ ತುಂಬ ಅಭಿರುಚಿಯುಂಟು. ವ್ಯಾಖ್ಯಾನಗಳ ಭರದಲ್ಲಿ ಸ್ವಾಮಿ ರಾಮತೀರ್ಥ, ಸ್ವಾಮಿ ವಿವೇಕಾನಂದ, ಅರವಿಂದ ಘೋಷ, ರವೀಂದ್ರನಾಥ ಟಾಗೋರ, ಟಾಲಸ್ಟಾಯ, ರೊಮಾ ರೋಲಾ, ಮ್ಯಾಝಿನಿ, ಅರಿಸ್ಟಾಟಲ್, ಕಾಂಟ, ಹೆಗೆಲ್, ಹರ್ಬರ್ಟ ಸ್ಪೆನ್ಸರ, ಶೊಫೆನಾರ, ಬರ್ಗಸಾನ್, ಬ್ರ್ಯಾಡ್ಲೆ, ಲಿಬ್ನಿ, ಕ್ರೊಸ್, ಜಂಟಾಯಿಲ್, ಉಯಿಲಿಯಂ ಜೇಮ್ಸ, ಸಿ. ಇ. ಎಂ. ಜೋಡ, ಎ. ಊಲ್ಫ, ಮಹಮ್ಮದ ಪೈಗಂಬರ, ಜೀಸಸ್ ಕ್ರೈಸ್ತ, ಝೂರಸ್ತರ, ಕನ್‌ಫೂಶಿಯಸ್, ಬುದ್ಧ, ಕೃಷ್ಣ, ಬಸವಾದಿ ಶಿವಶರಣರು, ಶಂಕರ ಮಧ್ವ ರಾಮಾನುಜರು, ಉಪನಿಷತ್ ಋಷಿಗಳು ಸೂಫಿಗಳು, ಸಾಧುಗಳು ಎಲ್ಲರೂ ತಮ್ಮ ತಮ್ಮ ವಾಣಿ ಗಳನ್ನು ತಮ್ಮ ತಮ್ಮ ವಿಚಾರಗಳನ್ನು ಶ್ರೀ ಕುಮಾರಸ್ವಾಮಿಗಳವರ ನಾಲಗೆಯಿಂದ ಒಡಮೂಡಿಸುವವರೇ! ಅವೆಲ್ಲ ಮುಗಿದ ಮೇಲೆ ಶ್ರೀ ಕುಮಾರಸ್ವಾಮಿಗಳು ತಮ್ಮ ಸ್ವತಂತ್ರ ವಿಚಾರದ ಮಾತುಗಳನ್ನು ಸಭಿಕರೆದುರಿಗಿಡುವವರೇ! ಹೀಗಾಗಿ ಅವರನ್ನು ಕೊಂಡಾಡದ ಸಭಿಕರಿಲ್ಲ; ಪ್ರಶಂಸಿಸದ ಪತ್ರಗಳಿಲ್ಲ. ಅವರ ಪಾಂಡಿತ್ಯ ತತ್ವವಿವೇಚನೆ ಅನುಭಾವ ಮುಂತಾದವುಗಳನ್ನು ಅರಿತೇ ವೀರಶೈವ ಸಮಾಜದ ಪ್ರತಿನಿಧಿಯೆಂದು ವೀರಶೈವ ತತ್ವಜ್ಞಾನ ಅನುಭಾವವಿದ್ಯೆ ಇವುಗಳ ಬಗೆಗೆ ವ್ಯಾಖ್ಯಾನಕೊಡಲು ಅಖಿಲ ಭಾರತ ತತ್ವಜ್ಞಾನ ಸಮ್ಮೇಳನಗಳಿಂದ ಆಮಂತ್ರಣಗಳು ಬಂದವು. ೧೯೪೦ ರಲ್ಲಿ ಮದ್ರಾಸಿನ ಆ ಸಮ್ಮೇಳನದ ೧೬ನೆಯ ಅಧಿವೇಶನದಲ್ಲಿ "Veerashaiva Weltanshauung" (ಜಗತ್ತಿನ ಬಗೆಗೆ ವೀರಶೈವನ ದೃಷ್ಟಿ) ಎಂಬ ವಿಷಯವನ್ನು ಕುರಿತು ಮತ್ತು ೧೯೪೧ ರಲ್ಲಿ ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಜರುಗಿದ ಅದೇ ಸಮ್ಮೇಳನದ ೧೭ ನೆಯ ಅಧಿವೇಶನದ ಕಾಲಕ್ಕೆ "Veershaivism quo Vadis" (ವೀರಶೈವವು ಎತ್ತ ಸಾಗಿದೆ?) ಎಂಬ ವಿಷಯವನ್ನು ಕುರಿತು ಎರಡು ಅಪ್ರತಿಮವಾದ ವ್ಯಾಖ್ಯಾನಗಳನ್ನು – ಒಂದೊಂದು ತಾಸಿನ ವರೆಗೆ – ಮಾಡಿ ವಿದ್ವಾಂಸರ ಮತ್ತು ತತ್ವಜ್ಞಾನಿಗಳ ತಲೆದೂಗಿಸಿದರು. ಅನೇಕರು ಶಿವಶರಣರ ಲಿಂಗಾನುಭಾವದಲ್ಲಿ ಕುತೂಹಲ ಪಟ್ಟು ಪ್ರಶ್ನೆಗಳ ಸುರಿಮಳೆ ಕರೆದರು. ಕೊರಳ ಲಿಂಗವನ್ನು ನೋಡಿ ಅವನ್ನು ಕಟ್ಟಿರೆಂದೂ ಕೇಳಿದರು. ಆಸಕ್ತಿಯಿಂದ ವೀರಶೈವ ತತ್ವಜ್ಞಾನವನ್ನು ಅಭ್ಯಾಸ ಮಾಡತೊಡಗಿದರು. ಆಯಾ ಕಾಲಕ್ಕೆ ಶ್ರೋತೃಗಳ ಮನಸ್ಸಿನ ಮೇಲಾದ ಪರಿಣಾಮವನ್ನು ಪತ್ರಿಕೆಗಳು ತುಂಬ ಕೊಂಡಾಡಿದವು. ಇಂಥ ಅತುಲವಾದ ಅಪಾರವಾದ ಅಸಾಮಾನ್ಯವಾದ ಪಾಂಡಿತ್ಯ ಪ್ರಭೆಯಿಂದ ಅವರು ಪಡೆದ

ಮನ್ನಣೆಯೂ ಕೂಡ ಗಣ್ಯವಾಗಿಯೇ ಇದೆ. ಕೆಲವನ್ನು ಮಾತ್ರ ಮಾದರಿಗಾಗಿ ಇಲ್ಲಿ ತಿಳಿಸಬಹುದು.

ಮೊತ್ತಮೊದಲಿಗೆ ಹುಬ್ಬಳ್ಳಿಯಲ್ಲಿ "ಶಿವಶರಣರ ಸಂಪಾದನೆ" ಯನ್ನು ಕುರಿತು ಮಾಡಿದ ಅವರ ಭಾಷಣದ ಕೊನೆಗೆ ವೀರಶೈವ ಸಮಾಜದ ಮೊಟ್ಟಮೊದಲಿನ ಕಾಯದೇ ಪದವೀಧರರೂ ತ್ರಿಭಾಷಾ ಪಂಡಿತರೂ ಅನುಭಾವಿಗಳೂ ಜ್ಞಾನವಯೋವೃದ್ಧರೂ ಶಿವಶರಣರ ತತ್ವಗಳ ತಿರುಳನ್ನು ಅರಿತವರೂ ಆದ ಲಿಂಗೈಕ್ಯ ಶ್ರೀ ಸಿದ್ಧರಾಮಪ್ಪನವರು ಪಾವಟೆ ಬಿ. ಎ., ಎಲ್‌ಎಲ್. ಬಿ. ಅವರ ಪ್ರಶಂಸೆಗಳಿವು: "ಕರ್ನಾಟಕದಲ್ಲಿರುವ ೪೦ ಲಕ್ಷ ವೀರಶೈವರಲ್ಲಿ ಧರ್ಮದ ಬಗೆಗೆ ಅಭ್ಯಾಸಿಸಿ ಅದರ ತಿರುಳನ್ನು ಅರಿತವರಾರೆಂದು ಬೆರಳನ್ನು ಎಣಿಸಿದರೆ ಶ್ರೀ ಕುಮಾರಸ್ವಾಮಿಗಳ ಹೆಸರನ್ನೆತ್ತಿ ಎತ್ತಿದ ಒಂದು ಬೆರಳು ಇನ್ನೊಂದಕ್ಕೆ ಏಳಲೇ ಒಲ್ಲದು.... ಅವರ ವ್ಯಾಖ್ಯಾನವು ಕಲಾಭ್ಯಾಸಿಗಳಿಗೆ ಸಂಗೀತ ನಾಟ್ಯದ ಹಬ್ಬವಾಗಿಯೂ ತತ್ವಾಭ್ಯಾಸಿಗಳಿಗೆ ಪರಮಾಮೃತದ ಊಟವಾಗಿಯೂ ಏನೂ ಅರಿಯದ ಅಲ್ಪ ಮತಿಗಳಿಗೆ ಅಚ್ಚರಿಗೊಳಿಸುವ ವಾಗ್ಜಾಲವಾಗಿಯೂ ಪರಿಣಮಿಸಿತೆನ್ನಬೇಕು".... "ಅದು ಅರಿತವರಿಗೆ ಆನಂದವನ್ನೂ ಅರ್ಧಮರ್ಧ ತಿಳಿದವರಿಗೆ ಅಚ್ಚರಿಯನ್ನೂ ಏನೂ ತಿಳಿಯದವರಿಗೆ ಕೌತುಕವನ್ನೂ ಉಂಟುಮಾಡುತಲಿದ್ದಿತು." ಹುಬ್ಬಳ್ಳಿಯ ಶ್ರೀ ಗುರುಬಸವ ಮಂಟಪದಲ್ಲಿ ೨೮-೧೨-೧೯೩೮ ನೆಯ ದಿವಸ ನಡೆದಿದ್ದ "ಶೂನ್ಯಸಂಪಾದನೆ" ಎಂಬ ವಿಷಯದ ವ್ಯಾಖ್ಯಾನದ ಕೊನೆಯಲ್ಲಿ ಘನವಿದ್ವಾಂಸರೂ ಪಂಚಭಾಷಾಪ್ರವೀಣರೂ ಮದ್ರಾಸ ಇಲಾಖೆಯ ನಂದ್ಯಾಲದಲ್ಲಿ ಡಿಸ್ಟ್ರಿಕ್ಟ್ ಮುನಸೀಫರೂ ಆಗಿದ್ದ ಶ್ರೀ ಟಿ. ಎಚ್. ಎಂ. ಸದಾಶಿವಯ್ಯನವರು ಎಂ. ಎ., ಬಿ. ಎಲ್. ಅವರು "ಇದು ವ್ಯಾಖ್ಯಾನವಲ್ಲ; ಇದು ಬರಿಯ ಭಾಷಣವೂ ಅಲ್ಲ; ಆದರೆ ಈಶ್ವರೀ ಪ್ರೇರಣೆಯಿಂದ ಹೊರಹೊಮ್ಮಿದ ಅಮೃತವಾಣಿ! ಈ ಅಮೃತವಾಣಿಯ ಪ್ರವಾಹದಲ್ಲಿ ನಮ್ಮೆಲ್ಲರನ್ನು ತೇಲಿಬಿಟ್ಟರು'' ಶ್ರೀ ಕುಮಾರಸ್ವಾಮಿಗಳು—ಎಂದು ಉದ್ಗಾರವನ್ನು ತೆಗೆದರು. ೧೯೪೦ ನೆಯ ಅಗಸ್ಟ ತಿಂಗಳ ಕೊನೆಯಲ್ಲಿ ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತಿನ ಮಂದಿರದಲ್ಲಿ ವ್ಯಾಖ್ಯಾನ ಮುಗಿದ ಬಳಿಕ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀಮಾನ್ ಎಂ. ನರಸಿಂಹಮೂರ್ತಿಗಳು ಬಿ. ಎ. ಅವರು ತಿಳಿಸಿದ ಮಾತುಗಳು ಒಳ್ಳೇ ಗಮನಾರ್ಹವಾಗಿವೆ. "ಶ್ರೀಗಳವರ ತುಂಬು ಪಾಂಡಿತ್ಯವನ್ನೂ ಅದ್ಭುತ ವಾಕ್‌ಶೈಲಿಯನ್ನೂ ಸ್ಫೂರ್ತಿಯನ್ನೂ ಸಮುದ್ರ ಮತ್ತು ಆಕಾಶಗಳಿಗೆ ಹೋಲಿಸಬಹುದು. ಏಕೆಂದರೆ ಶ್ರೀಗಳವರ ಪಾಂಡಿತ್ಯವು ಸಮುದ್ರದಂತೆ ಆಳವಾದುದೂ ಆಕಾಶದಂತೆ ವಿಸ್ತಾರವಾದುದೂ ಅನರ್ಘವಾದ ತಾತ್ವಿಕ ಮುತ್ತು-ರತ್ನಗಳಿಂದ ತುಂಬಿದುದೂ ಏಕಪ್ರಕಾರವಾಗಿ ದೊರೆಯುತ್ತಿರುವದೂ ಆಗಿದೆ. ವೀರಶೈವ ಸಮಾಜದ ಒಂದು ಅಮೋಘವಾದ

ಅನರ್ಘವಾದ ರತ್ನವಾಗಿದ್ದಾರೆ ಅವರು." "ಶ್ರೀ ಕುಮಾರಸ್ವಾಮಿಗಳು ಅಖಿಲ ಭಾರತದಲ್ಲಿ ಸುವಿಖ್ಯಾತ ವಿಚಾರಿಗಳೂ ಸುಪ್ರಸಿದ್ಧ ವ್ಯಾಖ್ಯಾತರೂ ಎಂದು ಕೀರ್ತಿಶಾಲಿಗಳಾಗಿದ್ದಾರೆ. ಅಲಿಗಡದ ಸಾರ್ವಜನಿಕರು ಅಪ್ರತಿಮವಾದ ವ್ಯಾಖ್ಯಾನವನ್ನು ಕೇಳಲಿರುವರು."—ಎಂದು ಅಲಿಗಡದಲ್ಲಿ ನೆರೆದ ತತ್ವಜ್ಞಾನ ಸಮ್ಮೇಳನದ ಸಂಚಾಲಕರು ವ್ಯಾಖ್ಯಾನದ ಪೂರ್ವದಲ್ಲಿಯೇ ಪ್ರಸಿದ್ಧಗೊಳಿದ್ದ ರಲ್ಲದೆ ಸಿನೇಮಾ ಗೃಹಗಳಲ್ಲಿ ಮೂರು ದಿವಸಗಳ ವರೆಗೆ ಈ ಮಾತನ್ನು ತೋರಿಸಿ ತಿಳಿಯಪಡಿಸಿದ್ದರು. ವ್ಯಾಖ್ಯಾನದ ಕೊನೆಗೆ ಸಮಾರೋಪಣದಲ್ಲಿ ಗಣಿತ ಇಂಗ್ಲಿಷ ತತ್ವಜ್ಞಾನ ಅನುಭವಶಾಸ್ತ್ರ ಮೊದಲಾದ ವಿಷಯಗಳಲ್ಲಿ ತುಂಬ ಪರಿಣತಿಯನ್ನು ಹೊಂದಿ ಅಲಿಗಡ ಯುನಿವ್ಹರ್ಸಿಟಿಗೆ ಒಂದು ಅಮೌಲ್ಯವಾದ ರತ್ನದಂತಿರುವ ಡಾಕ್ಟರ ಎಸ್. ಹಾದಿ ಹಸನ ಅವರು ಕೊಟ್ಟ ಪ್ರಶಂಸೆಗಳು ಅತ್ಯಂತ ಮನನೀಯವಾಗಿವೆ. "ಶ್ರೀಗಳವರು ತಿಳಿಸಿದ ಮಾತುಗಳಲ್ಲಿ ೧೦೦ ಕ್ಕೆ ೯೦ ರಷ್ಟು ಇಲ್ಲಿ ನೆರೆದ ಸಭಿಕರಿಗೂ ಅದರಂತೆ ನನಗೂ ಹೊಸವಾಗಿರುವವು. ........... ಬಹು ಸುಲಲಿತವಾದ ಬಹು ಸುಮಧುರವಾದ ಶೈಲಿಯಲ್ಲಿ ಬಹು ಮನೋಹರವಾಗಿ ವಿಷಯ ಪ್ರತಿಪಾದನೆ ಮಾಡಿದರವರು. ಅದರ ಪರಿಣಾಮವಾಗಿ ಹಿಂದೂದೇಶದಲ್ಲಿ ಅವರೊಬ್ಬ ಉತ್ತಮ ತರಗತಿಯ ವ್ಯಾಖ್ಯಾತರೆಂದು ಒಪ್ಪಿ ಕೊಳ್ಳಲೇಬೇಕು........ ಅವರು ಇಂದು ಅತ್ಯಂತ ಗಡುಚಾದ ವಿಷಯದಲ್ಲಿ ಹೊಸ ಬೆಳಕನ್ನು ಬೀರಿದುದಲ್ಲದೆ ಬಿಡಿಸಲಸಾಧ್ಯವಾದ ಸಮಸ್ಯೆಯನ್ನು ಸರಲವಾದ ಚಿನ್ಹಗಳಿಂದ ಬಿಡಿಸಿ ತೋರಿಸಿದರು. 'ಗಣಿತಶಾಸ್ತ್ರವನ್ನು ತತ್ವಶಾಸ್ತ್ರದ ಜೊತೆಗೆ ಭೂಮಿತಿಶಾಸ್ತ್ರವನ್ನು ಅನುಭವಶಾಸ್ತ್ರದ ಜೊತೆಗೆ ಮೇಳೈಸಿದ ಅವರ ವಿಶಿಷ್ಟವಾದ ಜಾಣ್ಮೆಯು ಅತುಲವಾದ ಮನ್ನಣೆಗೆ ಪಾತ್ರವಾಗಿದೆ. ಇದರಿಂದಾಗಿ ನಮ್ಮ ನ್ನವರು ಹೊಸದೊಂದು ದಾರಿಯಲ್ಲಿ ಇರಿಸಿದರು; ಮಾತ್ರವಲ್ಲ, ತಾವು ಸ್ವತಂತ್ರ ವಿಚಾರವಾದಿಗಳೆಂದೂ ವ್ಯಕ್ತಗೊಳಿಸಿದರು............... ಅವರು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸಂಚರಿಸಿ ಜಗತ್ತಿಗೆ ಇನ್ನೂ ತಿಳಿಯದಿರುವ ವೀರಶೈವ ತತ್ವಜ್ಞಾನ ಮತ್ತು ಅನುಭವಗಳ ಬಗೆಗೆ ಇದ್ದ ತಮ್ಮ ಉದ್ಬೋಧಕವಾದ ವಿಚಾರಗಳುಳ್ಳ ಪ್ರಬೋಧಕವಾದ ಮಾತುಗಳನ್ನು ತಿಳಿಸಿ ಅದನ್ನು ಪ್ರಚಾರಗೊಳಿಸುವರೆಂದು ನಾನು ಆಶಿಸುವೆನು. ಅವರ ಇಂದಿನ ವ್ಯಾಖ್ಯಾನದ ಪರಿಣಾಮವು ನನ್ನಲ್ಲಿ ಧ್ವನಿಗುಡುತ್ತಲಿದೆ. ಸ್ವಾಮಿಗಳು ಇಂದಿನ ಮಾತುಗಳನ್ನು ಲೇಖದಲ್ಲಿರಿಸಬೇಕೆಂದು ಬಿನ್ನವಿಸುತ್ತೇನೆ." ಶ್ರೀ ಕುಮಾರಸ್ವಾಮಿಗಳವರ ವಿಷಯದಲ್ಲಿ ವಿದ್ವನ್ಮಣಿಗಳ ಮನ್ನಣೆಯ ಮಾತುಗಳ ರೀತಿಯು ಇಂತಹದಿರುವದು.

ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ತತ್ವಜ್ಞಾನಗಳ ತುಲನಾತ್ಮಕ ಮೇಳ ದೊಡನೆ ವೀರಶೈವ ತತ್ವಜ್ಞಾನದ ವಿವೇಚನೆಯನ್ನು ಶ್ರೀ ಕುಮಾರಸ್ವಾಮಿಗಳು ಮದ್ರಾಸದ ಅಖಿಲ ಭಾರತ ತತ್ವಜ್ಞಾನ ಸಮ್ಮೇಳನದಲ್ಲಿ ಮಾಡಿದ ಬಳಿಕ

ಆಗಲೇ ಆ ವ್ಯಾಖ್ಯಾನವನ್ನು ಅಚ್ಚುಗೊಳಿಸಬೇಕೆಂದು ಆಗ್ರಹಪೂರ್ವಕವಾಗಿ ತಿಳಿಸಿದ ಅನೇಕ ಸ್ನೇಹಿತರು ಮತ್ತೂ ಮತ್ತು ಬರೆದು ಕೇಳಿದ್ದರಿಂದ ಅದರಂತೆಯೇ ಈ ಭಾಗದ ಮಹಾಜನಗಳೂ ಒತ್ತಾಯ ಪಡಿಸಿದ್ದರಿಂದ ಅದನ್ನು ವಿಸ್ತರಿಸಿ ೧೯೪೧ನೆಯ ಇಸವಿಯ ಮಾರ್ಚ ತಿಂಗಳಲ್ಲಿ ಅಚ್ಚುಗೊಳಿಸಿ ಅದನ್ನು ಪ್ರಕಟಿಸಲಾಯಿತು. ಅಂದಿನಿಂದ ಈವರೆಗೂ "Veershaiva Weltan-shauung" ಎಂದು ಹೆಸರಿಟ್ಟಿದ್ದ ಈ ಚಿಕ್ಕ ಗ್ರಂಥದ ಬಗೆಗೆ ಅನೇಕ ಪ್ರಶಂಸೆಗಳು ಬಂದಿರುತ್ತವೆ. ಅಲಿಗಡದ ವ್ಯಾಖ್ಯಾನವೂ ಅಚ್ಚಾಯಿತು. ಇದಲ್ಲದೆ ಪ್ರೊಫೆಸರ ಎಂ. ಆರ್. ಸಾಖರೆ ಎಂ. ಎ., ಟಿ. ಡಿ. (ಕ್ಯಾಂಟಬ್) ಅವರು ಪ್ರಕಟಿಸಿದ ಲಿಂಗ ಧಾರಣ ಚಂದ್ರಿಕೆಯ ಬಗೆಗೆ "Quintessence of Lingayat Religion" ಎಂಬ ಹೆಸರಿನಲ್ಲಿ ಅತ್ಯುತ್ತಮವಾದ ವಿಸ್ತೃತವಾದ ಒಂದು ವಿಮರ್ಶೆಯೂ ಪ್ರಕಟವಾಯಿತು. ಅದನ್ನೋದಿ ಅದೇ ಮಾದರಿಯಲ್ಲಿ "The Secrets of Spiritual Life" ಎಂಬ ಹೆಸರಿನ ತಮ್ಮ ಗ್ರಂಥದ ವಿಮರ್ಶೆ ಮಾಡಲು ಲಾಹೋರಿನ ಗವ್ಹರ್ನಮೆಂಟ ಓರಿಯಂಟಲ್ ಕಾಲೇಜದ ಪ್ರಿನ್ಸಿಪಾಲರಾದ ಡಾಕ್ಟರ ಮೋಹನಸಿಂಗ ಎಂ. ಎ., ಪಿ. ಎಚ್‌ಡಿ., ಡಿ. ಲಿಟ್. ಅವರು ಒಂದು ಬಿನ್ನಹ ಪತ್ರವನ್ನು ಬರೆದು ತಮ್ಮ ಗ್ರಂಥವನ್ನು ಕಳಿಸಿದರು. ಅದರ ಬಗೆಗೆ "Divina Mensura" ಎಂಬ ಇನ್ನೊಂದು ಅತ್ಯಂತ ಶ್ರೇಷ್ಠವಾದ ವಿಮರ್ಶೆಯನ್ನು ಬರೆದು ಪ್ರಕಟಿಸಲಾಯಿತು. ಇದಾದ ಬಳಿಕ ಶ್ರೀ ಕುಮಾರಸ್ವಾಮಿಗಳು "Nisus in Veerashaivism" ಎಂಬ ಹೆಸರಿನ ಮತ್ತೊಂದು ಲೇಖವನ್ನು ಬರೆದರು. ಈ ಲೇಖಗಳೆಲ್ಲ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆಯಲ್ಲಿ ಅಚ್ಚಾದವು. ತತ್ವಜ್ಞಾನ ಸಮ್ಮೇಳನದಲ್ಲಿ ಮಾಡಿದ ವ್ಯಾಖ್ಯಾನಗಳ ಸಾರಾಂಶವನ್ನು "Prabuddha Bharata" "Vision" ಎಂಬ ಪತ್ರಿಕೆಗಳು ಅಚ್ಚುಗೊಳಿಸಿದವು. ಇವನ್ನೆಲ್ಲ ಓದಿದ ಮಹನೀಯರೂ ವೀರಶೈವ ತತ್ವಜ್ಞಾನದ ಬಗೆಗೆ ಇಷ್ಟು ಸರಿಯಾಗಿ ತಿಳಿವಳಿಕೆಯನ್ನುಂಟು ಮಾಡಿಕೊಡುವ ಬರಹಗಳೇ ಇಲ್ಲ. ಅವನ್ನೆಲ್ಲ ಕೂಡಿಸಿ, ಇನ್ನೂ ಕೆಲವನ್ನು ಆಂಗ್ಲ ಭಾಷೆಯಲ್ಲಿ ಬರೆದು ಅಚ್ಚುಗೊಳಿಸಬೇಕೆಂದು ಅನೇಕ ಸಲ ಒತ್ತಾಯಪಡಿಸ ಹತ್ತಿದ್ದರಿಂದ ಶ್ರೀ ಕುಮಾರಸ್ವಾಮಿಗಳು ಒಂದು ಉದ್ಗ್ರಂಥವನ್ನು ಬರೆದಿರುವರು. ಆದರೆ ಯುದ್ಧಜನ್ಯ ಭೀಕರ ಪರಿಸ್ಥಿತಿಯಿಂದ ಕಾಗದಗಳ ತುಟಾಗ್ರತೆ ಬೆಳೆದು ಈಚೆಗೆ ದುಡ್ಡು ಕೊಟ್ಟರೂ ಸರಿಯಾದ ಕಾಗದಗಳು ಸಿಗದೆ ಇರುವ ಪರಿಸ್ಥಿಯುಂಟಾದ ಮೂಲಕ ಆ ಮುದ್ರಣ ಕಾರ್ಯವನ್ನು ಕೊನೆಗಾಣಿಸಲಾಗಲಿಲ್ಲ.

ಶ್ರೀ ಕುಮಾರಸ್ವಾಮಿಗಳವರ ಇಂಗ್ಲಿಷ ಲೇಖಗಳು ಪ್ರಕಟವಾದ ಬಳಿಕ ತತ್ವಜ್ಞಾನ ಸಮ್ಮೇಳನಗಳ ಅವರ ಸ್ನೇಹಿತರು ವೀರಶೈವ ತತ್ವಜ್ಞಾನದ ವಿಷಯವಾಗಿ ಒಳ್ಳೇ ಗೌರವ ಆದರಗಳನ್ನು ವ್ಯಕ್ತಗೊಳಿಸಿ ಬರೆದಿರುವರು.

'ವೀರಶೈವ ವೆಲ್ಟನ್ ಶಾಂಗ' ದ ಮತ್ತು ಉಳಿದ ಲೇಖನಗಳ ವಿಚಾರಸರಣಿ ಅವನ್ನು ಮಂಡಿಸಿರುವ ರೀತಿ ಇವುಗಳ ಬಗೆಗೆ ಪ್ರಶಂಸನಾಪರವಾದ ಅನೇಕ ವಿಮರ್ಶಾತ್ಮಕ ಪತ್ರಗಳೂ ಲೇಖಗಳೂ ಬಂದಿರುವವು. ಅಂಥವುಗಳನ್ನು ಪತ್ರಿಕೆಗಳೂ ಪ್ರಕಟಗೊಳಿಸಿರುತ್ತವೆ. ಹೀಗೆ ತಮ್ಮ ಸದಭಿಪ್ರಾಯಗಳನ್ನು ಕೊಟ್ಟ ಪಂಡಿತರಲ್ಲಿ ಮತ್ತು ಪತ್ರಿಕೆಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ತಿಳಿಸದೆ ಇರಲಾಗದು. ಪ್ರೊಫೆಸರ ಆರ್. ಡಿ. ರಾನಡೆ ರೀಡರ ಇನ್ ಫಿಲಾಸಫಿ ಅಲಹಾಬಾದ ಯುನಿವ್ಹರ್ಸಿಟಿ ಅಲಹಾಬಾದ, ಪ್ರೊಫೆಸರ ಡಿ. ಡಿ. ವಡೇಕರ ಎಂ. ಎ. ಫರ್ಗ್ಯೂಸನ್ ಕಾಲೇಜ ಪೂನಾ, ಡಾಕ್ಟರ ಬಿ. ಎಲ್. ಅತ್ರೇಯ ಎಂ. ಎ., ಡಿ. ಲಿಟ್. ಬನಾರಸ ಹಿಂದೂ ಯುನಿವ್ಹರ್ಸಿಟಿ, ಪ್ರೊಫೆಸರ ಜೆ. ಸಿ. ಬ್ಯಾನರ್ಜಿ ಎಂ. ಎ. ಅಶುತೋಷ ಕಾಲೇಜ ಕಲಕತ್ತಾ, ಪ್ರೊಫೆಸರ ಅನಿಲ ಕುಮಾರ ಸರ್ಕಾರ ಎಂ. ಎ. ರಾಜೇಂದ್ರ ಕಾಲೇಜ ಛಪ್ರಾ (ಬಿಹಾರ), ಡಾಕ್ಟರ ಕೆ. ಸಿ. ವರದಾಚಾರ್ಯ ಎಂ. ಎ., ಪಿ. ಎಚ್‌ಡಿ. ವೆಂಕಟೇಶ್ವರ ಓರಿಯಂಟಲ್ ಇನ್ಸಟೀಟ್ಯೂಟ ತಿರುಪತಿ, ಎಸ್. ಎಸ್. ಸೂರ್ಯನಾರಾಯಣಶಾಸ್ತ್ರಿ ಎಂ. ಎ., ಬಿ. ಎಸ್ ಸಿ. (ಆಗ್ಸ್ಫನ್) ಬಾರ-ಆ್ಯಟ್-ಲಾ. ರೀಡರ ಇನ್ ಫಿಲಾಸಫಿ ಮದ್ರಾಸ ಯುನಿವ್ಹರ್ಸಿಟಿ, ಡಾಕ್ಟರ ಪಿ. ಎಂ. ಮೋದಿ ಎಂ. ಎ., ಪಿ. ಎಚ್‌ಡಿ. (ಕೀಲ ಯುನಿವ್ಹರ್ಸಿಟಿ) ಸಮಲದಾಸ ಕಾಲೇಜ ಭಾವನಗರ, ಡಾಕ್ಟರ ಪಿ. ಟಿ. ರಾಜು ಎಂ. ಎ.. ಪಿ. ಎಚ್‌ಡಿ., ಶಾಸ್ತ್ರಿ ಆಂಧ್ರ ಯುನಿವ್ಹರ್ಸಿಟಿ ವಾಲ್ಟೆರ, ಜಿ. ಪರಮಶಿವಯ್ಯನವರು ಬಿ. ಎ., ಎಲ್‌ಎಲ್. ಬಿ. ಹಾಯಕೋರ್ಟ ಜಜ್ಜ ಬೆಂಗಳೂರ, ರೆವ್ಹರಂಡ ಪ್ರೊಫೆಸರ ಎಮಿಲ್ ಗೆಟಿಯರ ಎಸ್. ಜೆ. ಸೆಕ್ರೆಡ್‌ಹಾರ್ಟ ಕಾಲೇಜ ಶಂಬಗನೂರ (ಮಧುರಾ ಜಿಲ್ಹೆ), ರೆವರಂಡ ಪ್ರೊಫೆಸರ ಜೆ. ಎಫ್. ಬಟ್ಲರ ಕ್ರಿಶ್ಚಿಯನ್ ಕಾಲೇಜ ಮದ್ರಾಸ, ರೆವರಂಡ ಡಬ್ಲೂ. ಪರಸ್ಟನ್ ಹಾರ್ಡವಿಯೋಕ ಮೈಸೂರ, ರೆವರಂಡ ಆರ್. ಈ. ಡೆವಿಸ ರಟ್ಲಂಡ (ಇಂಗ್ಲಂಡ), ರೆವ್ಹರಂಡ ಜಿ. ಡಾಂಡೆ ಎಸ್. ಜೆ. ಕಲಕತ್ತಾ, ಜೆ. ಈ. ಶಕಲಾತವಾಲಾ ಮುಂಬಯಿ, ಡಾಕ್ಟರ ಮೋಹನಸಿಂಗ, ಶ್ರೀ. ಆರ್. ಎಚ್. ಪಂಡಿತ ಬಿ. ಎ. ಎಲ್‌ಎಲ್. ಬಿ., ಜೆ. ಪಿ. ಆನರರಿ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ ಮುಂಬಯಿ, ವ್ಹಿ. ಸುಬ್ರಹ್ಮಣ್ಯ ಅಯ್ಯರ ರಿಟಾಯರ್ಡ ಮೈಸೂರ ಯುನಿವ್ಹರ್ಸಿಟಿ ರಜಿಸ್ಟ್ರಾರ ಮೈಸೂರ, ಡಾಕ್ಟರ ಪಾಲ್ ಬ್ರಂಟನ್ ಮೈಸೂರ, ದಿವಾಣ ಬಹಾದ್ದೂರ ಕೆ. ಎಸ್. ರಾಮಸ್ವಾಮಿ ಶಾಸ್ತ್ರಿ ರಿಟಾಯರ್ಡ ಡಿಸ್ಟ್ರಿಕ್ಟ ಮತ್ತು ಸೆಸೆನ್ಸ ಜಜ್ಜ ಮದ್ರಾಸ, ಡಾಕ್ಟರ ಸಿ. ಕುನ್ಹನ ರಾಜಾ ಎಂ. ಎ., ಡಿ. ಫಿಲ್. ಮದ್ರಾಸ, ಡಾಕ್ಟರ ಬರ್‌ಟ್ರ್ಯಾಮ್ ಕೀಟ್ಲೆ ಆಲ್ಮೋರಾ ಇವರು ಬಹು ವಿಧವಾಗಿ ಈ ಚಿಕ್ಕ ಗ್ರಂಥವನ್ನು ಕೊಂಡಾಡಿರುವರು. Royal Asiatic Society Journal Bombay, Indian P. E. N. Bombay, Mythic Society Journal

Bangalore, Venkateshvar Oriental Institute Journal Tirupati, Jain Antiquary Ara, New India Calcutta, Brahma Vidya Madras, Vedanta Kesari Madras ಇವೇ ಮೊದಲಾದ ಪತ್ರಿಕೆಗಳೂ ಸಹ "ವೀರಶೈವ ವೆಲ್ಟನ್ ಶಾಂಗ" ಕಿರಿಹೊತ್ತಿಗೆಯನ್ನು ಮನವಾರೆ ಕೊಂಡಾಡಿವೆ.

ರೆವರಂಡ ಆರ್. ಈ. ಡೆವಿಸ್ ಯುಪಿಂಗ್ಹ್ಯಾಮ ರಟ್ಲೆಂಡ (ಇಂಗ್ಲಂಡ) ಅವರು 'ವೀರಶೈವ ವೆಲ್ಟನ್ ಶಾಂಗ' ಇದನ್ನು ಕುರಿತು ಹೀಗೆ ಬರೆದಿರುವರು:

**ನಾನು ಈ ಪುಟ್ಟ ಪುಸ್ತಕವನ್ನು ಒಳ್ಳೇ ಆಸಕ್ತಿಯಿಂದ ಮತ್ತು ಕುತೂಹಲದಿಂದ ಓದಿದೆನು......ಇದನ್ನು ಇಂಗ್ಲಂಡಿನಲ್ಲಿ ಪ್ರಕಟಗೊಳಿಸಬೇಕೆಂದೆಣಿಸಿ ಇದರ ಯೋಗ್ಯತೆಯನ್ನರಿಯಲು ನನಗಿಂತಲೂ ಹೆಚ್ಚು ಬಲ್ಲಿದರಾದವರಿಗೆ ಓದಲು ಕೊಟ್ಟೆನು. ಅವರೂ ಸಹ ಇದನ್ನು ಒಳ್ಳೇ ಅಭಿರುಚಿಯಿಂದ ಓದಿದರು. ಈ ಪುಸ್ತಕವು ಸ್ಪಷ್ಟ ಹಾಗೂ ಮನಂಬುಗುವ ರೀತಿಯಲ್ಲಿ ಬರೆಯಲ್ಪಟ್ಟಿರುವದರಿಂದ ನನಗೆ ಇದರಿಂದ ತುಂಬಾ ಸಹಾಯವಾಯಿತು.**

ಡಾಕ್ಟರ ಮೋಹನಸಿಂಗ ಲಾಹೋರ ಅವರ ಪ್ರಶಂಸೆಯಿದು:

**ಸ್ವಾಮಿಗಳು ಸಂಪೂರ್ಣವಾಗಿ ಮತ್ತು ಆಶ್ಚರ್ಯಗೊಳಿಸುವ ರೀತಿಯಲ್ಲಿ ವಿಕಾಸಗೊಂಡ ಬುದ್ಧಿಯನ್ನು ಭಾವನೆಯೊಡನೆ ಜೋಡಿಸುವದಾಗಿ ತಿಳಿಯುತ್ತದೆ. ಇದರಿಂದ ಅವರ ವಿಶಾಲವಾದ ಪ್ರಬೋಧವು ತಿಳಿದು ಬರುವದಲ್ಲದೆ ಪಾಶ್ಚಿಮಾತ್ಯ ಲೇಖಕರ ಯುಕ್ತಿವಾದ ( Rationalisation ) ದಲ್ಲಿರುವ ಕೊರತೆಗಳನ್ನು ತೋರಿಸಿರುವ ನಿಜವಾದ ಶಿವಶರಣರ ಕಲಿತನವೂ ಅವರಲ್ಲಿ ಕಂಡುಬರುತ್ತದೆ. ಸ್ವಾಮಿಗಳು ಇದೇ ಬಗೆಯಾದ ಇನ್ನೂ ಅನೇಕ ತುಲನಾತ್ಮಕ ಲೇಖಗಳನ್ನು ನಮಗಾಗಿ ಬರೆಯುವದಾದರೆ ಪೂರ್ವದೇಶಗಳು—ವಿಶೇಷವಾಗಿ ಶಕ್ತಿವಿಶಿಷ್ಟಾದ್ವೈತವನ್ನೊಳಗೊಂಡ ವೇದಾಂತವು 'ಜಗತ್ತಿನ ವಿಚಾರಗಳ ಮುಂದಾಳು' ಎಂಬ ಅನೇಕ ಶತಮಾನಗಳ ವರೆಗೆ ಪಡೆದಿದ್ದ ಸ್ಥಾನವನ್ನು ಇನ್ನು ಮುಂದೆಯೂ ಪಡೆಯುವದು**

ಪ್ರೊ. ಸುಬ್ರಹ್ಮಣ್ಯ ಅಯ್ಯರ ರಿಟಾಯರ್ಡ ಯುನಿವ್ಹರ್ಸಿಟಿ ರಜಿಸ್ಟ್ರಾರ ಮೈಸೂರು, ಅವರು ತಿಳಿಸುವ ಮಾತುಗಳಿವು:

**ವೀರಶೈವ ಧರ್ಮತತ್ವ ಅನುಭಾವ ಇವುಗಳ ವಿಷಯವಾಗಿ ಶ್ರೀ ಕುಮಾರ ಸ್ವಾಮಿಗಳು ಬರೆದ ಮೂರು ಅಪ್ರತಿಮವಾದ ಲೇಖನಗಳನ್ನು ಅತ್ಯಾನಂದ ಕುತೂಹಲಗಳಿಂದ ಪರಿಶೀಲಿಸಿದೆನು. ನನ್ನ ತಿಳಿವಳಿಕೆಯಿದ್ದ ಮಟ್ಟಿಗೆ ಆಧುನಿಕ ನಿಲವಿನಲ್ಲಿ ಭಾರತೀಯರ ಈ ತತ್ವವಿಭಾಗವನ್ನು ಅತ್ಯುತ್ತಮವಾಗಿ ವಿವರಿಸ ಬಲ್ಲ ಬರಹಗಳಿವು. ಸ್ವಾಮಿಗಳ ಮಾತುಗಳು ಸಂಪೂರ್ಣವಾದ ತಾತ್ವಿಕ ವಿವೇಚನೆಯನ್ನು ಮಾಡಿರುವದರಿಂದ ತುಂಬ ಪ್ರಶಂಸನೀಯವಾಗಿವೆ. ಅವು ಇತ್ತೀಚೆಗಿನ ಯುರೋಪದ ತಾತ್ವಿಕ ವಿವೇಚನೆಯನ್ನು ಬಳಸಿರುವಂತಿದೆ. ಲಿಂಗವಂತ ಧರ್ಮದ ಬಗೆಗೆ ಅಧಿಕೃತ ವಾಣಿಯಿಂದ ಬರೆದ ಭಾರತೀಯ ಲೇಖಕರ ವಿಚಾರಗಳನ್ನು ಬಳಸಿಕೊಂಡಿರುವವು. ಸ್ವಾಮಿಗಳಿಗಿರುವ ವಿಶಾಲವಾದ ಪಾಂಡಿತ್ಯ ಆಳವಾದ ವಿಚಾರ ಇವುಗಳಿಂದ ಶೈವಧರ್ಮವನ್ನು ಕುರಿತು ವಿವರಿಸುವ ಅತ್ಯಂತ ಪ್ರಖ್ಯಾತರಾದವರಲ್ಲಿ ಅವರನ್ನು ಗಣಿಸಲಿಕ್ಕೆ ಬೇಕಾಗುವದು.**

ಶಿವ, ಅವಸ್ಥಾ, ನಾನಾ ಬಗೆಯಾದ ರೂಪದಲ್ಲಿ ತೋರಿಹ ಲಿಂಗ, ಶೂನ್ಯ, ಲೀಲೆ, ಶರಣ ಇವನ್ನು ಅನೇಕ ವಿಧವಾಗಿ ವಿವರಿಸಿರುವದು ಪೌರ್ವಾತ್ಯ ಪಾಶ್ಚಿಮಾತ ತತ್ವಜ್ಞಾನಿಗಳಲ್ಲಿ ಭಾರತದ ಗೌರವವನ್ನು ಬೆಳಿಸುವದು. ಅವರ ಬರಹಗಳೆಲ್ಲ ಪುಸ್ತಕ ರೂಪವಾಗಿ ಪ್ರಕಟವಾದರೆ ಭಾರತ ದೇಶದ ವಿಶ್ವವಿದ್ಯಾಲಯಗಳಲ್ಲಿ ಅಭ್ಯಾಸಕ್ಕಾಗಿ ಅದನ್ನು ಗೊತ್ತಪಡಿಸಬಹುದು...... ಸ್ವಾಮಿಗಳ ಆಧುನಿಕ ವಿಮರ್ಶಾತ್ಮಕ ದೃಷ್ಟಿಗಾಗಿ ಘನವಾದ ಪಾಂಡಿತ್ಯಪ್ರಭೆಗಾಗಿ ನನ್ನ ಹೃತ್ಪೂರ್ವಕವಾದ ಧನ್ಯವಾದಗಳು.

ದಿವಾಣ ಬಹದ್ದೂರ ಕೆ. ಎಸ್. ರಾಮಸ್ವಾಮಿ ಶಾಸ್ತ್ರಿಗಳು ಮದ್ರಾಸ, ಅವರು ಹೇಳಿರುವದೇನಂದರೆ—

**ಶ್ರೀ ಕುಮಾರಸ್ವಾಮಿಗಳ ತಾತ್ವಿಕ ದೃಷ್ಟಿ ಧರ್ಮಾಸಕ್ತಿ ಇವು ತುಂಬಾ ಮೆಚ್ಚುಗೆಗೆ ಪಾತ್ರವಾಗಿವೆ. ಶಿವ-ಶಕ್ತಿವಿಚಾರವು ಧಾರ್ಮಿಕ ವಿಚಾರಗಳಲ್ಲಿರುವ ಎಲ್ಲ ಸಂದುಗಳನ್ನು ಸರಿಪಡಿಸಿರುತ್ತದೆ. ದೇವರಾಜ್ಯವು ಇಲ್ಲಿಯೇ ಇದೆ. ಅದು ಈಗಲೇ ನಮಗಿದೆ...... ಸ್ವಾಮಿಗಳು ಜೀವಪ್ರಪಂಚವು ಶಿವಪ್ರಪಂಚವಾಗಬೇಕೆಂದು ತಿಳಿಸುವ ಶುಭ ಸಂದೇಶವು ವೈಶಿಷ್ಟ್ಯತೆಯಿಂದ ಬೆರೆತು ಮನನೀಯವಾಗಿದೆ. ......ಲಿಂಗವು ಆಕಾರ ನಿರಾಕಾರಗಳ ತೊಡಕಿನ ವಿಚಾರವನ್ನು ಪರಿಹರಿಸಿದೆ. ಅದು ಭಾರತ ಭೂಮಿಯಲ್ಲಿ, ಅದು ಏಕೆ, ಇಡಿಯ ಜಗತ್ತಿನಲ್ಲಿ ಅತ್ಯಂತ ಪುರಾತನವಾದ ಮತ್ತು ಶ್ರೇಷ್ಠವಾದ ಧಾರ್ಮಿಕ ಚಿನ್ಹವಾಗಿರುವದು**

ಡಾಕ್ಟರ ಬರ್‌ಟ್ರ್ಯಾಮ್ ಕೀಟ್ಲೆ ಮಿರ್‌ಟೊಲಾ (ಆಲ್ಮೋರಾ ಜಿಲ್ಲಾ ಯೂ.ಪಿ.) ಅವರು ಹೀಗೆ ಬರೆದಿರುವರು:

**ನೀವು ಕಳಿಸಿದ ಲೇಖಗಳನ್ನು ಎಳ್ಳಷ್ಟೂ ಪಕ್ಷಪಾತವಿಲ್ಲದ ಬುದ್ಧಿಯಿಂದ ಮತ್ತು ಸರ್ವಸಾಮಾನ್ಯವಾದ ಲಕ್ಷದಿಂದ ಓದಿ ಹರುಷವನ್ನು ಹೊಂದಿದೆನು......... ಮೊದಲಿನಿಂದ ಕೊನೆಯವರೆಗೆ ನನ್ನ ಮನಸ್ಸನ್ನು ಸೆಳೆದ ಇಂಗ್ಲಿಷಭಾಷೆಯ ಪ್ರಭುತ್ವದ ಬಗೆಗೆ ನನಗುಂಟಾದ ಆಶ್ಚರ್ಯವನ್ನೂ ಆನಂದವನ್ನೂ ವ್ಯಕ್ತಗೊಳಿಸದಿರಲಾರೆನು. ಗಹನ ವಾದ ವಿಷಯಗಳನ್ನು ಕುರಿತು ಸರಳವಾಗಿ ಸುಲಲಿತವಾಗಿ ಸ್ಪಷ್ಟವಾಗಿ ಅತಿ ಎಚ್ಚರದಿಂದ ಬರೆದ ಆ ರೀತಿಗೆ ಪ್ರಾಮುಖ್ಯವಾಗಿ ನಾನು ಮೆಚ್ಚಿರುವೆನು. ಅದು ಬೆಲೆಗೆ ನಿಲುಕದು. ಅದನ್ನು ನೋಡಿ ನಾನು ಅತ್ಯಂತವಾಗಿ ಕೊಂಡಾಡಲೇ ಬೇಕು. ಅದರಂತೆ ತತ್ವಶಾಸ್ತ್ರದ ಮತ್ತು ವಿಜ್ಞಾನಶಾಸ್ತ್ರದ ಪಾರಿಭಾಷಿಕ ಶಬ್ದಗಳನ್ನು ಪ್ರಯೋಗಿಸಿರುವ ಅವರ ಜಾಣ್ಮೆ ಜಾಗ್ರತೆ ಕುಡಿಯಿಂದ ಕಡೆಯ ಪುಟದವರೆಗೆ ಕ್ರಮವಾಗಿ ಕೈಕೊಂಡಿರುವ ಸಾಮಾನ್ಯವಾದ ಅವರ ವಿಷಯ ವಿವೇಚನಾ ಪದ್ಧತಿ ಇವು ಗಮನಾರ್ಹವಾಗಿವೆ. ನನ್ನ ಮನವನ್ನಿವು ಎಳೆದಿವೆ. ಒಟ್ಟಾರೆ ಸಾವಕಾಶವಾಗಿಯೇ ಆಗಲಿ ಸಾಮರಸ್ಯ ಮಾರ್ಗದತ್ತ ತಿರುಗಿ ದವರಿಗೆ (ವೀರಶೈವ ವೆಲ್ಸ್ಪನ್ ಶಾಂಗ್) ಇದೊಂದು ಅತ್ಯುತ್ತಮವಾದ ಸ್ಪಷ್ಟವಾದ ಸುಮನೋಹರವಾದ ಕೈಗನ್ನಡಿಯಾಗಿದೆ.**

ಶ್ರೀ ಕುಮಾರ ಸ್ವಾಮಿಗಳವರ ಪಾಂಡಿತ್ಯ ಪ್ರತಿಭೆಗಳ ಬಗೆಗೆ ಡಾಕ್ಟರ ಪಾಲ್ ಬ್ರಂಟನ್ ಮೈಸೂರ, ಅವರು ತಳೆದಿರುವ ಗೌರವವಿದು:

**ಸ್ವಾಮಿಗಳವರ ಲೇಖನ ಭಾಷಣಗಳನ್ನು ಕುರಿತು ತಿಳಿಸುವುದಾದರೆ ಅವು ನಿಜ ವಾಗಿಯೂ ಆಧ್ಯಾತ್ಮಿಕ ವಿವೇಚನೆಯಲ್ಲಿ ಅವರಿಗಿರುವ ಸರ್ವೋತ್ಕೃಷ್ಟವಾದ ಸ್ವಾಮಿತ್ವ ವನ್ನು ವ್ಯಕ್ತಗೊಳಿಸುವವು. ಅವರು ತಮ್ಮಲ್ಲಿ ಭಕ್ತಿಭಾವನೆಯನ್ನೂ ಕರ್ತೃತ್ವಶಕ್ತಿಯನ್ನೂ**

ಬೆಳಿಸಿಕೊಂಡಿರುವರೆಂಬುದನ್ನರಿಯುಲು ನನಗೆ ಆನಂದವೆನಿಸುತ್ತದೆ. ......... ತುಲನಾತ್ಮಕ ದೃಷ್ಟಿಯಿಂದ ಧರ್ಮದ ಅಭ್ಯಾಸ ಮಾಡುತ್ತಿರುವ ನನ್ನಲ್ಲಿ, ಭಾರತದ ಪವಿತ್ರಾತ್ಮರ ಬಗೆಗೆ ಮನಸೋತಿರುವ ನನ್ನಲ್ಲಿ ಅವರ ಬರಹಗಳೆಲ್ಲ ಅಳುಕದ ಅತ್ಯಧಿಕವಾದ ಪರಿಣಾಮ ವನ್ನುಂಟು ಮಾಡಿವೆ.

ಡಾಕ್ಟರ ಸಿ. ಕುನ್ಹನ ರಾಜಾ ಅವರ ಅಭಿಪ್ರಾಯಗಳಿವು:

ಶ್ರೀ ಕುಮಾರಸ್ವಾಮಿಗಳು ೧೯೪೦ ನೆಯ ಡಿಸೆಂಬರ ತಿಂಗಳಲ್ಲಿ ಮದ್ರಾಸಿನಲ್ಲಿ ನೆರೆದ ೧೬ ನೆಯ ಅಖಿಲ ಭಾರತ ತತ್ವಜ್ಞಾನ ಸಮ್ಮೇಳನದ ಕಾಲಕ್ಕೆ ಸಾರ್ವಜನಿಕವಾಗಿ ಕೊಟ್ಟ ವ್ಯಾಖ್ಯಾನದಲ್ಲಿ 'ವೀರಶೈವ ವೆಲ್ಟನ್ ಶಾಂಗ' ಈ ವಿಷಯವನ್ನು ಕುರಿತು ಮಾತನಾಡಿದರು. ಆ ಸಮಯದಲ್ಲಿ ಸ್ವಾಮಿಗಳವರಿಗೆ ಕೇವಲ ೩೧ ವರ್ಷಗಳಾಗಿದ್ದವು. ಅವರು ಚಿಕ್ಕವರಿದ್ದು ಅವರ ಪ್ರಶಾಂತವಾದ ಮುಖಮುದ್ರೆ, ಅವರ ಭಾಷಾಪ್ರಭುತ್ವ, ಅವರ ವಾಗ್ಲಹರಿ, ಅವರ ವಿಷಯಗ್ರಹಣಶಕ್ತಿ ಇವೆಲ್ಲ ಆಗ ನೆರೆದ ಸಭಿಕರ ಮನಸ್ಸಿನ ಮೇಲೆ ಅಚ್ಚೊತ್ತಿದ ಪರಿಣಾಮವನ್ನುಂಟು ಮಾಡಿದವು...... ಪರಮತೀಯರ ಅಭಿಪ್ರಾಯಗಳನ್ನು ಒತ್ತಿ ನೂಕಿ ಸ್ವಮತದ ಅಭಿಪ್ರಾಯಗಳೇ ಶ್ರೇಷ್ಠವೆಂದು ಎತ್ತಿ ಹಿಡಿಯುವ ಮತಾಂಧತೆಯು ಸ್ವಾಮಿಗಳಲ್ಲಿರಲಿಲ್ಲ. ತಮ್ಮ ಮಾರ್ಗಕ್ಕೆ ಸಭಿಕರನ್ನು ಪರಿವರ್ತನೆಗೊಳಿಸಬೇಕೆಂಬ ಪ್ರಚಾರಕರ ದೃಷ್ಟಿಯೂ ಅವರ ಭಾಷಣದಲ್ಲಿ ಕಂಡು ಬರಲಿಲ್ಲ. ಆದರೆ ತಾವು ಪ್ರತಿನಿಧಿಯೆಂದೆನಿಸಿದ ಲಿಂಗವಂತ ಧರ್ಮದ ಸರ್ವಸಮನ್ವಯವಾದ ತತ್ವಗಳನ್ನು ಸುಲಲಿತವಾದ ಭಾಷೆಯಲ್ಲಿ ಪ್ರತಿಪಾದಿಸಿದವರು......... ಈ ತತ್ತ್ವ ಪ್ರತಿಪಾದನೆಯಲ್ಲಿ ಆಧುನಿಕ ಪಾಶ್ಚಿಮಾತ್ಯ ತತ್ವಜ್ಞಾನಿಗಳ ಮನನೀಯವಾದ ಅಭಿಪ್ರಾಯಗಳು ಸಮಾವೇಶವಾಗಿರುವವು.........

'ವೀರಶೈವ ವೆಲ್ಟನ್ ಶಾಂಗ' ಪುಸ್ತಕವನ್ನು ಓದಿ ಲಿಂಗವಂತರಲ್ಲಿ ಪ್ರಶಸ್ತಿಪತ್ರವನ್ನು ಕಳುಹಿಸಿದವರಲ್ಲಿ ಮಾನ್ಯ ನ್ಯಾಯಮೂರ್ತಿ ಜಿ. ಪರಮಶಿವಯ್ಯ ನವರು ಮೊದಲಿಗರು ಅವರು ತಿಳಿಸಿರುವ ಮಾತುಗಳು ಎಲ್ಲರ ಆನಂದವನ್ನು ಹೆಚ್ಚಿಸದಿರಲಾರವು:

ನವೀನ ತರಹದಿಂದ ಮತ್ತು ಅತಿ ಶ್ರೇಷ್ಠವಾದ ವಿವೇಚನೆಯೊಂದಿಗೆ ವೀರಶೈವ ತತ್ವಜ್ಞಾನವನ್ನು ತಿಳಿಯ ಪಡಿಸಿರುವ ಶ್ರೀ ಕುಮಾರಸ್ವಾಮಿಗಳವರಿಗೆ ಸಮಾಜವು ಅದೆಷ್ಟೇ ರೀತಿಯಿಂದ ಋಣಿಯಾಗಿದ್ದರೂ ಅದು ಕೇವಲ ಸ್ವಲ್ಪ ಮಾತ್ರ. ಶ್ರೀಗಳ ಈ ಗ್ರಂಥದಿಂದಾಗಿ ವೀರಶೈವ ತತ್ವಜ್ಞಾನವು ಜಗತ್ತಿನ ವಿವಿಧ ತತ್ವಜ್ಞಾನಗಳಲ್ಲಿ ಒಂದು ಪ್ರಾಮುಖ್ಯವಾದ ಸ್ಥಾನವನ್ನು ಪಡೆಯಿತು. ಸ್ವಾಮಿಗಳವರು ವೀರಶೈವ ತತ್ವಜ್ಞಾನವನ್ನು ಕುರಿತು ಇನ್ನು ಮುಂದೆ ಬರೆದು ಅಚ್ಚುಹಾಕಿಸಲಿರುವ ಅತ್ಯಂತ ಅನರ್ಘವಾದ ಅತ್ಯುತ್ತಮವಾದ ಗ್ರಂಥಗಳಿಗೆ ಈ ಹೊತ್ತಿಗೆಯು ಅಗ್ರಗಾಮಿಯಾಗಿರುವದೆಂದು ನಾನು ನಂಬಿರುವೆನು.

ಹೀಗೆ ಶ್ರೀ ಕುಮಾರಸ್ವಾಮಿಗಳವರ ಕೃತಿಗಳು ಯಾವತ್ತೂ ಜನರ ಮನ್ನಣೆಗೆ ಪಾತ್ರವಾಗಿವೆ. ಅವರೊಬ್ಬ ಘನವಾದ ಪಂಡಿತರು ವಿವೇಕಶಾಲಿ ಯಾದ ವ್ಯಾಖ್ಯಾತರು ವಿಚಾರವಂತರಾದ ತತ್ವಜ್ಞಾನಿಗಳು ಆಳವಾದ ಅನುಭಾವಿ ಗಳು ಎಂದು ತುಂಬಾ ಪ್ರಸಿದ್ಧಿಯನ್ನು ಪಡೆದಿರುವರು.

'ವೀರಶೈವ ದರ್ಶನ' ವೆಂದು ಹೆಸರಿಡಲಾದ ಈ ವ್ಯಾಖ್ಯಾನ ಸಂಗ್ರಹದಲ್ಲಿ ಶ್ರೀಕುಮಾರಸ್ವಾಮಿಗಳವರು ಬೇರೆ ಬೇರೆಡೆಗಳಲ್ಲಿ ಕೊಟ್ಟ ಕೆಲವು ವ್ಯಾಖ್ಯಾನಗಳ ಸಾರಾಂಶಗಳನ್ನು ಮಾತ್ರ ಕೊಡಲಾಗಿದೆ. ಶಕ್ಯವಿದ್ದಷ್ಟು ಮಟ್ಟಿಗೆ ಅವರ ಶಬ್ದಗಳಲ್ಲಿಯೇ ಸಾರಾಂಶವನ್ನು ಕೊಡಲು ಯತ್ನಿಸಿದೆ. ಸಂಕ್ಷಿಪ್ತ ಲಿಪಿಯ ಸೌಕರ್ಯವು ಕನ್ನಡದಲ್ಲಿಲ್ಲದ ಮೂಲಕ ಅವರ ಮೂಲ ಭಾಷಣಗಳ ಸೊಬಗನ್ನು ಈ ಸಾರಾಂಶಗಳಿಂದ ಓದುಗರು ಕಾಣರೆಂಬುದನ್ನು ನಾವು ಬಲ್ಲೆವು. ಆದರೂ ಸ್ವಾಮಿಗಳವರ ಮೂಲ ಭಾಷಣಗಳನ್ನು ಕೇಳದವರಿಗೆ ಈ ಸಾರಾಂಶಗಳಿಂದ ಅಲ್ಪಸ್ವಲ್ಪ ಉಪಯೋಗವಾಗಬಹುದೆಂಬ ನಂಬಿಗೆಯಿಂದ ಈ ಸಂಗ್ರಹವನ್ನು ಸಿದ್ಧಗೊಳಿಸಲಾಗಿದೆ. ಆದರೆ ಫ್ರಾನ್ಸ ದೇಶದ ಪಂಡಿತ ರೊಬ್ಬರು ಹೇಳಿದ "A printed speech is like dried flower; the substance indeed is there, but the colour is faded and the perfume, gone." ಎಂಬ ಮಾತುಗಳು ಇಲ್ಲಿ ಚೆನ್ನಾಗಿ ಒಪ್ಪುತ್ತವೆ ಎಂಬು ದನ್ನು ನಾವು ಮರೆಯಲಾರೆವು.

ಈ ಸಂಗ್ರಹದಲ್ಲಿ ಓದುಗರು ಸ್ಥೂಲವಾಗಿ ಮೂರು ವಿಭಾಗಗಳನ್ನು ಕಾಣಬಹುದು: (೧) ವೀರಶೈವ ತತ್ವಜ್ಞಾನ ಅನುಭಾವಗಳನ್ನು ಕುರಿತು ಮಾಡಿದ ಭಾಷಣಗಳು. (೨) ಸಾಹಿತ್ಯದ ಬಗೆಗೆ ಮಾಡಿದ ಭಾಷಣಗಳು. (೩) ಇಂಗ್ಲಿಷಿನಲ್ಲಿ ಅವರು ಮಾಡಿದ ಭಾಷಣ ಹಾಗು ಬರೆದ ಲೇಖನಗಳ ಅನುವಾದಗಳು ಎಂದು. ಈ ಸಂಗ್ರಹದ ಕೊನೆಗಿರುವ ಎರಡು ವಿಮರ್ಶಾ ತ್ಮಕ ಲೇಖಗಳು ನಾನು ಬರೆದವುಗಳು. ಈ ಸಂಗ್ರಹದಲ್ಲಿಯ ಲೇಖನ ಗಳನ್ನು ಇಲ್ಲಿ ಸೇರಿಸಲು ಅನುಮತಿಯನ್ನಿತ್ತುದಕ್ಕಾಗಿ ಆಯಾ ಪತ್ರಿಕೆಗಳ ಸಂಪಾದಕರಿಗೆ ಉಪಕೃತರಾಗಿರುವೆವು.

ಈ ಲೇಖಗಳನ್ನು ಸಿದ್ಧಗೊಳಿಸುವಾಗ ನಮಗೆ ನೆರವಾದ ಉಪನಿಷತ್ತು, ವಚನಶಾಸ್ತ್ರ, ಶ್ರೀ ಅರವಿಂದರ ಮತ್ತು ಪಾಶ್ಚಿಮಾತ್ಯ ತತ್ವಜ್ಞಾನಿಗಳ ಗ್ರಂಥಗಳು, ಶ್ರೀಮಾನ್ ದ. ರಾ. ಬೇಂದ್ರೆ ಅವರ "ಸಾಹಿತ್ಯ ಮತ್ತು ವಿಮರ್ಶೆ' ಎಂಬಿವೇ ಮೊದಲಾದ ಗ್ರಂಥಗಳನ್ನು ನಾವು ಇಲ್ಲಿ ನೆನೆಯದೆ ಇರಲಾರೆವು.

ಈ ವ್ಯಾಖ್ಯಾನ ಸಂಗ್ರಹಕ್ಕೆ ಒಪ್ಪುವ ತೆರದಲ್ಲಿ ಸುಂದರವಾದ ಮುನ್ನುಡಿ ಯೊಂದನ್ನು ಬರೆದು ಕೊಟ್ಟುದಕ್ಕಾಗಿ ಪ್ರೊಫೆಸರ್ ಶಿ. ಶಿ. ಬಸವನಾಳ ಎಂ. ಎ. ಧಾರವಾಡ ಅವರಿಗೆ ತುಂಬಾ ಋಣಿಯಾಗಿದ್ದೇವೆ.

ಮತ್ತು ಶ್ರೀಗುರುಸಿದ್ಧಪ್ರಭುದೇವರು ನವಕಲ್ಯಾಣಮಠ ಧಾರವಾಡ ಅವರ ರನ್ನ ಮಹೋತ್ಸವದ ಮಂಗಲ ಸಮಯದಲ್ಲಿ ಈ ಗ್ರಂಥವನ್ನು ಪ್ರಕಟಗೊಳಿಸಿದುದಕ್ಕಾಗಿ ಮಾನ್ಯ ನ್ಯಾಯಮೂರ್ತಿ ಜಿ. ಪರಮಶಿವಯ್ಯ ನವರು ಬಿ. ಎ., ಎಲ್‌ಎಲ್. ಬಿ. ಮೈಸೂರ ಹಾಯ್‌ಕೋರ್ಟ್ ಜಜ್, ಬೆಂಗಳೂರ ಅವರ ಉಪಕಾರ ಸ್ಮರಣೆಯನ್ನು ಮರೆಯಲಾರೆವು.

ನವಕಲ್ಯಾಣಮಠ ಧಾರವಾಡ } **ವೀರಭದ್ರಪ್ಪ ಕೊಪ್ಪಳ**

# ಮುನ್ನುಡಿ

ಇತ್ತೀಚೆಗೆ ವೀರಶೈವ ಮತದ ಬಗೆಗೆ ಹಾಗೂ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಯ ಬಗೆಗೆ ಅದೊಂದು ಕುತೂಹಲವು ಕನ್ನಡಿಗರಲ್ಲಿಯೂ ಭಾರತೀಯರಲ್ಲಿಯೂ ತಲೆದೋರುತ್ತಿದೆ. ಅದರಲ್ಲಿಯೂ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಗಳ ವಿಶಿಷ್ಟತೆಗೆ ಆ ಮತದ ಉದಾರ ತತ್ತ್ವಗಳೇ ತಳಹದಿ ಎಂಬ ತಿಳಿವಳಿಕೆ ಹರಡಿರುವದರಿಂದ ಆ ತತ್ತ್ವಗಳನ್ನು ತಿಳಿದುಕೊಳ್ಳುವ ಲವಲವಿಕೆ ಎಲ್ಲ ಕಡೆಯಲ್ಲಿಯೂ ಹಬ್ಬಿದೆ.

ಆದರೆ ಈ ಮತದ ತತ್ತ್ವಗಳನ್ನೂ ಅವುಗಳ ಬೆಳವಣಿಗೆಯ ಚರಿತ್ರೆಯನ್ನೂ ಸಂಪೂರ್ಣವಾಗಿ ಹಾಗೂ ಸರಿಯಾಗಿ ತಿಳಿದುಕೊಳ್ಳಲು ತಕ್ಕ ಸಾಧನಗಳು ಕನ್ನಡದಲ್ಲಾಗಲಿ ಇನ್ನಿತರ ಭಾಷೆಗಳಲ್ಲಾಗಲಿ ದೊರೆಯುವುದಿಲ್ಲ. ಅಷ್ಟೇ ಏಕೆ, ವೀರಶೈವರಲ್ಲಿಯೂ ಸಹ ತಮ್ಮ ಮತ ತತ್ತ್ವಗಳನ್ನು ಯಥಾರ್ಥವಾಗಿ ತಿಳಿದುಕೊಂಡವರು ವಿರಳವಾಗಿಯೇ ದೊರೆಯುವರೆಂಬುದು ವಿಷಾದಕರವಾದ ಸಂಗತಿಯಾಗಿದೆ. ಈ ಪರಿಸ್ಥಿತಿ ಉಂಟಾಗಲು ಕಾರಣಗಳಿಲ್ಲವೆಂದಲ್ಲ. ಸ್ವಲ್ಪ ಆಳವಾಗಿ ವಿಚಾರಿಸಿನೋಡಿದರೆ ವೀರಶೈವಮತವು ಆವುದೊಂದು ಗ್ರಂಥವನ್ನಾಗಲಿ, ಒಬ್ಬ ಆಚಾರ್ಯಪುರುಷನನ್ನಾಗಲಿ ಅವಲಂಬಿಸಿದೆ ಎಂದು ಹೇಳಲಾಗುವದಿಲ್ಲ. ಇದು ಮುಖ್ಯವಾಗಿ ಅನುಭವಮಾರ್ಗವಾದುದರಿಂದ ಬಸವಾದಿ ಪ್ರಮಥರಂತೆ ಹಲವು ಶರಣರ ನಡೆನುಡಿಗಳಲ್ಲಿ ಪುಟಗೊಂಡು, ಅನುಭವ ಮಂಟಪದಂತಹ ವಿಶಾಲವಾದ ತಳಹದಿಯ ಮೇಲೆ ಸ್ಥಾಪಿತವಾದ ಸಂಸ್ಥೆಗಳಲ್ಲಿ ಹೆಪ್ಪುಗೊಂಡು, ಕಾಲಾನುಕ್ರಮದಿಂದ ಬಹುಜನರ ಆಚರಣೆಯಲ್ಲಿ ರೂಪುಗೊಂಡು ಒಂದು ಮಟ್ಟಕ್ಕೆ ಬಂದಿದೆ; ಒಂದು ರೂಪವನ್ನು ತಾಳಿದೆ. ಬೌದ್ಧ, ವೈದಿಕ ಮುಂತಾದ ಹಲವು ಮತಗಳ ಶ್ರೇಷ್ಠ ತತ್ತ್ವಗಳೆಲ್ಲ ಇದರಲ್ಲಿ ಕಂಡುಬರಲು ಇದೇ ಮೂಲ ಕಾರಣ. ಆದರೆ ಬೇರೆ ಬೇರೆ ಮತಗಳಲ್ಲಿಯ ಒಳ್ಳೊಳ್ಳೆಯ ತತ್ತ್ವಗಳನ್ನು ಬುದ್ಧ್ಯಾಪೂರ್ವಕವಾಗಿ ಎತ್ತಿಕೊಂಡು ಈ ಹೊಸ ಪಂಥವನ್ನು ಕಟ್ಟಿದರೆಂದು ಯಾವ ಒಬ್ಬ ವ್ಯಕ್ತಿಯನ್ನು ಕುರಿತು ಹೇಳಲಿಕ್ಕೆ ಬರುವಂತಿಲ್ಲ. ಸ್ಥೂಲಮಾನದಲ್ಲಿ ಹೇಳುವುದಾದರೆ: ಬಸವಣ್ಣನವರ ಕಾಲಕ್ಕೆ ಅವರ ಪ್ರಚೋದನೆ. ಪ್ರೋತ್ಸಾಹಗಳ ಫಲವಾಗಿ ಈ ಮತದ ಮೂಲ ರೂಪರೇಷೆಗಳು ಕಲ್ಪಿತವಾದುವೆಂದು ಮಾತ್ರ ಹೇಳಬಹುದು. ಆದುದರಿಂದಲೇ ಈ ಮತದ

ತತ್ತ್ವಗಳನ್ನು ಚರಿತ್ರದ ದೃಷ್ಟಿಯಿಂದಲೇ ಅಭ್ಯಾಸ ಮಾಡಬೇಕಾಗುವುದು; ಈ ಸಮಾಜದ ಜನರ ಆಚರಣೆ-ನಂಬುಗೆ ಮುಂತಾದವುಗಳಿಂದಲೇ ಅವನ್ನು ಕಂಡು ಹಿಡಿಯಬೇಕಾಗುವದು. ಆ ಬಳಿಕವೆ ಮುಖ್ಯ ಮತಗ್ರಂಥಗಳೆಂದು ಹೇಳಲಾಗುವ ಪುಸ್ತಕಗಳನ್ನು ಪರಿಶೋಧಿಸಿ ತಿರುಳನ್ನು ಹೊರತೆಗೆಯಬೇಕು. ಇದು ಬಹು ಪ್ರಯಾಸದ, ಪರಿಶ್ರಮದ ಕಾರ್ಯ. ಅಲ್ಲದೆ ಇದರ ಯಥಾರ್ಥ ಪರಿಚಯ ವೀರಶೈವರಾಗಿ ಹುಟ್ಟಿ ಬೆಳೆದವರಿಗೆ, ವೀರಶೈವವನ್ನೇ ನಡೆನುಡಿಗಳಲ್ಲಿ ಆಚರಿಸುವವರಿಗೆ, ವೀರಶೈವವನ್ನು ಸೌಹಾರ್ದ ದೃಷ್ಟಿಯಿಂದ ಆರೈಯುವವರಿಗೆ ಹೆಚ್ಚು ಸಾಧ್ಯವೇ ಹೊರತು ಉಳಿದವರಿಗೆ ಸಾಧ್ಯವಿಲ್ಲವೆಂದು ಕಂಠೋಕ್ತವಾಗಿ ಹೇಳಬಹುದು. ಇತಿಹಾಸವು ನಮಗೆ ಗೊತ್ತಿದೆ, ಸಂಶೋಧನವನ್ನು ಯಾರು ಬೇಕಾದವರು ಮಾಡಬಹುದು— ಎಂದು ಹೊರಡುವವರಿಗೆ ಇದು ತೀರ ದುಃಸಾಧ್ಯವೆಂದೇ ಹೇಳಬಹುದು. ಬರಿಯ ಚಿಕಿತ್ಸಕ ಬುದ್ಧಿಯೊಂದೇ ಸಾಲದು.

ಇತ್ತೀಚಿಗೆ ವೀರಶೈವರೇತರರಲ್ಲಿ ಕೆಲವರು ಸಂಶೋಧನದ ನೆವದಲ್ಲಿ ವೀರಶೈವ ಮತವನ್ನು ಕುರಿತು ಹಲವು ಅಲ್ಲದಸಲ್ಲದ ಸಂದೇಹ-ಸಮಸ್ಯೆಗಳನ್ನು ಎಬ್ಬಿಸತೊಡಗಿದ್ದಾರೆ. ಬಹು ದಿನಗಳಿಂದಲೂ ಅಂಗೀಕೃತವಾಗಿದ್ದ ಸಂಗತಿಗಳು ನಂಬಲರ್ಹವಲ್ಲವೆಂಬ ಪ್ರಮೇಯಗಳನ್ನು ಹೂಡಿದ್ದಾರೆ. ವೀರಶೈವದ ಹಿನ್ನೆಲೆಯನ್ನು ಗುರುತಿಸುವ ಭರದಲ್ಲಿ ಇದು ವೈದಿಕ ಮತಕ್ಕೆ ಸಂಬಂಧಿಸಿದುದೆಂದು ಒಮ್ಮೆ, ಇದು ಬೌದ್ಧ ಮತಕ್ಕೆ ಸಮೀಪವಾದುದೆಂದು ಇನ್ನೊಮ್ಮೆ, ಇದು ನಾಥಪಂಥಾನುಸಾರವೆಂದು ಮಗದೊಮ್ಮೆ ಸ್ಥಾಪಿಸ ಹೋಗಿ ತಾವು ಗೊಂದಲದಲ್ಲಿ ಬಿದ್ದಿರುವರಲ್ಲದೆ ಇತರರನ್ನು ಅದರಲ್ಲಿ ನೂಕ ಹೋಗಿದ್ದಾರೆ. ಇದೆಲ್ಲ ಅರೆಪಕ್ವಾವ ಸಂಶೋಧನ ಬುದ್ಧಿಯ ಫಲವೇ ಹೊರತು ಮತ್ತೆ ಬೇರೆ ಇಲ್ಲ. ಎಲ್ಲ ಕಟ್ಟಡಗಳಿಗೂ ಇಟ್ಟಿಗೆ, ಕಲ್ಲು, ಗಾರೆ, ಕಟ್ಟಿಗೆ ಮುಂತಾದ ಸಾಮುಗ್ರಿಗಳು ಸಾಮಾನ್ಯವಾಗಿ ಬೇಕಾಗುವುದು ನಿಜವಾದರೂ, ಅವು ಬೇರೆಬೇರೆ ಕಡೆಗಳಿಂದ ಬರಬಹುದಾದರೂ ಅದರಿಂದಾಗಿ ಆ ಕಟ್ಟಡಗಳೆಲ್ಲ ಒಂದೇ ಆಗುವದಿಲ್ಲ. ಅದರಂತೆಯೇ ಆ ಸಾಮಾನ್ಯ ಸಾಮುಗ್ರಿಗಳ ಮೂಲಕವಾಗಿ ಆ ಕಟ್ಟಡದ ರೀತಿಯನ್ನಾಗಲಿ, ಉದ್ದೇಶವನ್ನಾಗಲಿ, ಬೆಲೆಯನ್ನಾಗಲಿ ಹೇಗೆ ಕಟ್ಟುವುದು ಅಸಮಂಜಸವೋ, ಒಂದು ಮತದ ತತ್ತ್ವಗಳನ್ನೂ ಆಚರಣೆಗಳನ್ನೂ ನಂಬುಗೆಗಳನ್ನೂ ಬೇರೊಂದು ಮತದಲ್ಲಿ ದೊರೆಯಬಹುದಾದ ಸಾಮಾನ್ಯ ಪಾರಿಭಾಷಿಕ ಶಬ್ದದಿಂದ ಅಥವಾ ಯಾವದೊಂದು ಆಚಾರ ಸಾಮ್ಯದಿಂದ ಅಳೆಯಹೋಗುವದು ಅಷ್ಟೇ ಅಸಮಂಜಸ. ಇದನ್ನು ಬೇರೆ ಹೇಳಬೇಕಾಗಿಲ್ಲ.

ಈ ಎಲ್ಲ ದೃಷ್ಟಿಯಿಂದ ವಿಚಾರಿಸುವಾಗ ನಮ್ಮವರೇ ನಮ್ಮ ಮತದ ಮೇಲೆ ಬರೆದ ಗ್ರಂಥಗಳು ದೊರೆತರೆ ಎಷ್ಟು ಹಿತಕರವೆಂಬುದು ಆರಿಗಾದರೂ ಹೊಳೆಯುವ ಮಾತಾಗಿದೆ. ಈ ಸಂದರ್ಭದಲ್ಲಿ ನಮ್ಮ ಸುದೈವದಿಂದ ಈಗ ೪-೫ ವರ್ಷಗಳಲ್ಲಿಯೆ ಡಾ. ಎಸ್. ಸಿ. ನಂದಿಮಠ ಎಂ. ಎ, ಪಿಎಚ್. ಡಿ., ಅವರು ಬರೆದ "ಹ್ಯಾಂಡ್‌ಬುಕ್ ಆಫ್ ವೀರಶೈವಿಜಂ" (Hand-book of Virashaivi'sm) ಎಂಬ ಶ್ರೀ. ಎಂ. ಆರ್. ಸಾಖರೆ ಎಂ, ಎ., ಟಿ. ಡಿ. ಅವರು ''ಲಿಂಗಧಾರಣ ಚಂದ್ರಿಕೆ" ಎಂಬುದಕ್ಕೆ ಬರೆದ ಸುದೀರ್ಘವಾದ ಉಪೋದ್ಘಾತವೂ, ಧಾರವಾಡದ ನವಕಲ್ಯಾಣ ಮಠದ ಶ್ರೀ. ಕುಮಾರ ಸ್ವಾಮಿಗಳ (The Virashaiva Weltanschaung) ದಿ ವೀರಶೈವ ವೆಲ್ಟನ್‌ಶಾಂಗ್ ಎಂಬ ಅವರು ಮಾಡಿದ ಚಿಕ್ಕದಾದರೂ ಒಳ್ಳೇ ಮಾರ್ಮಿಕವಾದ ಗ್ರಂಥಸ್ಥ ಭಾಷಣವೂ ನೆನಪಿಗೆ ಬರುತ್ತವೆ. ಇವೆಲ್ಲ ವೀರಶೈವದ ತಿರುಳನ್ನು ತಿಳಿಸುವ ಗ್ರಂಥಗಳಾಗಿವೆ. ಆದರೆ ಇವು ಮೂಲತಃ ಇಂಗ್ಲಿಷಿನಲ್ಲಿರುವದರಿಂದ ಇವುಗಳ ಉಪಯೋಗವು ಕನ್ನಡಿಗರಿಗೆಲ್ಲ ಆಗದಿರುವದು ವಿಷಾದಕರವಾಗಿದೆ.

ಈ ಕೊರತೆಯನ್ನು ಕೆಲಮಟ್ಟಿಗಾದರೂ ಹೋಗಲಾಡಿಸುವ ಪ್ರಯತ್ನವನ್ನು ನಾವು ಈ ಪ್ರಸ್ತುತ ಗ್ರಂಥದಲ್ಲಿ ಕಾಣಬಹುದು. ಇದರಲ್ಲಿ ಶ್ರೀ ಕುಮಾರ ಸ್ವಾಮಿಗಳು ಬೇರೆಬೇರೆ ಕಡೆಗಳಲ್ಲಿ ಮಾಡಿದ ಇಂಗ್ಲಿಷ ಭಾಷಣಗಳ ಅನುವಾದಗಳು ಕಂಡುಬರುತ್ತಿವೆ. ಹಾಗೂ ಇವುಗಳಲ್ಲಿ ಮದ್ರಾಸ ಮತ್ತು ಅಲಿಗಡಗಳಲ್ಲಿ ಅಖಿಲ ಭಾರತ ತತ್ತ್ವಜ್ಞಾನದ ಸಮ್ಮೇಳನಗಳಲ್ಲಿ ಮಾಡಿದ ಇಂಗ್ಲಿಷ ವ್ಯಾಖ್ಯಾನಗಳ ಅನುವಾದಗಳೂ ಅಡಕವಾಗಿವೆ. ಶ್ರೀ ಕುಮಾರಸ್ವಾಮಿಗಳ ಅನುಭವ, ವಿದ್ಯೆ, ಇಂಗ್ಲಿಷ ಭಾಷೆಯ ಮೇಲಿನ ಅವರ ಪ್ರಭುತ್ವ, ಪಾಶ್ಚಿಮಾತ್ಯ ತತ್ತ್ವಜ್ಞಾನದ ಬಗೆಗೆ ಅವರಿಗಿದ್ದ ಆಳವಾದ ಪರಿಚಯ ಇವುಗಳನ್ನು ಕುರಿತು ಭರತಖಂಡದ ಹಾಗೂ ಹೊರಗಿನ ವಿದ್ವಾಂಸರು ಮಾಡಿದ ಪ್ರಸಂಶೆಗಳು ಇರುವಾಗ ಅವುಗಳಿಗೆ ನನ್ನದೇನನ್ನೂ ಕೂಡಿಸುವ ಗೊಡವೆಗೆ ನಾನು ಹೋಗುವದಿಲ್ಲ. ಆದರೆ—ಶ್ರೀ ಕುಮಾರಸ್ವಾಮಿಗಳ ಬಹುಮುಖ್ಯವಾದ ಭಾಷಣಗಳನ್ನೇ ಶ್ರೀಯುತ ಕೊಪ್ಪಳ ವೀರಭದ್ರಪ್ಪ ಎಂ. ಎ. ಬಿ. ಟಿ., ಅವರು ಒಳ್ಳೆಯ ಸ್ವಾರಸ್ಯವಾಗಿ ಕನ್ನಡಿಸಿ ಕನ್ನಡ ಜನತೆಯ ಎದುರಿಗೆ ಇಟ್ಟು ಅತ್ಯಂತ ಉಪಕಾರ ಮಾಡಿದ್ದಾರೆ. ಅಲ್ಲದೆ ಶ್ರೀ ಕುಮಾರ ಸ್ವಾಮಿಗಳು ಮಾಡಿದ ಕೆಲವು ಕನ್ನಡ ಭಾಷಣಗಳ ಸಾರಾಂಶಗಳನ್ನೂ ಶ್ರೀ ಕೊಪ್ಪಳವರು ಇದರಲ್ಲಿ ಕೊಟ್ಟಿರುತ್ತಾರೆ. ಇವೆಲ್ಲವುಗಳನ್ನು ಓದಿದರೆ ಇವು ಭಾಷಾಂತರಗಳಿಂದಾಗಲಿ,

ಸಾರಾಂಶಗಳಿಂದಾಗಲಿ ತೋರುವುದಿಲ್ಲ. ಅಷ್ಟು ಸರಸವಾಗಿ ಸರಾಗವಾಗಿ ಓರನ್ನವಾಗಿ ಬರೆದವುಗಳಾಗಿವೆ. ಇದಕ್ಕಾಗಿ ಶ್ರೀ ಕೊಪ್ಪಳವರಿಗೆ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ಇವಲ್ಲದೆ ಶ್ರೀ ಕೊಪ್ಪಳವರು ತಾವೇ ಸ್ವತಂತ್ರವಾಗಿ ಬರೆದ ಚಾಮರಸನ ಮೇಲಿನ, ಹಾಗೂ ರೇವಣಸಿದ್ಧನ ಮೇಲಿನ ಲೇಖನಗಳೂ ಇದರಲ್ಲಿ ಸೇರ್ಪಡೆಯಾಗಿವೆ. ಅವುಗಳಲ್ಲಿ ಲೇಖಕರ ವಿಮರ್ಶಕ ಬುದ್ಧಿ, ವಿಷಯದ ಮೇಲಿನ ಅವರ ಹಿಡಿತ ಇವೆಲ್ಲವೂ ಚೆನ್ನಾಗಿ ಗೋಚರವಾಗುತ್ತಿವೆ.

ಈ ಲೇಖನಸಂಗ್ರಹವನ್ನು ಪ್ರಕಟಿಸಿದುದರಿಂದ ವೀರಶೈವರಿಗೂ ಇತರರಿಗೂ ಬಹಳ ಉಪಯುಕ್ತವಾಗುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ನವಕಲ್ಯಾಣ ಮಠದಿಂದ ಈ ಬಗೆಯ ಕಾರ್ಯ ಇನ್ನೂ ಹೆಚ್ಚಾಗಿ ಸಾಗಲೆಂದು ಹಾರೈಸುತ್ತೇನೆ.

ಶಿ. ಶಿ. ಬಸವನಾಳ.

# ವೀರಶೈವ ದರ್ಶನ

ಸಂಗ್ರಾಹಕರು: ಶ್ರೀ. ವೀರಭದ್ರಪ್ಪ ಕೊಪ್ಪಳ, ಎಂ. ಎ., ಬಿ. ಟಿ. ಧಾರವಾಡ.

[ಧಾರವಾಡದ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ಕರ್ನಾಟಕ ಶಾಲೆಯಲ್ಲಿ ಮಾಡಿದ ಭಾಷಣದ ಸಾರಾಂಶವಿದು.]



ಶಿವಶರಣರು ಸಾಹಿತಿಗಳಲ್ಲ; ಸತ್ಯಾನ್ವೇಷಿಗಳು. ಸತ್ಯದ ನೆಲೆಗಾಣಲು ಅವರು ಎಸಗಿದ ಹೋರಾಟದಲ್ಲಿ—ಅವರು ಕೈಕೊಂಡ ಸಾಧನೆಯ ಕ್ರಮದಲ್ಲಿ—ಅವರು ಹೊಂದಿದ ದೇವೋನ್ಮಾದದ ಸಿಬ್ಬೆರಗಿನಲ್ಲಿ—ಅವರ ಪುನೀತವಾದ ಹೃದಯದಿಂದ ಭಾವಭರಿತವಾಗಿ ಹೊರಹೊಮ್ಮಿದ ವಾಣಿಯು ದೈವೀವಾಣಿಯು ! ಇದುವೆ ಅವರ ವಚನಭಾಂಡಾರವು. ಇದು ಸಾಹಿತ್ಯದೃಷ್ಟಿಯಿಂದ ಬರೆದುದಲ್ಲವಾದುದರಿಂದ ಸಾಹಿತ್ಯದ ಒರೆಗಲ್ಲಿಗೆ ಇದನ್ನು ಹಿಡಿಯಲಾಗದು. ಅವರ ಈ ದೈವೀವಾಣಿಯು ಅಮೋಘವಾದುದರಿಂದ, ಇದು ಭಾವಶುದ್ಧಿಯಿಂದ ಬೆರೆತುದರಿಂದ, ಇದರಲ್ಲಿ ಭಾಷಾಶುದ್ಧಿಯು ಇರಲೆಬೇಕಾದುದು ಅವಶ್ಯವು. ಇಂತೀ ಶುದ್ಧಭಾಷೆಯಿಂದ ಬೆರೆತ ವಚನವಾಙ್ಮಯದಲ್ಲಿ ಸಾಹಿತ್ಯದ ಹಲಕೆಲವು ಲಕ್ಷಣಗಳು ಕಂಡುಬರುತ್ತಿದ್ದರೆ ಕೇವಲ ಸಾಹಿತ್ಯದೃಷ್ಟಿಯಿಂದಲೇ ಅದನ್ನು ಕುರಿತು ನಾವು ಇಂದು ಆಲೋಚಿಸುವಂತಿಲ್ಲ. ಸತ್ಯದ ಅನ್ವೇಷಣದಲ್ಲಿ ಶಿವಶರಣರೆಷ್ಟು ಮುಂದುವರಿದಿದ್ದರು ? ಅವರ ದೃಷ್ಟಿಕೋನವಾವುದು? ಅವರು ಕಂಡ ದರ್ಶನವೆಂತಹದು? ಎಂಬುದನ್ನು ಅರಿತುಕೊಳ್ಳುವುದು ವಚನಶಾಸ್ತ್ರದ ಅಭ್ಯಾಸದ ಮುಖ್ಯವಾದ ಉದ್ದೇಶವಾಗಿದೆ.

ಎಷ್ಟೋ ವಚನಗಳ ಅಭ್ಯಾಸಿಗರು ವಚನಗಳು ಕನ್ನಡ ಉಪನಿಷತ್ತುಗಳು, ವಚನಕಾರರು ಶಿವಾಗಮಗಳ ವಿಚಾರಕ್ಕಿಂತ ಮುಂದೆ ಹೋಗಿಲ್ಲ ಇತ್ಯಾದಿಯಾಗಿ ಅಭಿಪ್ರಾಯಪಡುತ್ತಾರೆ. ಆದರೆ ಶಿವಶರಣರು ಕಂಡುಂಡ ತತ್ವಗಳು ಉಪನಿಷತ್ತುಗಳು ಇಲ್ಲವೆ ಶಿವಾಗಮಗಳು ಪ್ರತಿಪಾದಿಸುವ ತತ್ವಗಳಿಗಿಂತ ಭಿನ್ನವಾದವುಗಳು ಎಂಬುದನ್ನು ಮರೆಯುವಂತಿಲ್ಲ. 'ಭೂಮಿ ಆಕಾಶ ಒಂದು ಜೀವನುದರ' ಎಂದು ಶ್ರೀಮದಲ್ಲಮಪ್ರಭುದೇವರು ಹೇಳುವ ವಚನದಲ್ಲಿ 'ಪಿಂಡಬ್ರಹ್ಮಾಂಡಯೋರೈಕ್ಯ'ವೆಂಬ ಅರ್ಥವಿದೆ.೧ ಅಪಾರವಾದ ಸೃಷ್ಟಿಯ ಮತ್ತು ಅಲ್ಪವೆಂದು ಕಲ್ಪಿಸುವ ದೃಷ್ಟಿಯ ಸಮ್ಮೀಳನವೂ ಈ ಮಾತಿನ ಹೃದಯದಲ್ಲಿ ಹುದುಗಿದೆ. ಸೃಷ್ಟಿಯು ಅಪಾರವಾದುದಾದರೂ ಕರಿಯು ಮಾನದಲ್ಲಡಗುವಂತೆ ದೃಷ್ಟಿಯಲ್ಲಡಗುವುದು. ಆದುದರಿಂದ ಸೃಷ್ಟಿ ಘನ; ದೃಷ್ಟಿಯು ಕಿರಿದೆನ್ನಬಹುದೇ ? ಬಾರದು. ಅಷ್ಟೇ ಏಕೆ ದೃಷ್ಟಿಯಿಂದಲೆ ಸೃಷ್ಟಿಯಾದುದು. ಸೃಷ್ಟಿಯ ಸಫಲತೆಯು ದೃಷ್ಟಿಯಿಂದಲೇ ! ಯಾವ ದೃಷ್ಟಿಕೋನವನ್ನಿರಿಸಿಕೊಂಡು ನಾವು ಸೃಷ್ಟಿಯನ್ನು ನೋಡುವೆವೋ ಅಂತೆ ಅದರ ಬಣ್ಣವು ಬದಲಿಸುವುದು. ಈ ದೃಷ್ಟಿಕೋನವೇ ದರ್ಶನವು. ಸೃಷ್ಟಿಯನ್ನು ಮಾರ್ಪಡಿಸಬೇಕು

೧ ಪ್ರ. ವ. ೨೦ ಪುಟ ೧೮.

ಎಂಬದರಿಂದ ದೃಷ್ಟಿಯನ್ನು ಬದಲಿಸುವುದು ಮೇಲಾದುದು. ಯಾಕಂದರೆ ದೃಷ್ಟಿಯು ಹಿಡಿತದಲ್ಲುಳಿದಂತೆ ಸೃಷ್ಟಿಯು ಉಳಿಯದು. ಇದು ಅಲ್ಲದೆ ಸೃಷ್ಟಿಯನ್ನಳೆಯುವ ಸಾಮರ್ಥ್ಯವುಳ್ಳ ದೃಷ್ಟಿಯು ಕಿರಿದಲ್ಲ; ದೃಷ್ಟಿಯ ಅಳತೆಗೆ ಒಳಪಡುವ ಸೃಷ್ಟಿಯು ಹಿರಿದಲ್ಲ. ದೃಷ್ಟಿಯ ಅಳತೆಗೆ ಒಳಪಟ್ಟುದೆಲ್ಲ ದಿಟವಾದುದು. ಹಾಗೆ ಒಳಪಡದುದೆಲ್ಲ ಸಟಿಯಾದುದು. ಈ ದೆಸೆಯಿಂದಲೇ ದೃಷ್ಟಿಗೆ ದಿಟವೆಂದೂ ಸೃಷ್ಟಿಗೆ ಸಟಿಯೆಂದೂ ಹೇಳಲಾಗುವುದು.೨ ಒಂದರಲ್ಲಿ ಹಲವು ಹಲವರಲ್ಲಿ ಒಂದಾಗಿ ತೋರುವ ಈ ಧರ್ಮವು ಈ ಸೃಷ್ಟಿದೃಷ್ಟಿಗಳಲ್ಲಿದೆ. ಒಂದರಲ್ಲಿ ಹಲವು, ಹಲವರಲ್ಲಿ ಒಂದಾಗಿರುವ ಈ ಸಂದಿಲ್ಲದ ಸೇರುವೆಯೇ ಸತ್ಯ; ಕುರುಹು ಮಾತ್ರವಾಗಿ ತೋರುವ ಸೃಷ್ಟಿಯನ್ನು ಇದ್ದಕ್ಕಿಂದ್ದಂತೆ ಕಾಣಲು ಅವಶ್ಯವಾಗಿ ಬೇಕಾದುದು ಈ ಸತ್ಯ ದೃಷ್ಟಿ, ಸಮ್ಯಕ್‌ದೃಷ್ಟಿ, ಸುಜ್ಞಾನದೃಷ್ಟಿ !

ಇಷ್ಟವು ಸೃಷ್ಟಿಯ ಕುರುಹು. ಇಷ್ಟದಲ್ಲಿ ಸೃಷ್ಟಿಯಂತೆ ದೃಷ್ಟಿಯೂ ಸೇರುವೆಗೊಳ್ಳುವುದು. ಆದುದರಿಂದ ಇಷ್ಟದಲ್ಲಿ ದೃಷ್ಟಿ (The thing-in-appearance) ಸೃಷ್ಟಿ (The thing-in-being)ಗಳ ಸಂಗಮವಿದೆ. ಅನಿಷ್ಟದಿಂದ ಸೃಷ್ಟಿಯನ್ನು ಸಟಿಗೊಳಿಸದೆ ಸಮ್ಯಕ್ ದೃಷ್ಟಿಯಿಂದ ಅದು ಸತ್ಯವಾಗಿ ಪರಿಣಮಿಸಬೇಕು. ಇಷ್ಟಮಯವಾದ 'ಚಿತ್' ಶಕ್ತಿಗೆ ಸೃಷ್ಟಿ ದೃಷ್ಟಿಗಳೆಂಬ ಕವಲು. ಚಿತ್ತಿನ ಸಹಾಯದಿಂದ, ಸಮ್ಯಕ್ ದೃಷ್ಟಿಯ ನೆರವಿನಿಂದ ದೃಷ್ಟಿಗೆ ಎದುರಾಗಿರುವ ಸೃಷ್ಟಿಯನ್ನು ನೋಡುವುದೇ ದರ್ಶನ. ಶಿವಶರಣರ ಈ ಸಮ್ಯಕ್ ದೃಷ್ಟಿಯು ಅದು ಹೇಗೆ ಸೃಷ್ಟಿಯನ್ನು ಕಂಡಿತು, ಅವರ ಈ ದೃಷ್ಟಿಕೋನದಲ್ಲಿ ಉಂಟಾದ ಕ್ರಾಂತಿಯು ಎಂತಹದು ಎಂಬವು ವಿಚಾರಾರ್ಹ ಸಂಗತಿಗಳು.

ಈ ದೃಷ್ಟಿಯ ಬಗೆಗೆ ವಿಚಾರಿಸಿದವರಲ್ಲಿ 'ಜ್ಞಾನಾದೇವತು ಕೈವಲ್ಯಮ್' ಎಂದು ಹೇಳುವ ವೇದಾಂತಿಗಳು ಕೇವಲ ಜ್ಞಾನಕ್ಕೆ ಮಹತ್ವವಿತ್ತರು. ಬ್ರಹ್ಮ ಸತ್ಯ ಜಗನ್ಮಿಥ್ಯಾವಾದದ ಅವರ ಮತದಲ್ಲಿ ಭಕ್ತಿ ಕರ್ಮಗಳಿಗೆ ಅವಕಾಶವಿಲ್ಲ. ಶಂಕರಾದಿಗಳು ಬಾದರಾಯಣ ಬ್ರಹ್ಮಸೂತ್ರಗಳಿಗೆ ಅದ್ವೈತಪರವಾಗಿ ವ್ಯಾಖ್ಯಾನವನ್ನು ಬರೆದು ವೇದಾಂತವನ್ನು ಪ್ರಚುರಪಡಿಸಿದಂದಿನಿಂದ ಲೋಕವು ಅದ್ವೈತಕ್ಕೆ ಮೆಚ್ಚಿತು. ಅಂತ್ಯಮೆಟ್ಟಿನಲ್ಲಿ ನಿಲುಕಬಹುದಾದ ಅನುಭವವು ಆರಂಭದ ಮೆಟ್ಟಿನಲ್ಲಿ ಸಾಧಕರ ಕೈಸೆರೆಯಾಗುವದೆಂತು ? ಸಾಧನ ದೃಷ್ಟಿಯಿಂದ ವೇದಾಂತವು ಎಲ್ಲರಿಗೆ ನಿಲುಕುವ ವಿಷಯವಲ್ಲ. ಆದರೂ

ಜ್ಞಾನಿ ಮೋಹಿಪುದಂದವೆ । ಪರಮ ತತ್ವ ।
ತಾನೆ ನಿತ್ಯಾನಂದ ನಿಜರೂಪವೆನಿಪ ॥
ಹರುಷ ವಾರಿಧಿ ಶಂಭುಲಿಂಗದೊಡವೆರೆದು ।
ಮರಳಿ ಸಂಸೃತಿಯ ವಾಸನೆಯ ನೆರೆ ಸುಟ್ಟ ।
ಪರಿಕಲ್ಪನೆಗೆಟ್ಟ ಸಹಜವಳವಟ್ಟ ॥ ೩

ಎಂದು ನಿಜಗುಣ ಶಿವಯೋಗಿಗಳು ಹೇಳುವ ಮಾತುಗಳು ಅರ್ಥವತ್ ಸುಜ್ಞಾನಿಯಾದವನಿಗೇ ಮೈಗೊಳ್ಳುವುವಲ್ಲದೆ ಅಜ್ಞಾನಿಯಾದವನಿಗೆ ಅಳವಡಲಾರವು. ಅದ್ವೈತ ಸಾಧನೆಯ ಆರಂಭದ ಮೆಟ್ಟಿನಲ್ಲಿ ದೃಷ್ಟಿಗೆ ಸತ್ಯವೆಂದು ತೋರುವ ಸೃಷ್ಟಿಯು ಸಟೆಯೆಂಬ ಬಲಿತ ಭಾವವುಳ್ಳ ಅದ್ವೈತ ಸಾಧಕರಿಗೆ ನೇತಿ ನೇತಿ ಎಂದು ಸಾರುವದೇ ಮುಖ್ಯ ಮಂತ್ರವಾಗಿ ಬಿಡುವುದು. ಆದರಿಂದ ಹೋರಾಟವೆಂಬುದು ಅವರಿಗೆ ಗೊತ್ತಿಲ್ಲ. ಹೋರಾಟವಿಲ್ಲದುದರಿಂದ ಅವರು ಹೇಡಿಗಳಾಗಿ 'ಅಹಂ ಬ್ರಹ್ಮಾಸ್ಮಿ' ಎಂದೆನ್ನುತ್ತ ವಿಶ್ವೋತ್ತೀರ್ಣವಾದ ಆತ್ಮನನ್ನು ಒಪ್ಪದೆ ಭಕ್ತಿಲಂಡರಾದರು.

ಅದ್ವೈತ ದರ್ಶನದ ಈ ಲೋಪ ದೋಷಗಳನ್ನು ಅರಿತುಕೊಂಡ ಜ್ಞಾನೇಶ್ವರಾದಿ ಸಂತರು ಭಕ್ತಿಮಾರ್ಗದೊಡನೆ ಅದ್ವೈತಸಾಧನೆಯಾಗುವದೆಂಬುದನ್ನು ಕಂಡುಕೊಂಡರು. ಶಂಕರಾದಿಗಳು ವಿಶ್ವಾಂತರ್ಗತ ಆತ್ಮನನ್ನು ಮಾತ್ರ ಒಪ್ಪಿದರೆ ಜ್ಞಾನೇಶ್ವರಾದಿಗಳು ವಿಶ್ವೋತ್ತೀರ್ಣವಾದ ಆತ್ಮನನ್ನು ಒಪ್ಪಿಕೊಂಡು ಅಂಥ ಆತ್ಮನ ಶಕ್ತಿಪಾತಪ್ರಯೋಗ (Divine Grace) ವಿಲ್ಲದೆ ಅದ್ವೈತ ಸಾಧನೆಯಾಗದೆಂದು ಮನಗಂಡರು. ಶಕ್ತಿಪಾತ ಪ್ರಯೋಗವನ್ನು ಹೊಂದಲಿಕ್ಕೆ ಭಕ್ತಿಯೇ ಸೋಪಾನವೆಂಬುದೂ ಅವರ ತಿಳಿಗೆ ಹೊಳೆಯಿತು. ಅಂತೆಯೇ,

ಭಕುತಿಯ ಪಾಲಿಸು ಜೀಯಾ । ಮುಂದೆ
ಮುಕುತಿ ಕೊಡುವಿಯಂತೆ ನೀನೊಲಿದಿರಲು ॥

ಎಂದು ವಿಜಯ ವಿಠ್ಠಲದಾಸ ಮುಂತಾದವರು ಭಕ್ತಿಯ ಘನತೆಯನ್ನು ಅನೇಕ ತೆರನಾಗಿ ಕೊಂಡಾಡಿರುವರು. ಇವರು ಜ್ಞಾನದ ಜೊತೆಗೆ ಭಕ್ತಿಯನ್ನು ಬೆರೆಸಿಸಿದರೂ ಜ್ಞಾನಕ್ಕೆ ಇವರಲ್ಲಿ ಆಧಿಕ್ಯವಿಲ್ಲ; ಗೌಣಸ್ಥಾನವಿದೆ. ಮಾಡುವವನೂ ನೀಡುವವನೂ ದೇವನು. 'ದಾತಾ ಭೋಕ್ತಾ ಮಹೇಶ್ವರಃ' ಜೀವನು ಕೇವಲ ಆವನ ಕೈಗೊಂಬೆ. ಹೆಂಗಳೆಯಂತೆ ಬೇಡುವುದೊಂದೇ ಗೊತ್ತವನಿಗೆ! 'ಬೇಡುವುದು ಹೇಡಿತನದಾದರ್ಶವಹುದಹುದು । ಮಾಡದಲೆ ಬೇಡಿದರೆ ಕೊಡುವವರದಾರು?' ಎಂಬುದು ಹೊಳೆದಾಗಲ್ಲವೇ ಕರ್ತೃತ್ವ ಶಕ್ತಿಯ ಮೇಲ್ಮೆಯು ತಿಳಿದು ಬರುವುದು?

ಕರ್ಣಾಟಕದ ವೀರ ಶಿವಶರಣರು ಮಾತ್ರ ಕರ್ತೃತ್ವ ಶಕ್ತಿಯ ಅನುಭವಗಂಡವರು. ಅವರು ಕೇವಲ ಕ್ರಿಯಾ ಪ್ರಧಾನವಾದಿಗಳು. ಕ್ರಿಯಾಪ್ರವೃತ್ತಿಗಿರುವಷ್ಟು ಮಹತ್ವವು ಜ್ಞಾನಕ್ಕಾಗಲಿ ಭಕ್ತಿಗಾಗಲಿ ಅವರಲ್ಲಿಲ್ಲ. ಕ್ರಿಯೆಯು ಶಕ್ತಿಯನ್ನವಲಂಬಿಸಿರುವುದರಿಂದ ಅವರ ದರ್ಶನದಲ್ಲಿ ಶಕ್ತಿಯ ಕೂಲಂಕಷ ವಿವೇಚನೆಯಿದೆ. ವಸ್ತುವಿನಲ್ಲಿ ಶಕ್ತಿಯು ನೈಜವಾಗಿರುವಂತೆ ಶಿವನಲ್ಲಿ ಅವಿನಾಭಾವಸಂಬಂಧದಿಂದ ಅದು ನೈಜವಾಗಿದೆ. ಜೀವನು ದೇವನಾಗಬಯಸಿದರೆ ಬೀಜದಲ್ಲಡಗಿದ ಶಕ್ತಿಯು ಬಗೆಬಗೆಯಾಗಿ ವಿಕಾಸಗೊಳ್ಳಬೇಕು. ಅದು ಅನೇಕ ತೆರನಾಗಿ ಪರಿ

ಸ್ಫುಟಗೊಳ್ಳಬೇಕು. ವೀರಶೈವರು ವಿಕಾಸಗೊಳ್ಳುವ, ಪರಿಸ್ಫುಟಗೊಳ್ಳುವ ಇಂಥ ಶಕ್ತಿಯನ್ನು ಎದುರಿಟ್ಟು ತಮ್ಮ ದರ್ಶನವನ್ನು ಮುಂದು ಮಾಡಿದರು.

ಬಿಂದು ಬಿನ್ನಾಣದೊಳಗಂದವಿಟ್ಟಿಹ ಕಳಾ ।
ನಂದ ಪೂರ್ಣೋದಯದ ಜ್ಞಾನನಿರತ ॥೪

ಇತ್ಯಾದಿಯಾದ ಮಾತುಗಳಲ್ಲಿ ಅವರು ವಸ್ತು (Matter) ಗತವಾದ, ಮನ (Mind) ದಲ್ಲಿ ಹುದುಗಿದ, ಮತ್ತು ಘನ ( Super-mind ) ದಲ್ಲಿ ಅಡಕವಾದ ಶಕ್ತಿಯ ಸ್ವರೂಪವನ್ನು ಅದೆಷ್ಟು ಚೆನ್ನಾಗಿ ತಿಳಿದುಕೊಂಡಿದ್ದರೆಂದು ಗೊತ್ತಾಗುತ್ತದೆ. ಶಿವಶಕ್ತಿ ಸಂಪುಟದಲ್ಲಿ ಶಿವನು ಪ್ರಕಾಶಮಯನೂ ಶಕ್ತಿಯು ವಿಮರ್ಶಾತ್ಮಕಳೂ ಆಗಿರುವರು. 'ಅಹಂ ಅಸ್ಮಿ ಪ್ರಕಾಶೆ ನಂದಾಮಿ' ಎಂದು ಹೇಳುವಲ್ಲಿ ತನ್ನ ಸ್ವಯಂಪ್ರಕಾಶದ ನಿಚ್ಚ ಅರಿವು ಶಿವನಿಗಿದೆ ಎಂಬ ಅಭಿಮತ. ಈ ನಿಚ್ಚ ಅರಿವೇ ಎಚ್ಚರಿಕೆ-ವಿಮರ್ಶೆ-ಶಕ್ತಿ ! ಬಚ್ಚಬರಿಯ ಬೆಳಗಿನಲ್ಲಿ ನಿಚ್ಚವಾದ ಈ ಅಚ್ಚ ಎಚ್ಚರಿಕೆಯಿದೆ. ಲಿಂಗಮ್ಮ ಅಖಂಡೇಶ್ವರ ಇವರೇ ಮೊದಲಾದ ಶಿವಶರಣರು ಈ ಬಚ್ಚಬರಿಯ ಬೆಳಕನ್ನು ಅನೇಕ ಬಗೆಯಾಗಿ ಬಣ್ಣಿಸಿರುವರು. ಜ್ಞಾನಜ್ಯೋತಿ ಎಂದರೂ ಇದೇ ! ಇದಕ್ಕೆ ಜ್ಯೋತಿರ್ಲಿಂಗವೆಂದು ಇನ್ನೊಂದು ಹೆಸರು.

ಜ್ಯೋತಿ ಬೆಳಗುತಿದೆ ವಿಮಲ ಪರಂ । ಜ್ಯೋತಿ ಬೆಳಗುತಿದೆ ।
ಮಾತು ಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಲ । ಜ್ಯೋತಿ ಬೆಳಗುತಿದೆ ॥೫
ನೇತ್ರಪ್ರಕಾಶದ ಸೂತ್ರವಿಡಿದು ಜ್ಞಾನ
ಮಾತ್ರವಾಗಿಹ ಪ್ರಾಣಲಿಂಗದಂಘ್ರಿಗಳೆನ್ನ । ಸಲಹಲಿ ತಾನೆ ॥೬

ಎಂದು ಮೊದಲಾಗಿ ಹೇಳುವ ಮಾತುಗಳಲ್ಲೆಲ್ಲ ಈ ಬಚ್ಚಬರಿಯ ಬೆಳಗಿನ, ಈ ನಿಚ್ಚ ಅರಿವಿನ, ಈ ಸಮ್ಯಕ್‌ದೃಷ್ಟಿಯ, ಈ ವಿಮರ್ಶಶಕ್ತಿಯ ವರ್ಣನೆಯಿದೆ. ಸಮ್ಯಕ್ ದೃಷ್ಟಿಯು ತೆರೆದಂತೆ ಸೃಷ್ಟಿಯ ಅಪಾರವಾದ ಸಂಪತ್ತು ತೋರುತ್ತದೆ. ಸಮ್ಯಕ್ ದೃಷ್ಟಿಯೇ ಇರುಹಿನ ಕುರುಹು ( The thing-in-appearance). ದೃಷ್ಟಸೃಷ್ಟಿಯೇ ಕುರುಹಿನ ಇರುಹು. ( The thing-in-being ). ಸೃಷ್ಟಿದೃಷ್ಟಿಗಳಲ್ಲಿ ವ್ಯತ್ಯಾಸವಿಲ್ಲದಿರುವಂತೆ ಈ ಇರುಹು ಕುರುಹುಗಳಲ್ಲಿ ವ್ಯತ್ಯಾಸವಿಲ್ಲ. ದೃಷ್ಟಿಸೃಷ್ಟಿಗಳ ಸೇರುವೆಗೆ ಇಷ್ಟದ ಅವಶ್ಯಕತೆ ಇರುವಂತೆ ಇರುಹು ಕುರುಹುಗಳ ಒಂದುಗೂಡುವಿಕೆಗೆ ಅರುಹು ಅವಶ್ಯವಾದುದು. ಈ ಅರುಹು ಇರುಹು-ಕುರುಹುಗಳಿಗೆ ಸೇತುವೆಯಂತಿದೆ.

ಸೃಷ್ಟಿದೃಷ್ಟಿಗಳ ಈ ಸಂಗಮವನ್ನು, ಇರುಹು-ಕುರುಹುಗಳ ಈ ಹೊಂದಿಕೆಯನ್ನು ಆಗಮಕಾರರು ಶಕ್ತಿಭಕ್ತಿಗಳ ಬೆಸುಗೆ ಎಂದು ಕರೆದಿರುವರು. ಅವರಿಗೆ

---

೪ ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ I ೮-೧.

೫ ಕೈವಲ್ಯಪದ್ಧತಿ ೫-೫೯.

೬ ಮೈಲಾರ ಬಸವಪ್ಪನವರ ಶಿವಾನುಭವದರ್ಪಣ ಪದ. ೧೮

ಶಕ್ತಿಭಕ್ತಿಗಳಲ್ಲಿ ಶಕ್ತಿಗಿಂತ ಭಕ್ತಿಯೇ ಅಧಿಕವೆಂಬ ತಿಳಿ. ಅವರ ಮತದಲ್ಲಿ ಶಕ್ತಿಯು ಪ್ರವೃತ್ತಿಪರವಾದುದು; ಭಕ್ತಿಯು ನಿವೃತ್ತಿಪರವಾದುದು. ಶಕ್ತಿಯ ಕಾರ್ಯವು ಪ್ರಪಂಚದ ಸೃಷ್ಟಿಯಲ್ಲಿಯೂ ಭಕ್ತಿಯ ಕಾರ್ಯವು ಅದರ ಲಯದಲ್ಲಿಯೂ ವ್ಯಕ್ತಗೊಳ್ಳುವುದು. ಬಯಲು ರೂಪುಗೊಳ್ಳುವದು ಶಕ್ತಿವೈಚಿತ್ರ್ಯದಿಂದ, ರೂಪು ಬಯಲುಗೊಳ್ಳುವದು ಭಕ್ತಿವೈಚಿತ್ರ್ಯದಿಂದ. ಶಕ್ತಿಯ ಸ್ವಭಾವವು ಪ್ರಪಂಚ ಬೆಳೆಸುವ ಕೋರಿಕೆಯಲ್ಲಿ ವ್ಯಕ್ತವಾದರೆ ಭಕ್ತಿಯ ಸ್ವಭಾವವು ಅದನ್ನು ಅಳಿಸುವ ಬಯಕೆಯಲ್ಲಿ ವ್ಯಕ್ತವಾಗುವುದು. ಈ ದೆಸೆಯಿಂದ ಶಕ್ತಿಯು ಅಧೋಮುಖಿ, ಸಮಾಯೆ. ಭಕ್ತಿಯು ಊರ್ಧ್ವಮುಖಿ, ನಿರ್ಮಾಯೆ. ಯುಕ್ತಿಪ್ರಯುಕ್ತಿಗಳಿಂದ ತಾರ್ಕಣೆಗೆ ನಿಲುಕಿಸಿ ನೋಡಿದರೂ ಶಕ್ತಿಗಿಂತ ಭಕ್ತಿಯೇ ಅಧಿಕವಾಗುವುದು.೭ ಸೃಷ್ಟಿಯನ್ನು ಕಿರಿದು ಮಾಡಿ ದೃಷ್ಟಿಯನ್ನು ಹಿರಿದುಮಾಡುವ ಹವಣಿಕೆ ಇಲ್ಲಿದೆ. ಶಕ್ತಿಭಕ್ತಿಗಳೆಂಬವು ನಾಣ್ಯದ ಎರಡು ಮಗ್ಗಲುಗಳಿದ್ದಂತೆ; ಹಿರಿಕಿರಿದುಗಳನ್ನು ಅಲ್ಲಿ ಅರಸಲಾಗದು.

ಭಕುತಿ ರತಿಯು ಸಂಭಾಷಣೆಯಿಂದವೆ
ಮುಕುತಿಯು ಮರೆದೆನು ಕಾಯದ ಭೇದವ
ಪ್ರಕೃತಿಯು ತೊರೆದೆನು ಸುತ್ತಿದ ಮಾಯಾಪಾಶವ ಹರಿದೆನೆಲಾ॥
ಸುಕೃತಿಯಾಯ್ತು ನಿಮ್ಮಯ ನೆನಹಿಂದವೆ
ಮುಕುತಿಯು ಫಲಗಳ ದಾಂಟಿಯೆ ಬಂದೆನು
ಶಕುತಿಯಾದೆನು ಪ್ರಾಣಲಿಂಗಕ್ಕೆ ಮಿಗೆ ಬಲಿದಾರುತಿಯಾ ॥೮

ಎಂದು ಬಳಸುವ ಅಕ್ಕಮಹಾದೇವಿಯ ವೀರವಾಣಿಯಲ್ಲಿ ಶಕ್ತಿಭಕ್ತಿಗಳ ಬೆರಕೆಯು ಅದೆಷ್ಟು ಮನೋಹರವಾಗಿ ಒಡಮೂಡಿದೆ ಎಂಬುದು ವ್ಯಕ್ತವಾಗುತ್ತಿದೆ. ಆಗಮಕಾರರು ಶಕ್ತಿಯೇ ಭಕ್ತಿ; ಭಕ್ತಿಯೇ ಶಕ್ತಿ ಎಂದು ಸಮನ್ವಯಗೊಳಿಸಿ ಭಕ್ತಿಯಿಂದಲೇ ಮುಕ್ತಿಯೆಂದು ಹೇಳಿದರೂ'ಶಕ್ತಿಯು ಸಮಾಯೆ' ಎಂದು ಹೇಳಿ ಶಕ್ತಿಗೆ ಸಲ್ಲಬೇಕಾಗಿದ್ದ ಸ್ಥಾನವನ್ನು ಕಾಯ್ದಿರಿಸಲಿಲ್ಲ. ಆದುದರಿಂದ ಆಗಮಕಾರರಿಗೂ ಶಿವಶರಣರಿಗೂ ಈ ಮಾತಿನಲ್ಲಿ ಮೇಳವಿಲ್ಲ. ಶಿವಶರಣರು ಜ್ಞಾನಕ್ಕೆ ಇಲ್ಲವೆ ಭಕ್ತಿಗೆ, ಶಕ್ತಿಗೆ ಕೊಡುವಷ್ಟು ಸ್ಥಾನಗೌರವವನ್ನು ಕೊಟ್ಟಿರುವದಿಲ್ಲ.

ಶ್ರೀಮದ್ಬಸವಣ್ಣನವರು 'ಲಿಂಗವ ಗೆಲುವರೆ ಶರಣಸತಿ ಲಿಂಗಪತಿ ಎಂಬ ಒಂದಲಗು ಸಾಲದೇ ?'೯ ಎಂದು ಹೇಳುವ ಮಾತಿನಲ್ಲಿ 'ಅಲಗು'ಶಕ್ತಿಯ ಪರವಾಗಿದೆ. ಭಕ್ತಿಪರವಲ್ಲ. ಶರಣರಿಗೆ ಸೃಷ್ಟಿಯು ಶಕ್ತಿಯ ವಿಸ್ತಾರವೆಂಬ ಮನವರಿಕೆ. ಪೃಥ್ವಿಯಲ್ಲಿ ಕಾರಣಶಕ್ತಿಯೂ, ಅಪ್ಪುವಿನಲ್ಲಿ ಆಪ್ಯಾಯನ ಶಕ್ತಿಯೂ, ಅಗ್ನಿಯಲ್ಲಿ ದಾಹಕಶಕ್ತಿಯೂ, ವಾಯುವಿನಲ್ಲಿ ಸಂಚಲನಶಕ್ತಿಯೂ, ಆಕಾಶದಲ್ಲಿ

೭ ಮುಗ್ಗಿಯ ಮಾಯಿದೇವರ ಶಿವಾನುಭವಸೂತ್ರ II—೨೭-೩೧
೮ ಏ. ಶ. ಸ್ಥಲ I—೪-೧೮.
೯ ಬ. ವ. ೭ ಪು. ೧೧೪

ವ್ಯಾಪನ (ಕೂಡಿಟ್ಟುಕೊಂಬ) ಶಕ್ತಿಯೂ ಅಡಗಿರುವಂತೆ ಅನಂತಶಕ್ತಿಗಳಿಗೆ ಈ ಸೃಷ್ಟಿಯೇ ಆಧಾರ. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವುರು.'೧೦ ಎಂಬ ಅವರ ನಂಬುಗೆಯ ನುಡಿಯಲ್ಲಿ ಅನಂತ ಶಕ್ತಿಯುತವಾದ ಸೃಷ್ಟಿಯು ಆತ್ಮಶಕ್ತಿಪ್ರಕಟನೆಗೆ ಒಂದು ಉತ್ಕೃಷ್ಟವಾದ ಕಾರ್ಯರಂಗವೆಂಬ ತಿಳಿಹೊಳೆಯು ಹರಿದಿದೆ. ಅಲ್ಲದೆ ಈ ಅನಂತಶಕ್ತಿಗಳನ್ನು ಮೆಟ್ಟಿ ತುಳಿದು ಆಳುವ ಸಾಮರ್ಥ್ಯವು ಆತ್ಮನ ಇಚ್ಛಾಶಕ್ತಿಗೆ ಉಂಟು ಎಂಬ ಮಾತೂ ಇದರಿಂದ ಧ್ವನಿತವಾಗುತ್ತದೆ. ಇಹ-ಪರ, ಮರ್ತ್ಯಲೋಕ-ದೇವಲೋಕ ಎಂಬ ಇಬ್ಬಗೆಯ ಲೋಕವಿಚಾರವು ಅವರಿಗಿಲ್ಲ. ಕಷ್ಟಕ್ಕೆ ತಕ್ಕ ಫಲವು ಕೈಲಾಸದಲ್ಲಿ ದೊರಕುವುದು ಎಂದು ಹೇಳುವ ಮಾತಿನಲ್ಲಿ ಅವರಿಗೆ ವಿಶ್ವಾಸವಿಲ್ಲ. ಸಂಭವಿಸುವ ಸಂಗತಿಗಳನ್ನು ವಿವರಿಸಲಾರದವರು ಹೇಳುವ 'ಕರ್ಮ'ಎಂಬ ಶಬ್ದವು ಅವರ ಕೋಶದಲ್ಲಿಲ್ಲ. "ಬುದ್ಧಿಃ ಕರ್ಮಾನುಸಾರಿಣೀ"ಎಂಬುದು ಅವರಿಗೆ ಗೊತ್ತಿಲ್ಲ. 'ಕರ್ಮ ಬುದ್ಧ್ಯನುಸಾರಿ'ಎಂದೇ ಅವರ ವೀರನಂಬುಗೆ. ಅಲ್ಪ ಪುಣ್ಯಕ್ಕಿಂತ ಮಹಾ ಪುಣ್ಯವು ಲೇಸು ಎಂಬ ತಿಳಿಯು ಮಾನವನ ಬುದ್ಧಿಯನ್ನವಲಂಬಿಸಿದೆ. ಆದುದರಿಂದ ಬುದ್ಧಿಯ ಮೇಲ್ಮೆಯ ಮೇಲೆ ಕರ್ಮದ ಬೆಲೆಯಿದೆ. ನಿಶ್ಚಯಿಸುವ ಗುಣವುಳ್ಳ ಬುದ್ಧಿಯು ಕರ್ಮಕ್ಕೆ 'ಕರ್ತೃ'ವಾಗುವುದು. ಕರ್ಮವು ಬುದ್ಧಿಯ ಪರಿಣಾಮ. ಬುದ್ಧಿವಂತನಿಗೆ ಇಚ್ಛಾಶಕ್ತಿಯ ಸ್ವಾತಂತ್ರತೆ (Freedom of Will) ಇರುವುದರಿಂದ ಮಹಾಪಾಪಿಯಾದರೂ ಇಚ್ಛಾಶಕ್ತಿಯ ಬಲದಿಂದ ಮಹಾ ಪುಣ್ಯವಂತನಾಗಬಲ್ಲನು; ಜೀವಗುಣಗಳನ್ನು ಹಿಂಗಿಸಿಕೊಂಡು ದೇವನಾಗಬಲ್ಲನು. ಆದಕಾರಣವಾಗಿ ಕರ್ಮಭೂಮಿಯಾದ ಈ ಸೃಷ್ಟಿಗೆ ಇನಿತೊಂದು ಘನತೆ. ಅಲ್ಲಮಪ್ರಭುದೇವರ

'ಸತ್ತು ಹುಟ್ಟಿ ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ
ಬಾಲ ಭಾಷೆಯ ಕೇಳಲಾಗದು. ಸಾಯದ ಮುನ್ನ ಸ್ವಯವ
ನರಿಪಡೆ ದೇವನೊಲಿವ ನಮ್ಮ ಗುಹೇಶ್ವರ"೧೧

ಎಂಬ ಈ ವಚನವಾದರೂ ಪ್ರಬಲವಾದ ಇಚ್ಛಾಶಕ್ತಿಯ ಬಲದಿಂದ ಮರ್ತ್ಯಲೋಕವೇ ದೇವಲೋಕಕ್ಕೆ ಸಮವೆಂಬುದನ್ನು ಸಿದ್ಧಿಸುವುದು. ಅಲ್ಲಿ ಇದ್ದುದೇ ಇಲ್ಲಿ ಇದೆ; ಇಲ್ಲಿ ಇದ್ದುದೇ ಅಲ್ಲಿ ಇದೆ ಎಂದು ಹೇಳುವುದಾದರೆ ಅಲ್ಲಿಯದನ್ನು ಇಲ್ಲಿಯೇ ಮಾಡಿರಿ. ಅಲ್ಲಿದ್ದುದನ್ನು ಇಲ್ಲಿಯೇ ಕಾಣಿರಿ. ಇಲ್ಲಿದ್ದುದನ್ನು ಅಲ್ಲಿ ಹುಡುಕಬೇಡಿರಿ 'ಇಲ್ಲೇ ಕೈವಲ್ಯವು ಕಾಣಿರೋ ಮತ್ತಿನ್ನೆಲ್ಲೆಲ್ಲಿ ಹುಡುಕಿದರಿಲ್ಲ ನೋಡಿರೊ' ಎಂಬುದೇ ಶಿವಶರಣರ ವೀರಸಂದೇಶ.

ಜೀವನು ದೇವನಾಗಲಿಕ್ಕೆ ಹಂಬಲಿಸಿದರೆ ಈ ಸೃಷ್ಟಿಯನ್ನುಳಿದು ಅದನ್ನು

---

೧೦ ಬ. ವ. ೪೨ ಪು. ೨೪

೧೧ ಪ್ರ. ವ. ೧ ಪು. ೨೧೧.

ಬೇರೆಡೆಗೆ ಸಾಧಿಸಲೂ ಬಾರದು. ಅದರಂತೆ ವೇದಾಂತಿಗಳು ಹೀಯಾಳಿಸಿಬಿಟ್ಟ ಈ ಸೃಷ್ಟಿಯ ಮೇಲಿನ ಬಾಳುವೆಯನ್ನು ಮತ್ತು ಭೌತಿಕದೇಹದ ಆಧಿಕ್ಯವನ್ನು ಬೀಳುಗಳೆಯಲಾಗದು. 'ಕೂಡಲಸಂಗಮನೊಲಿಸ ಬಂದ ಪ್ರಸಾದ ಕಾಯವ ಕೆಡಿಸಲಾಗದು' ಪರಮಾತ್ಮನಿರಿಸಿಹ ಮರ್ತ್ಯಲೋಕವೆಂಬ ಈ ಟಂಕಸಾಲೆಯು-ಈ ಕಮ್ಮಟವು ಸತ್ಯವಾದುದು. ಕಳ್ಳ ನಾಣ್ಯವು ಎಲ್ಲಿಯೂ ಸಲುಗೆಗೆ ಸಲ್ಲುವಂತಿಲ್ಲ. ಚೊಕ್ಕ ನಾಣ್ಯಗಳಾಗಿ ಹೊರಬಿದ್ದರೆ ಅವು ಎಲ್ಲೆಡೆಯಲ್ಲಿಯೂ ಬಳಕೆಗೆ ಬರುವವು. ಶಕ್ತಿಸಂಪನ್ನನಾದ ಭಕ್ತನಾಗಬಯಸಿದರೆ ಕಳ್ಳನಾಣ್ಯಗಳಂತಿರದೆ ಚೊಕ್ಕನಾಣ್ಯಗಳಂತಿರಬೇಕು. ಅರ್ಥಾತ್ ಶೀಲಸಂಪಾದಕನಾಗಬೇಕು. ಆತ್ಮಗತಶಕ್ತಿಯ ಸದುಪಯೋಗಗಂಡವನಾಗಿರಬೇಕು. ಉತ್ತಮ ಶೀಲಸಂಪಾದನೆಯನ್ನು ಮಾಡಿಕೊಂಡವರಿಗೆ ಈ ಸೃಷ್ಟಿಯಲ್ಲಿಯೇ ಎಲ್ಲವೂ ಉಂಟು. ಅವರೆಂದಿಗೂ ಈ ಸೃಷ್ಟಿಯನ್ನು ಅಲ್ಲಗಳೆಯರು. ಇಂಥ ಸೃಷ್ಟಿಯಲ್ಲಿ ದೃಷ್ಟಿಯನ್ನರಳಿಸಿದವರು ಇಷ್ಟಮೂರ್ತಿಗಳಾಗುವರು. ಹೀಗೆ ಇಷ್ಟಮೂರ್ತಿಯಾಗುವುದರಲ್ಲಿಯೇ ಪ್ರಾತಿಭ ಚಕ್ಷುವು ಉನ್ಮೀಲನಗೊಳ್ಳುವುದು.

ಆಗಮಕಾರರಿಗೆ ಇಷ್ಟಲಿಂಗವು ಇಷ್ಟಿಗೆ (ಪೂಜೆಗೆ) ಅರ್ಹವಾದ ಲಿಂಗವೆನಿಸಿತ್ತು. ಅವರಿಗೆ ಅಂಗಳದೊಳಗಿನ ಲಿಂಗಕ್ಕೂ ಅಂಗದ ಮೇಲಿನ ಲಿಂಗಕ್ಕೂ ಅಭ್ಯಂತರವಿರಲಿಲ್ಲ. ಅಂತೆಯೇ ಅಂಗಳದಲ್ಲಿರಲಿ, ಅಂಗದ ಮೇಲಿರಲಿ ಅಥವಾ ಅಂಗೈಯಲ್ಲಿರಲಿ ಲಿಂಗವು ಅವರ ಇಷ್ಟಿಗೆ ತಕ್ಕುದಾಗಿತ್ತು. ಶರಣರ ಇಷ್ಟ ಲಿಂಗದ ಕಲ್ಪನೆಯೇ ಬೇರೆ. ಅಂಗಳದ ಲಿಂಗವ ಬಿಟ್ಟುಕೊಟ್ಟು, ಅಂಗದ ಮೇಲಿರಿಸಿ ಅಂಗೈಯೊಳಗಿಟ್ಟು ಪೂಜಿಸುವ ಲಿಂಗವನ್ನು ಅವರು ಧರಿಸಿದವರಾಗಿದ್ದರೂ ಸರ್ವತ್ರ ವ್ಯಾಪಿಸಿದ ಅನಿಷ್ಟ ನಿವಾರಣೆಯೇ ಅವರಿಗೆ ಇಷ್ಟಲಿಂಗದ ಪೂಜೆಯಾಗಿತ್ತು. ಈ ಅನಿಷ್ಟವು ಮನೆಯೊಳಗಿರಲಿ ಮನದೊಳಗಿರಲಿ, ಹೊರಗಿರಲಿ ಒಳಗಿರಲಿ ಅದೆಲ್ಲವೂ ಅಡಗಬೇಕು. ಇಷ್ಟವು ತುಂಬಾ ಒಡಮೂಡಬೇಕು. ಅನಿಷ್ಟನಿವಾರಣೆಗಾಗಿ ತನ್ನನ್ನು ಸಂಪೂರ್ಣವಾಗಿ ಮರೆತು ಹೋರಾಡಬೇಕು. ಈ ಹೋರಾಟಕ್ಕೆ ತಕ್ಕ ವೀರಪ್ರವೃತ್ತಿಯೂ ಧೀರೋದಾತ್ತಗುಣಗಳೂ ಅತ್ಯವಶ್ಯವಾಗಿ ಅಂಗವಿಸಬೇಕು. ಪುರುಷಪ್ರಯತ್ನವು ಎಡೆತಡೆಯಿಲ್ಲದೆ ತುಂಬಿದ ಮಹಾಪೂರದಂತೆ ಒಂದೇ ಸವನೆ ಸಾಗಬೇಕು. ಅದು ಇಲ್ಲದೆ ಆವ ಘನವಾದ ಕಾರ್ಯವೂ ಈಡೇರದು. ಸೃಷ್ಟಿಯ ಒಡಲೊಳಗಡಗಿದ ಹೇಲಿಯಮ್ (Halium), ರೇಡಿಯಮ್ (Radium) ಇವೇ ಮೊದಲಾದ ಅನರ್ಘ ಪದಾರ್ಥಗಳನ್ನು ಕಂಡುಹಿಡಿಯಲು ಅದೆಷ್ಟು ಧೈರ್ಯಸ್ಥೈರ್ಯಗಳು ಬೇಕಾದುವು! ಈ ದೃಷ್ಟಿಯಿಂದ ಪಾಶ್ಚಿಮಾತ್ಯರ ಪುರುಷಪ್ರಯತ್ನವನ್ನು ವೀರ ಶಿವಶರಣರ ವೀರವೃತ್ತಿಯೆಂದು ಹೇಳಬಾರದೇಕೆ? ಈ ವೀರವೃತ್ತಿಯ ಪುರುಷಪ್ರಯತ್ನವನ್ನು ಕುರಿತು ಆಂಗ್ಲ ಮಹಾಕವಿ ಶೆಲ್ಲಿಯು ಹೇಳುವ ಮಾತುಗಳು ಮನನೀಯವಾಗಿವೆ.

To suffer woes which Hope thinks infinite;
To forgive wrongs darker than death or night;

To defy, power, which seems omnipotent?
To love and bear: To hope till Hope creates
From its own wreck the thing it contemplates
Neither to change nor falter nor repent;
This, like the glory, Titan ! is to be
Good, great and joyous, beautiful and free;
This is alone Life, Joy, Empire and Victory ! ೧೩

ಇಲ್ಲಿ ಕವಿಯು ತಿಳಿಸುವ ಮಾತುಗಳು ಶಿವಶರಣರ ಶಕ್ತಿಯಪರವಾಗಿವೆ. ಬೇಕಾದವರು ಇದಕ್ಕೇ ವೇದಾಂತಿಗಳ ಮಾಯೆಯೆಂದೂ, ಸಾಂಖ್ಯರ ಪ್ರಕೃತಿಯೆಂದೂ, ಯೋಗಿಗಳ ಕುಂಡಲಿನೀಶಕ್ತಿಯೆಂದೂ ಕರೆಯಬಹುದು. ಪುರುಷಪ್ರಯತ್ನಕ್ಕೆ ತಡೆಯನ್ನೊಡ್ಡುವದು ಮಹಾಮಾಯೆಯ ಕಾರ್ಯ. ಇದಕ್ಕೆ ವೇದಾಂತಿಗಳಿನ್ನುವಂತೆ ಮಾಯಾಜಾಲ, ಭಕ್ತರೆನ್ನುವಂತೆ ಲೀಲಾವಿನೋದ, ಕರ್ಮಠರೆನ್ನುವಂತೆ ಪೂರ್ವಜನ್ಮದ ಕರ್ಮಫಲ ಎಂದೆನ್ನುತ್ತ ಕುಳಿತರೆ ಆಗಲಿಲ್ಲ. ಮಹಾಮಾಯೆಯನ್ನು ಎದುರಿಸಬೇಕೋ ಅಪ್ಪುಗೈಹಚ್ಚಿಕೊಂಡು ಕುಳಿತುಕೊಳ್ಳಬೇಕೋ ಎಂಬ ಪ್ರಶ್ನೆಯನ್ನು ಬಿಡಿಸದೆ ಗತ್ಯಂತರವಿಲ್ಲ. ಹೆದರಿ ಹೇಡಿಯಾಗಿ ಕುಳಿತುಕೊಳ್ಳುವುದು ಪಾಶ್ಚಿಮಾತ್ಯರ ಜೀವನಕ್ಕೆ ಸಲ್ಲದು. ಅವರ ಹಾಗೆ ಪುರುಷಪ್ರಯತ್ನಕ್ಕೆ ಒಂದು ಸ್ಥಾನವಿದೆ, ಒಂದು ಮಾನವಿದೆ ಎಂದು ತೋರಿಸುವುದು ಅವಶ್ಯವೆಂಬ ಮಾತನ್ನು ಒಪ್ಪಿದೆವಾದರೆ ಪುರುಷ-ಪ್ರಕೃತಿಗಳಲ್ಲಿ ನಿರಂತರವಾದ ಹೋರಾಟವಿದೆ ಎಂಬ ಸತ್ಯಕ್ಕೆ ನಿಲುಕುವೆವು.

ಶಿವಶರಣರು ಪುರುಷ-ಪ್ರಕೃತಿಗಳಲ್ಲಿಯ ಹೋರಾಟವನ್ನು ಒಪ್ಪಿಕೊಳ್ಳುವುದಲ್ಲದೆ, ಪಾಶ್ಚಿಮಾತ್ಯರಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿರುವರು. ಅವರು ಪುರುಷ-ಪರಬ್ರಹ್ಮರಲ್ಲಿಯೂ ಹೋರಾಟವಿದೆ ಎಂದು ಹೇಳುವರು.

ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯಾ
ಎರಡಾಳಿನ ಭಾಷೆಯ. ಕೊಲುವೆನೆಂಬ ಭಾಷೆ ದೇವನದು
ಗೆಲುವೆನೆಂಬ ಭಾಷೆ ಭಕ್ತನದು. ಸತ್ಯವೆಂಬ ಕೂರಲಗನೆ
ತಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವಾ ! ೧೪
ಕಟ್ಟಿದೆನೊರೆಯ ಬಿಟ್ಟು ಜಸ್ಸಿಗೆಯುರ, ಮುಟ್ಟಿಬಂದಿರಿದರೆ
ಒಸರಿಸುವನಲ್ಲ. ಓಡದಿರು ಓಡದಿರು ನಿಮ್ಮ ಶರಣರ ಮನೆಯ
ಬಿರುದಿನ ಅಂಕಕಾರ ಓಡದಿರು ಓಡದಿರು ಎಲೆ ಎಲೆ ದೇವಾ,
ಎಲೆ ಎಲೆ ಸ್ವಾಮಿ, ಎಲೆ ಎಲೆ ಪಂನೆ ಕೂಡಲಸಂಗಮದೇವಾ. ೧೫

೧೩ Prometheus Unbound( concluding lines ).
೧೪ ಬ. ವ. ೧೫೧ ಪು. ೧೨೫
೧೫ ಬ. ವ. ೧೨ ಪು. ೧೦೮

ಜೋಳವಾಳಿಯುವ ನಾನಲ್ಲಯ್ಯಾ. ವೇಳೆಯಾಳಿನವ ನಾನಲ್ಲಯ್ಯಾ.
ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ.
ಕೇಳು ಕೂಡಲಸಂಗಮದೇವಾ ಮರಣವೇ ಮಹಾನವಮಿ. ೧೫

ಎಂಬಿವೇ ಮೊದಲಾದ ವಚನಗಳಲ್ಲಿ ಅವರು ಕೇವಲ ಪುರುಷ- ಪರಬ್ರಹ್ಮರಲ್ಲಿಯ ಹೋರಾಟವನ್ನು ಸೂಚಿಸಿರುವರು. ಅಂಜಿಕೆಯು ಮರಣದ ಮುಂಗುರುತು. ಅಂಜಿಕೆಯಿಲ್ಲದೆ ನಡಿಸುವ ಅನಿಷ್ಟನಿವಾರಣೆಯ ಹೋರಾಟದಲ್ಲಿ ಮರಣವಾದರೆ ಶರಣರಿಗೆ ಅದುವೆ ಮಹಾನವಮಿ.

ಯಂತ್ರದೊಳಗಣ ಅಸುವು।
ಮಂತ್ರವೋಡಿಯ ಹಾವು।
ಅಂತರಂಗದೊಳದುವೆ ಅಮರ ಶಿಶುವು॥
ಎಲ್ಲರಂಜಿಪ ಸಾವು।
ಬಲ್ಲದವರಿಗೆ ಬೇವು ಬಲ್ಲವರಿಗೇನುಂಟು ಸಾವು ಹೂವು॥

ಎಂಬ ಅನುಭವೋಕ್ತಿಯಂತೆ ಸಾವನ್ನು ಹೂಮಾಡಿಕೊಳ್ಳಬೇಕಾದರೆ ಅಷ್ಟು ಕಲಿತನವು, ಅಷ್ಟು ಔದಾರ್ಯವು ಬೇಕು! ಸಚರಾಚರವೆಲ್ಲ ಕಿಂಚಿತ್ ಎಂದು ಹೇಳುವರಲ್ಲವೆ? ಅದು ಕಿಂಚಿತ್ ಎನಿಸುವುದು ಆರಿಗೆ? ತಾನು ಶುದ್ಧ ಶೀಲಸಂಪನ್ನನಾಗಿ ಆಚರಿಸಿದ್ದಲ್ಲದೆ ಅದು ಎಂದಿಗೂ ಕಿಂಚಿತ್ ಆಗಲರಿಯದು.

ಸಚರಾಚರ ಒಂದು ಕಿಂಚಿತ್।
ಚತುರ್ಯುಗವೆಂಬುದೊಂದು ಕಿಂಚಿತ್।
ಅಪ್ಪುದೆಂಬುದೊಂದು ಕಿಂಚಿತ್।
ಆಗದೆಂಬುದೊಂದು ಕಿಂಚಿತ್।
ತಾನು ಶುದ್ಧವಾದ ಶರಣಂಗೆ।
ಗುಹೇಶ್ವರನೆಂಬುದೊಂದು ಕಿಂಚಿತ್.॥೧೬

ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು!
ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು!
ಯದ್ಭಾವಂ ತದ್ಭವತಿ ಉರಿಬರಲಿ ಸಿರಿಬರಲಿ
ಬೇಕು ಬೇಡೆನ್ನೆನು ಆನು ನಿಮ್ಮ ಹಾರೆನು
ಮಾನವರ ಬೇಡೆನು ಆಣೆ ನಿಮ್ಮಾಣೆ ಕೂ. ಸಂ. ದೇವಾ!೧೭

ಎಂಬ ಶರಣರ ವೀರವಾಣಿಯು ಅಂತಃಶುದ್ಧಿಯ ಆಧಿಕ್ಯವಿಲ್ಲದೆ ಬಹಿಃಶುದ್ಧಿಯ ದೃಷ್ಟಿಯಿಲ್ಲದೆ ಹೊರಹೊಮ್ಮಲಾರದು. ಅಂತರಂಗ ಬಹಿರಂಗ ಶುದ್ಧಿಯ ಸಂಪಾದನೆಗೆ,

---

೧೫ ಬ. ವ. ೮ ಪು. ೧೦೮
೧೬ ಪ್ರ ವ. ೫೨ ಪು. ೩೧೪
೧೭ ಬ. ವ. ೫ ಪು. ೧೦೭

ಕರಕಷ್ಟವಾದ ಅನಿಷ್ಟನಿವಾರಣೆಗೆ ಅತ್ಯವಶ್ಯವಾಗಿರುವ ಹೋರಾಟದ ಹೆಜ್ಜಳವು ಅಷ್ಟಿಷ್ಟೆಂದು ಹೇಳಲಾಗದು. ಇಂಥ ಹೋರಾಟದ ಗಂಡುಗಲಿಯು ಹೋರಾಟವೆಲ್ಲ ಹರುಷವಾಗುವಷ್ಟು ಭಾವಭರಿತನಾಗಿ ಹೋರಾಡುವನು. ಹೋರಾಟದಲ್ಲಿ ಹರುಷ ವನ್ನು ಕಾಂಬ ಇಂಥ ದೃಷ್ಟಿಕೋನವು ಶಿವಶರಣರಿಗಿತ್ತು.

ಈ ವರೆಗಿನ ವಿವೇಚನೆಯಿಂದ ಸೃಷ್ಟಿಯನ್ನು ಕಾಂಬ ದೃಷ್ಟಿಕೋನವು ಮೂದೆರನೆಂದು ತಿಳಿಯಿತು. ಸೃಷ್ಟಿಕರ್ತನ ದೃಷ್ಟಿಯಲ್ಲಿ ಸೃಷ್ಟಿಯು ಒಂದೇ ಬಗೆಯು ದಿದ್ದರೂ ಯಾವ ಯಾವ ಜನರಲ್ಲಿ ಅಧಿಕಭಾವಾಪನ್ನ ನೋಟವಿರುವುದೋ ಆ ಆ ಜನರಿಗೆ ಅದು ಮಾಯಾಜಾಲವೆಂದು, ಲೀಲಾಭೂಮಿಯೆಂದು, ಕಲಹಕ್ಷೇತ್ರವೆಂದು ಮೂರು ತೆರನಾಗಿ ಕಂಡಿತು. ಇದರಲ್ಲಿ ಯಾರ ದೃಷ್ಟಿಯು ಸರಿಯಾದುದೋ ಅವರ ದರ್ಶನವು ಹಿರಿದಾದುದೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಆದರೆ ಸೃಷ್ಟಿಯ ರಚನೆಯಲ್ಲಿ ಕರ್ತನ ಗೊತ್ತುಗುರಿ, ಮುನ್ನೋಟ ಇವುಗಳನ್ನರಿತು ಅದನ್ನು ಈಡೇರಿ ಸಲು ಅನುವಾಗುವಂತೆ ಅದಕ್ಕಾಗಿ ತಕ್ಕ ಉಪಕರಣವಾಗುವಂತೆ ತನ್ನ ಇರವನ್ನು ಮಾರ್ಪಡಿಸಲು ಯಾರಿಗೆ ಸರಿಯಾದ ದೃಷ್ಟಿಯಿರುವುದೋ ಅವರದು ಸಮ್ಯಕ್‌ದೃಷ್ಟಿ ಯೆಂದು ತಿಳಿದರೆ ಸಾಕು. ವೇದಾಂತಿಗಳಿಗೆ ಇಷ್ಟಾನಿಷ್ಟವೆಂಬ ಕಲ್ಪನೆಯಿಲ್ಲ. ಇಷ್ಟದ ಅಭಾವವೇ ಅನಿಷ್ಟವೆಂದು ಅವರ ತಿಳಿವಳಿಕೆ. ಈ ತರಹದ ಅವರ ಅಭಿ ಮತದಲ್ಲಿ ಹೋರಾಟವೆಲ್ಲ ಹುಸಿ. ಅವರಿಗೆ ಅದು ಬೇಕಾಗಿಯೂ ಇಲ್ಲ. ಕಲ್ಪಕ ವೃತ್ತಿಯೂ ಕರ್ತೃತ್ವಶಕ್ತಿಯೂ ಅವರಲ್ಲಿ ಲೋಪವಿರುವುದರಿಂದ ಅವರು ಹೇಡಿ ಗಳು ಎಂದು ಹೇಳಬಹುದು. ಭಕ್ತರಿಗೆ ಇಷ್ಟವಿರಲಿ ಅನಿಷ್ಟವಿರಲಿ ಅದೆಲ್ಲವೂ ದೈವಾಧೀನವಾದುದು. 'ಬಂದ ಬರವೇ ಲಿಂಗಾನಂದ' ಎಂಬ ತಿಳಿಯು ಅವರಿಗೆ ವೈಯುಂಡಿದೆ. ಅವರಲ್ಲಿ ಪುರುಷಪ್ರಯತ್ನಕ್ಕೆ ಸ್ಥಾನವೇ ಇಲ್ಲ. ಕೇವಲ ಹೆಂಗಳೆಯ ರಂತೆ ಅವರು ದೇವನ ಅನುಗ್ರಹಕ್ಕೆ ಕೈಯೊಡ್ಡಿ ನಿಲ್ಲುವವರು. ವೇದಾಂತವು ಹೇಡಿ ಗಳ ಹಿಂಡನ್ನುಂಟುಮಾಡಿದರೆ ಭಕ್ತಿಪಂಥವು ಹೆಣ್ಗಳ ಬಳಗವನ್ನು ಬೆಳೆಯಿಸಿತು. ಹೋರಾಟದ ಕಲಿತನವು ಈ ಎರಡು ಪಂಗಡದವರಲ್ಲಿ ಕಂಡುಬರುವುದಿಲ್ಲ. ಶಿವಶರ ಣರಿಗೆ ಒಳಹೊರಗೂ ವ್ಯಾಪಿಸಿದ ಅನಿಷ್ಟವನ್ನು ಕೆಡಿಸಿ ಇಷ್ಟವನ್ನು ನೆಡಿಸುವುದೇ ಬಾಳುವೆಯ ಗುರಿ. ಕಲಹಕ್ಷೇತ್ರವೆನಿಸಿದ ಈ ಕರ್ಮಭೂಮಿಯಲ್ಲಿ ಕಲಿಯಾದವನು ಬಾಳುವನು. ಹೇಡಿಗೂ ಹೆಣ್ಣಿಗೂ ಅಲ್ಲಿ ಉಳಿಮೆಯಿಲ್ಲ. (Survival of the fittest).

ಕರ್ಮವೆಂಬ ಅಂಕದೊಡನೆ ತೊಡರಿದೆ ಬಿನ್ನಪವನವಧಾರು,
ನಿಮ್ಮಾಳಿನ ಭಾಷೆಯು ಕಡೆಗಳಕ್ಕೆ ನೂಂಕುವೆ.
ಕೆಡಹುವೆನಂಳವ, ಕರೆದಹೋಸರಿಸಿದರೆ ನಿಮ್ಮಾಳಲ್ಲ.
ಶಿವಶರಣೆಂಬ ದಂಡೆಯು ಹೂಡಿ ಗಣಮೇಳಾಪವೆಂಬ
ಅಲಗಿನಿಂದಿರಿವೆ ಕೂಡಲ ಸಂಗಮದೇವಾ. ೧೮

೧೮ ಬ. ವ. ೯ ಪು. ೧೦೮

ಮಾಯೆಯ ಬಗೆಗೆ ಅನೇಕ ಅಪಾರ್ಥಗಳು ರೂಢವಾಗಿವೆ. ಮಾಯೆಯನ್ನು ಬಿಟ್ಟೆವೆಂದು ಗಳಹುವವರೇ ಅನೇಕರು. ಸರ್ಪಭೂಷಣ ಶಿವಯೋಗಿಗಳು ಹೇಳುವಂತೆ ಮರಹು ದೊಡ್ಡ ಮಾಯೆಯು.

ಇನಿತ ನೀವು ಬಿಡಲು ನಿಮ್ಮ
ಮನವು ಬಿಡದದೊಂದು ಮಾಯೆ
ಇನಿತ ಬಿಟ್ಟೆವೆಂಬ ಹಮ್ಮದೊಂದು ಮಾಯೆಯು
ಪರಮ ಶ್ರೀಗುರುಸಿದ್ಧನೆನಿಸಿ

ಮೆರೆವ ಬ್ರಹ್ಮವನ್ನು ತೋರು
ಮರವಿಗಡ್ಡಲಾಗಿ ಮೋಕ್ಷವಾಗಲೀಯದೆ ||
ಧರಣಿಯಣುಗಳನಿತು ಭವದಿ
ಬರಿಸಿ ನಿಮ್ಮ ನಲೆದು ತಿಂಬ
ಮರವೆಯೆಂಬುದೊಂದು ಬಹಳ ಹಿರಿಯ ಮಾಯೆಯು || ೧೯

ಇರುಹು-ಕುರುಹುಗಳಿಗೆ ಅರುಹು ಮಧ್ಯವರ್ತಿಯಾಗಿದ್ದುಕೊಂಡು ಅವೆರಡನ್ನೂ ಸಮನ್ವಯಗೊಳಿಸುವುದು. ಅರುಹು ಸರಿದು ಮರವೆ ಸೇರಿದರೆ ಅದುವೆ ಮಾಯೆ. ಅರಿವಿಂಗೆ ಆವರಿಸಿದ ಮರವೆಯ ಪರೆ ಹರಿಸಲು ಹೋರಾಟ ಬೇಡವೇ ? ಪ್ರಥಮ ಜೀವನಾರಂಭರಸ ( Protoplasm Cell ) ದಿಂದ ಪ್ರಬಲವಾದ ಇಚ್ಛಾಪ್ರವೃತ್ತಿಯಿಂದಲೇ—ನೆನಹಿನ ಸಾಮರ್ಥ್ಯದಿಂದಲೇ ( Will-Power ) ರೂಪಗೊಳ್ಳುತ್ತ ದೈವಪುರುಷನೆನಿಸಿಕೊಳ್ಳಬೇಕಾದರೆ ಪುರುಷಪ್ರಯತ್ನವಿಲ್ಲದೆ ಆಗುವುದೇ ? ಹೋರಾಟವಿಲ್ಲದೆ ಅದು ಸಾಧ್ಯವಪ್ಪುದೇ ? ಈ ಅವಸ್ಥೆ ಒದಗುವಷ್ಟರಲ್ಲಿ ಅದು ಎಷ್ಟು ಸಾರೆ, ಅದು ಎಷ್ಟು ತೆರನಾಗಿ ಎಡೆತಡೆಗಳನ್ನು ಎದುರಿಸಬೇಕಾದೀತು; ಅದಕ್ಕಾಗಿಯೇ ಅದು ಎಷ್ಟು ಶುದ್ಧವಾಗಿ ಹೋರಾಡಬೇಕಾದೀತು ಎಂಬುದಕ್ಕೆ ಮಿತಿಯಿದೆಯೇ ?

There is an end to joy ! there is no end
  To striving; therefore let us strive
In purity that shall the toil befriend,
  And keep our poor mortality alive.

ಎಂಬ ಶಬ್ದಗಳಲ್ಲಿ ಮೆರಿಡಿಥ್ ಕವಿಯು 'ಹರುಷಕ್ಕೆ ಕೊನೆಯುಂಟು, ಹೋರಾಟಕ್ಕೆ ಕೊನೆಯಿಲ್ಲ; ಆದುದರಿಂದ ಶುದ್ಧನಾಗಿ ಹೋರಾಡು ' ಎಂದು ಬೋಧಿಸಿರುವನು. ಈ ಕೊನೆಯನ್ನು ಕಾಣಬೇಡವೇ ? ಎಂದು ಕೇಳುವವರಿಗೆ ಉತ್ತರವೂ ಉಂಟು. ಮರ್ತ್ಯಲೋಕದಲ್ಲಿ ಮಹಾಮನೆ ಕಟ್ಟುವವರೆಗೆ, ಕರ್ಮಭೂಮಿಯನ್ನು ಧರ್ಮಭೂಮಿ ಎನಿಸುವವರೆಗೆ, ದಾನವಲೋಕದಲ್ಲಿ ದೇವರಾಜ್ಯ ರಚಿಸುವವರೆಗೆ ವಿಶ್ರಾಂತಿಗೆ ಆಶ್ರಯವಿಲ್ಲವೆಂಬುದನ್ನು ಅಂಥವರು ಅರಿತಿರಬೇಕು. ಶಿವಶರಣರು ಎದುರಿಟ್ಟ

ಕೊಂಡುದು ಇಂಥದೊಂದು ಗುರಿ. ಅವರು ಸಾಧಿಸಿಕೊಂಡುದು ಇಂಥದೊಂದು ಉದ್ದೇಶ. ಅವರು ಪಡೆದುಕೊಂಡುದು ಇಂಥದೊಂದು ಸಮ್ಯಕ್ (ಸುಜ್ಞಾನ) ದೃಷ್ಟಿ. ಇದುವೆ ಅವರ ದರ್ಶನದ ತಿರುಳು!

೩೦—೧೧—೧೯೪೧.

---

೧೯ ಕೈವಲ್ಯಕಲ್ಪವಲ್ಲರಿ ಪದ ೫-೪೨



# ಶೂನ್ಯಸಂಪಾದನೆ

ಸಂಗ್ರಾಹಕರು : **ವೀರಭದ್ರಪ್ಪ ಕೊಪ್ಪಳ, ಎಂ. ಎ., ಬಿ. ಟಿ., ಧಾರವಾಡ.**

( ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು, ಬಿ. ಎ. ಅವರು ಹುಬ್ಬಳ್ಳಿಯಲ್ಲಿ ಮಾಡಿದ ವ್ಯಾಖ್ಯಾನದ ಸಾರಾಂಶವಿದು. )

ಜನ ಸಾಮಾನ್ಯದ ವ್ಯವಹಾರವನ್ನು ವಿಂಗಡಿಸಿ ನೋಡಿದರೆ ಅದು ಪ್ರಾಯಶಃ ಮಣ್ಣು-ಹೆಣ್ಣು-ಹೊನ್ನು ಇವು ಮೂರರಲ್ಲಿ ಅಡಕವಾಗುತ್ತಿದೆ. ಲೋಕದ ಕಣ್ಣನ್ನು ಕುಕ್ಕಿಸಲು ಇವು ಮೂರೇ ಒಡವೆಗಳು ಮುಖ್ಯವಾದವುಗಳು. ಈ ಮೂರನ್ನು ಕೂಡಿ ಹಾಕಿಕೊಳ್ಳುವುದರಲ್ಲಿಯೂ ಕೂಡಿಹಾಕಿದ ಇವುಗಳನ್ನು ಕಾಯ್ದುಕೊಳ್ಳುವುದರಲ್ಲಿಯೂ ಜನತೆಯ ಹರಿದಾಟವಿದೆ. ತನ್ನವಾದ ಇವು ಅನ್ಯರ ಕೈಸೇರಬಾರದೆಂಬ ಕೋರಿಕೆಯಿಂದ ಕೊರಗಿದ ಉದಾಹರಣೆಗಳು, ಅನ್ಯರವಾದ ಇವು ತನ್ನ ಕೈವಶವಾಗಬೇಕೆಂಬ ಹೆಣಗಾಟದಿಂದ ಹಣ್ಣಾದ ಉದಾಹರಣೆಗಳು ಹಿಂದಿನ ಹಾಗು ಇಂದಿನ ಇತಿಹಾಸದಲ್ಲಿ ಹೇರಳವಾಗಿ ಸಿಗುತ್ತಿವೆ. ಕುರುಪಾಂಡವರು ಮಣ್ಣಿಗಾಗಿ ಸಣ್ಣಾಗಲಿಲ್ಲವೇ ? ರಾಮ-ರಾವಣರು ಹೆಣ್ಣಿಗಾಗಿ ಹಣ್ಣಾಗಲಿಲ್ಲವೇ ? ಪಡುವಣದವರು ಹೊನ್ನಿಗಾಗಿ ಹೋರಾಡುತ್ತಿಲ್ಲವೇ ? ತನಗೆ ಸಂಪತ್ತಾಗಿರುವ ಈ ಮೂರರ ಸದುಪಯೋಗವೇ ಸಂಪಾದನೆಯ ಗುರಿಯಾಗಿದ್ದರೂ ಕಷ್ಟಪರಂಪರೆಗೆ ಕೊನೆಯಿಲ್ಲವಲ್ಲ ! ಇದಕ್ಕೆ ಕಾರಣವಾವುದು ? ಈ ಮೂರರ ಗಳಿಕೆ ಬಳಿಕೆಗಳ ಬಗೆಗೆ ಸರಿಯಾದ ತಿಳಿವಳಿಕೆಯ ಕೊರತೆ ! ಇವು ಮೂರೇ ಘನವೆಂದು ಇವುಗಳ ಬೆನ್ನುಹತ್ತಿ ಲೋಕದ ಒಂದು ಬಹು ದೊಡ್ಡ ಭಾಗವು ಕಣ್ಣಿನ ಕಳೆಯನ್ನು ಕಳೆದುಕೊಂಡಿದೆ; ಈ 'ಕಣ್ಣಗೆಟ್ಟ ಅಣ್ಣಗಳ'ನ್ನು ನೋಡಿ ಇವು ಮೂರೂ ಮಾಯೆಯೆಂದು ಮನದಂದು ಇವುಗಳಿಗೆ ಬೆನ್ನುತೋರಿಸಿದ ಆ ಲೋಕದ ಇನ್ನೊಂದು ಭಾಗವು ಅತ್ಯಲ್ಪವಾಗಿದೆ. ಮಣ್ಣು-ಹೆಣ್ಣು-ಹೊನ್ನು ಈ ಮೂರರ ಪಸಾರವೇ ಸೃಷ್ಟಿಯಷ್ಟೇ ! ಇದರ ಸರಿಯಾದ ಉಪಯೋಗವನ್ನು ಕಾಣುವ ಕಣ್ಣೆ ದೃಷ್ಟಿಯು. ಸೃಷ್ಟಿಯನ್ನು ಬದಲಿಸಬೇಕೆನ್ನುವವರು ದೃಷ್ಟಿಯನ್ನು ಸರಿಪಡಿಸಿಕೊಂಡರೆ ಸಾಕು ; ಸೃಷ್ಟಿಯು ಅಪಾರವಾದುದಾಗಿದ್ದರೂ ಕರಿಯು ಕನ್ನಡಿಯೊಳಗಡಗುವಂತೆ ದೃಷ್ಟಿಯಲ್ಲಿ ಅಡಗಿಬಿಡುವದು. ಆದುದರಿಂದ ಸೃಷ್ಟಿಗಿಂತ ದೃಷ್ಟಿಯು ಘನವಾದುದು. ಇಂಥ ದೃಷ್ಟಿಯು ದೊರಕೊಳ್ಳದೆ ಮಣ್ಣು-ಹೆಣ್ಣು-ಹೊನ್ನುಗಳು ಬೇಕೆಂದು

ಅವುಗಳ ಬೆನ್ನುಹತ್ತುವದು ಬಂಧನವಾಗುವಂತೆ ಅವು ಬೇಡವೆಂದು ಬಿಸುಡುವುದೂ ಬಂಧನವೇ! ಹೇಗೆ ನಡೆದರೂ ಬಂಧನವು ತಪ್ಪಿದುದಲ್ಲ. ಅಂತೆಯೇ ಅವನ್ನು ಪುರಸ್ಕರಿಸಿದವರೂ ತಪ್ಪಿದರು; ತಿರಸ್ಕರಿಸಿದವರೂ ತಪ್ಪಿದರು. ' ಬೇಕು ಬೇಡೆಂಬೆರಡು ಭವ ( ಭಾವ ) ಬೀಜಗಳ ಹುರಿ ' ಯಬೇಕೆಂಬ ಹಂಬಲು ನಿಜವಾಗಿ ಬೇಕಾದುದು. ಹಂಬಲಕ್ಕೆ ತಕ್ಕ ಸಾಧನೆಯ ಗಂಡುಗಲಿತನವೂ ಬೇಕು. ಅಂದರೇನೇ ಸೃಷ್ಟಿಯು ಹಿಡಿತದಲ್ಲುಳಿದು ನಿಜದೃಷ್ಟಿಯು ಕೈಗೆ ನಿಲುಕುವುದು.

ಇಂಥ ದೃಷ್ಟಿಯನ್ನು ಅಂದರೆ ಸೃಷ್ಟಿಯನ್ನು ಸರಿಯಾಗಿ ಉಪಯೋಗಿಸಲು ಬೇಕಾಗುವ ಕಣ್ಣನ್ನು ತಮ್ಮ ಅನುಭವದ ಚತುರ್ವಿಧ ಸಾರಾಯ ಸಂಪತ್ತಿಯಲ್ಲಿ ಪರಿವರ್ತಿಸಿಕೊಂಡರು ಶಿವಶರಣರು. ಅವರಿಗೆ " ಹೊನ್ನು ಮಾಯೆಯೆಲ್ಲ; ಹೆಣ್ಣು ಮಾಯೆಯೆಲ್ಲ; ಮಣ್ಣು ಮಾಯೆಯೆಲ್ಲ; ಮನದ ಮುಂದಣ ಆಸೆಯೇ ಮಾಯೆ "೧ ಯಾಗಿತ್ತು; ಲೋಕವಲ್ಲ ಶಿವನ ಲೀಲಾವಿಲಾಸವಿನೋದವಾಗಿದ್ದಂತೆ ಗಂಡುಗಲಿಗೆ ತಕ್ಕ ಕಾರ್ಯರಂಗವೂ ಆಗಿತ್ತು. ಮನದ ಮುಂದಣ ಈ ಆಸೆಯೇ ತಮಸ್ಸು, ಇದುವೆ ಕಣ್ಣ ಮುಂದಿನ ಕಾಳಿಕೆಯಾಗಿ ಕಾಡುವುದು. ಪರಮಾತ್ಮನ ಮೂಲ ಪ್ರಕೃತಿಯನ್ನು ಸೂಚಿಸುವ ಲಿಂಗದ ಕಪ್ಪು ಬಣ್ಣದ ಕಂತೆಯು ಶಿವಜ್ಯೋತಿಗೆ ಕುಂದಕವಲ್ಲ. ಅದಕ್ಕಾಗಿ ಈ ಕಾಳಿಕೆ ಅಳಿಯಲೆಂದು ಕಣ್ಣಿಗೆ ಕಾಂತಿಯುಕ್ತವಾದ ಕಪ್ಪು ಹೊಳಪಿನ ಲಿಂಗವನ್ನು ತೋರಿದರು ಶಿವಶರಣರು. ತಮಸ್ಸು ಹರಿದು ತೇಜಸ್ಸು ಬೆಳಗಲೆಂದು ಕಾಯದ ದೃಷ್ಟಿಗೆ ಇಷ್ಟದ ಕುರುಹುಕೊಟ್ಟು ಆ ಕುರುಹಿಗೆ ಕಣ್ಣನಿಟ್ಟು ಮಣ್ಣು-ಹೆಣ್ಣು-ಹೊನ್ನು ಮೂರರ ಬಣ್ಣವಳಿಸಿ ಮುಕ್ಕಣ್ಣಗಳಾದರು ಶಿವಶರಣರು. ಕಣ್ ಇದು ಕುರುಹಿನ ಸೂಚಕವಾಗಿರುವಂತೆ ಕುರುಹಿನ ಅರುಹಿನ ಸೂಚಕವೂ ಆಗಿದೆ. ಕಣ್ ಮತ್ತು ಕುರುಹು ಇವೆರಡೂ ಒಂದನ್ನೊಂದು ಹೊಂದಿಕೊಂಡಿರುವವು. ಇದನ್ನೇ ಪ್ರಭುದೇವರು:

ಕಣ್ಣಿಗೆ ಕಣ್ಣು, ಕಣ್ಣೊಳು ಕಣ್ಣು, ಕಣ್ಣೇ ನೇತ್ರ ।
ನೇತ್ರವೇ ಸೂತ್ರ, ಸೂತ್ರವೇ ಲಿಂಗ, ಲಿಂಗವೇ ಗುಹ್ಯ ।
ಗುಹ್ಯಕ್ಕೆ ಗುಹ್ಯ, ಗೌಪ್ಯಕ್ಕೆ ಗೌಪ್ಯ, ರಹಸ್ಯಕ್ಕೆ ರಹಸ್ಯ ।
ಈ ನೇತ್ರ ಮಹಿಮೆಯಂ ಗುಹೇಶ್ವರ ಬಲ್ಲನಲ್ಲದೆ ।
ಕಣ್ಣಗೆಟ್ಟಣ್ಣಗಳೆತ್ತ ಬಲ್ಲರು ನೋಡೈ ಗುಹೇಶ್ವರ ॥ ೨

ಎಂದು ತಮ್ಮ ವಚನದಲ್ಲಿ ಕೊಂಡಾಡಿರುವರು.

ಶಿವಶರಣರು ಮಣ್ಣು-ಹೆಣ್ಣು-ಹೊನ್ನು ಈ ಮೂರರ ಬಣ್ಣಗೆಡಿಸಿದ ಬಗೆ ಯಾವುದು? ಶರಣರ ದೃಷ್ಟಿಗೆ ಸೃಷ್ಟಿಯು ಪಸಾರ-ಪರಿವೆಗಳೆಂಬುದಿಲ್ಲ; ಒಳಗೆಂಬು

---

೧ ವಚನಶಾಸ್ತ್ರಸಾರ ಭಾಗ ೧ ( ಪೂರ್ವಾರ್ಧ ) ವಚನ ೭ ಪುಟ ೧೪೩

೨ ಲಿಂಗಸೂತ್ರ ನಿರ್ಣಯ ವಚನ ೨

ದಿಲ್ಲ; ಹೊರಗೆಂಬುದಿಲ್ಲ. ಅವರಿಗೆ ಒಳಗು ಹೊರಗಾಗಬೇಕು. ಹೊರಗು ಒಳಗಾಗಬೇಕು. ಒಳ ಹೊರಗು ಒಂದಾಗಬೇಕು.[೩] ಆದುದರಿಂದ ಶರಣಮಾರ್ಗದಲ್ಲಿ ಭಕ್ತನಾಗಿ ಭಕ್ತಿಸ್ಥಲದಿಂದ ಐಕ್ಯಸ್ಥಲವನ್ನು ಸೇರಿದರೆ ತೀರಿದಂತಾಗಲಿಲ್ಲ, ಭಂಡಾರಿ ಶಾಂತಯ್ಯಗಳು ಹೇಳುವಂತೆ ಐಕ್ಯನಾಗಿ ಭಕ್ತಸ್ಥಳಕ್ಕಿಳಿಯಬೇಕು; ಇದಕ್ಕೂ ತೀರಲಿಲ್ಲ;ಭಕ್ತನಾಗಿ ಸಕಲಯುಕ್ತನಾಗಬೇಕು. ಈ ಯುಕ್ತಿ ನಿಶ್ಚಯದಲ್ಲಿಯೇ ಐಕ್ಯಸ್ಥಲ! ಇಷ್ಟು ಸಾಧ್ಯವಾದಾಗಲೇ ಒಳಹೊರಗಾಯಿತ್ತು:

"ಸ್ಥಳ-ಕುಳವನರಿಯಬೇಕೆಂಬರು, ಭಕ್ತನಾಗಿ ಮಹೇಶ್ವರನಾಗಬೇಕೆಂಬರು, ಮಹೇಶ್ವರನಾಗಿ ಪ್ರಸಾದಿಯಾಗಬೇಕೆಂಬರು, ಪ್ರಸಾದಿಯಾಗಿ ಪ್ರಾಣಲಿಂಗಿಯಾಗಬೇಕೆಂಬರು, ಪ್ರಾಣಲಿಂಗಿಯಾಗಿ ಶರಣನಾಗಬೇಕೆಂಬರು, ಶರಣನಾಗಿ ಐಕ್ಯನಾಗಬೇಕೆಂಬರು, ಯಾತರಿಂದ ಕೂಟವ ನಾನರಿಯೆ. ಒಳಗಣ ಮಾತು ಹೊರಹೊಮ್ಮಿಯಲ್ಲದೆ ಎನಗರಿಯಬಾರದು. ಎನಗೈಕ್ಯನಾಗಿ ಶರಣನಾಗಬೇಕು, ಶರಣನಾಗಿ ಪ್ರಾಣಲಿಂಗಿಯಾಗಬೇಕು, ಪ್ರಾಣಲಿಂಗಿಯಾಗಿ ಪ್ರಸಾದಿಯಾಗಬೇಕು, ಪ್ರಸಾದಿಯಾಗಿ ಮಹೇಶ್ವರನಾಗಬೇಕು, ಮಹೇಶ್ವರನಾಗಿ ಭಕ್ತನಾಗಬೇಕು, ಭಕ್ತನಾಗಿ ಸಕಲ ಯುಕ್ತನಾಗಬೇಕು, ಯುಕ್ತಿ ನಿಶ್ಚಯವಾದಲ್ಲಿಯೇ ಐಕ್ಯಸ್ಥಲ. ಒಳ ಹೊರಗಾಯಿತ್ತು; ಎನಗೆ ಕಾಣಬಂದಿತ್ತು. ಅಲೇಕನಾದ ಶೂನ್ಯಶಿಲೆಯ ಹೊರಹೊಮ್ಮಿ ಕಂಡೆ ನಿನ್ನನು."[೪]

ಹೀಗೆ ಭಕ್ತನಾಗಿ ಐಕ್ಯಸ್ಥಲವನ್ನಡರುವದು ಅನುಭವ ಮಾರ್ಗದಲ್ಲಿ ಒಂದು ಕ್ರಮವಾದರೆ ಐಕ್ಯನಾಗಿ ಭಕ್ತಸ್ಥಲಕ್ಕಿಳಿಯುವದೂ ಒಂದು ಕ್ರಮವು. ಆತ್ಮನ ದುಡಿಮೆಯ ದಾರಿಯಲ್ಲಿ ಎರಡೂ ಆವಶ್ಯಕವಾದವುಗಳೇ ! ಆತ್ಮೋದ್ಧಾರವನ್ನು ಪ್ರತಿಯೊಬ್ಬನು ತನ್ನಷ್ಟಕ್ಕೆ ತಾನು ನೋಡಿಕೊಂಡರೆ ಆಗುವದಿಲ್ಲವೆ? ಈ ಏರಿಳಿತಗಳು ಏಕೆ? ಎಂದು ಕೇಳಬಹುದು. ಋಣಮುಕ್ತಿಯೆನ್ನುವದು ಲೋಕದ ವ್ಯವಹಾರದಲ್ಲಿದ್ದಂತೆ ಆತ್ಮಾನುಭವದ ಅಲೆದಾಟದಲ್ಲಿಯೂ ಉಂಟು. ಭಕ್ತಸ್ಥಲದಿಂದ ಐಕ್ಯಸ್ಥಲವನ್ನು ಮುಟ್ಟುವ ಆರೋಹಣ ಕ್ರಮದಲ್ಲಿ ಲಿಂಗ ದೃಷ್ಟಿಯನ್ನು ಪಡೆದು ಅದರಿಂದ ತಾನು ಕಂಡುದನ್ನು ಐಕ್ಯಸ್ಥಲದಿಂದ ಭಕ್ತಸ್ಥಲಕ್ಕೆ ಬರುವ ಅವರೋಹಣ ಕ್ರಮದಲ್ಲಿ ಅನ್ಯರಿಗೆ ಅರುಹಿ ಕೊಡಬೇಕಾಗುವುದು; ಆಚರಿಸಿ ತೋರಬೇಕಾಗುವುದು; ತನ್ನಂತೆ ಅವರನ್ನು ಮಾಡಿಕೊಳ್ಳಬೇಕಾಗುವುದು. ಇಲ್ಲದಿದ್ದರೆ ಋಣಮುಕ್ತಿಗೆ ಅವಕಾಶವೆಲ್ಲಿ? ಇದಕ್ಕಾಗಿಯೇ ಒಳ ಹೊರಗಾಗಬೇಕು; ಹೊರ ಒಳಗಾಗಬೇಕು; ಒಳ ಹೊರಗು ಒಂದಾಗಬೇಕು ಎಂದೆನ್ನುವ ಬಗೆಯಲ್ಲಿ ಶಿವಶರಣರು ಈ ಋಣ

---

೩. ಮುಗ್ಗಿಯ ಮಾಯಿದೇವರ ಶತಕತ್ರಯ ೧ ಪದ್ಯ ೩೭
ವ. ಶಾ. ಸಾ ಭಾಗ ೧ ( ಉತ್ತರಾರ್ಧ ) ವ. ೫ ಪು ೮೭

೪. ವ. ಶಾ. ಸಾ. ಭಾಗ ೧ (ಪೂರ್ವಾರ್ಧ) ವ.೨ ಪು.೧೧೯

ಮುಕ್ತಿಗೆ ಅವಕಾಶವನ್ನು ಕಲ್ಪಿಸಿದರು. ಅಲ್ಲದೆ ತಮಗೆ ದೊರೆತ ಅನುಭವ ಸುಖ ವನ್ನು ಈ ಕರ್ಮ ಭೂಮಿಯಲ್ಲಿ ಬೀರಿ ಇದನ್ನೇ ಧರ್ಮ ಭೂಮಿಯನ್ನು ಮಾಡಲೋ ಸುಗ ಹೆಣಗಿದರವರು. ಸಮ್ಯಕ್ ದೃಷ್ಟಿಯನ್ನು ಪಡೆದು ಅದರಿಂದ ಸೃಷ್ಟಿಯ ಘನತೆಯನ್ನು ಅಳೆದರವರು. 'ಲಿಂಗವಿದ್ದ ಠಾವೇ ಕೈಲಾಸ' 'ಕಾಯವೇ ಕೈಲಾಸ' 'ಕಾಯಕವೇ ಕೈಲಾಸ', 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ' ಎಂಬಿವೇ ಮೊದಲಾದ ಅವರ ವಚನಗಳು ಅವರ ಈ ಮಣಿಹವನ್ನೇ ಹೇಳಿಕೊಡುವವು.

ಬ್ರಹ್ಮಾಂಡದಲ್ಲಿ ತನಗನ್ಯವಾಗಿ ತೋರುವ ಮಣ್ಣು-ಹೆಣ್ಣು-ಹೊನ್ನುಗಳು ಪಿಂಡಾಂಡದಲ್ಲಿ ತನ್ನ ತನು-ಮನ-ಧನಗಳಾಗಿ ಪರಿಣಮಿಸುವವು. 'ಮಣ್ಣಿನ ಕಾಯ, ಮಣ್ಣಿಗೆ ಹೋಗುವದು,' 'Dust thou art unto dust thou returnest' ಎಂಬ ವಾಕ್ಯಗಳು ಭೌತಿಕ ದೇಹವು ಮಣ್ಣಿನ ಅಂಶವೆಂಬುದನ್ನು ಸೂಚಿಸುತ್ತವೆ. ವೈಯಾಕರಣಿಯಾದ ಪಾಣಿನಿಯು ಮನವು ನಪುಂಸಕ ಲಿಂಗವೆಂದು ಹೇಳಿದನು. ಅಹಂ ಬ್ರಹ್ಮಾಸ್ಮಿಗಳು ಈ ಮನವು ಪುಲ್ಲಿಂಗವೆಂದು ತಿಳಿಸಿದರು. ಶರಣರು ಮಾತ್ರ ಈ ಮನವು ಸ್ತ್ರೀಲಿಂಗವೆಂದು ಹೇಳಿ 'ಶರಣಸತಿ ಲಿಂಗಪತಿ' ತತ್ತ್ವವನ್ನು ಬೀರಿರು ವರು. ಗಂಡಿಗೆ ಹೆಣ್ಣು ಮಾಯೆಯಾಗಿ ತೋರುವಂತೆ ಹೆಣ್ಣಿಗೆ ಗಂಡೂ ಮಾಯೆ ಯಾಗಿ ಕಾಣುವದು. ಗಂಡು ಹೆಣ್ಣಾಗಿ ಹೆಣ್ಣು ಗಂಡಾಗಿ ಗಂಡು ಹೆಣ್ಣೆಂಬ ಅಭಿಮಾ ನದಳಿವಿನಲ್ಲಿಯೇ ( Transformation ) ಶರಣಸತಿತ್ವವು ಸಿದ್ಧಿಸುವುದು.

> " ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡುವುದು. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು. ಲೋಕವೆಂಬ ಮಾಯೆಗೆ ಶಿವಶರಣರ ಚಾರಿತ್ರ ಮರುಳಾಗಿ ತೋರುವುದು. ಚೆನ್ನಮಲ್ಲಿಕಾರ್ಜುನನೊಲಿದ ಶರ ಣಂಗೆ ಮಾಯೆಯೂ ಇಲ್ಲ; ಮರಹೂ ಇಲ್ಲ. ಅಭಿಮಾನವೂ ಇಲ್ಲ. " *

ಆತ್ಮನಲ್ಲಿಯ ಕಲೆಯು ಆಯಾ ಆತ್ಮನಿಗೆ ಧನವಾಗಿಹುದು. ಇದು ಜನ್ಮಜನ್ಮಾಂತರ ಗಳಲ್ಲಿಯ ಗಳಿಕೆಗೆ ಸಂಬಂಧಿಸಿ ಬಂದುದು. ಮಾನವರಿಗೆ ಇದರ ಅಭಿಮಾನವು ಬಹಳ. ಈ ಅಭಿಮಾನವನ್ನು ಅರ್ಪಿಸುವ ಕ್ರಿಯೆಯೇ ಅಂದರೆ ಆತ್ಮ (ಕಲೆಯ) ಭಾವವನ್ನು ನಿರ್ಭಾವಗೊಳಿಸುವ ಕ್ರಿಯೆಯೇ ಜಂಗಮಕ್ಕೆ ಧನವನ್ನರ್ಪಿಸಬೇಕು ಎಂಬ ತತ್ತ್ವದ ಗೂಡಾರ್ಥವು. ಹೀಗೆ ಮಣ್ಣು-ಹೆಣ್ಣು-ಹೊನ್ನು ಈ ತ್ರಿವಿಧದ ಅಂಶವಾದ ತನು-ಮನ-ಧನವೆಂಬ ತ್ರಿವಿಧವನ್ನು ಗುರು-ಲಿಂಗ-ಜಂಗಮ ತ್ರಿವಿಧಕ್ಕೆ ನೀಡಬೇಕು ಎಂದರೆ ತನುವಳಿದು ಮಹಾತನುವಾಗಬೇಕು ಮನವಳಿದು ಘನ ಮನವಾಗಬೇಕು ಭಾವವಳಿದು ನಿರ್ಭಾವವಾಗಬೇಕು ಎಂದು ಹೇಳುವ ಮಾತು.

---

* ಮಹಾದೇವಿ ಅಕ್ಕನ ವಚನ ೧೪ ಪುಟ ೫ ( ದ್ವಿತೀಯ ಮುದ್ರಣ )

“ ತನು ನಿಮ್ಮನಪ್ಪಿ ಮಹಾತನುವಾದ ಬಳಿಕ ತನುವೆಂಬುದು ಮತ್ತೆಲ್ಲಿಯದೋ ? ಮನ ನಿಮ್ಮನಪ್ಪಿ ಘನಮನವಾದ ಬಳಿಕ ಮನವೆಂಬುದು ಮತ್ತೆಲ್ಲಿಯದೋ ? ಪ್ರಾಣ ನಿಮ್ಮನಪ್ಪಿ ಪ್ರಾಣಪದದಲ್ಲಿ ಸಿಲುಕಿದ ಬಳಿಕ ಪ್ರಾಣವೆಂಬುದು ಮತ್ತೆಲ್ಲಿಯದೋ ? ಇಂತೀ ತ್ರಿವಿಧವು ಶಿಲಿಂಗದಲ್ಲಿ ನಿರ್ಲೇಪವಾಗಿ ಮನದೋರದಿರವ ಕೂಡಲ ಚೆನ್ನ ಸಂಗಯ್ಯನೇ ಬಲ್ಲ. ” ೬

“ ತನು ಸೋಂಕಿ ತನು ನಷ್ಟವಾಯಿತ್ತು, ಮನ ಸೋಂಕಿ ಮನ ನಷ್ಟವಾಯಿತ್ತು, ಭಾವ ಸೋಂಕಿ ಭಾವ ನಷ್ಟವಾಯಿತ್ತು. ಇದು ಕಾರಣ ಕೂಡಲ ಚೆನ್ನಸಂಗಯ್ಯ ಲಿಂಗ ಸೋಂಕಿ ಶರಣನ ಸಂದು ನಷ್ಟವಾಯಿತ್ತು. ” ೬

ಹೀಗೆ ತನುವಳಿದು ಮಹಾತನುವಾದುದೇ ಗುರು. ಮನವಳಿದು ಘನಮನ ವಾದುದೇ ಲಿಂಗ. ಭಾವ ( ಪ್ರಾಣ ) ವಳಿದು ನಿರ್ಭಾವ ( ನಿಃಪ್ರಾಣ ) ವಾದುದೇ ಜಂಗಮ. ಈ ನೀಡುವ ಕ್ರಮದಲ್ಲಿ ಒಂದರ ಅಳಿವೂ ಇನ್ನೊಂದರ ಉಳಿವೂ ದೊರೆಕೊಳ್ಳುವವು. ತನು-ಮನ-ಭಾವಗಳಿಗಾವರಿಸಿದ ಅಭಿಮಾನಕ್ಕೆ ಮಲವೆಂದೂ ಹೆಸರು. ತನುವಿಗಾವರಿಸಿದ ಆಣವ ಮಲವೂ, ಮನಕ್ಕಾವರಿಸಿದ ಮಾಯಾ ಮಲವೂ, ಭಾವಕ್ಕಾವರಿಸಿದ ಕಾರ್ಮಿಕ ಮಲವೂ ಅಳಿಯುತ್ತ ನಡೆದಂತೆ ಮಹಾತನುವೆಡೆ ಗೊಂಡು, ಘನಮನವು ನಿಲುಕಿ, ನಿರ್ಭಾವವುಳಿಯುವವು. ಅಂದರೆ ಗುರು-ಲಿಂಗ-ಜಂಗಮವು ಕೈಸೆರೆಯಾಗುವವು.

ತನುವಿನ ಆಣವ ಮಲದ ಅಳಿವು ರಕ್ತ-ರೇತಸ್ಸಿನ ಅಣುಗಳ ಅಭಿಮಾನವು ನಷ್ಟವಾಗಿ ಭಕ್ತ ಬಾಂಧವ್ಯವನ್ನು ಬಿಗಿದ ಹೊರತು ಸಾಧ್ಯವಿಲ್ಲ. ಕರ್ಮೇಂದ್ರಿಯ ಗಳಲ್ಲಿ ವ್ಯಾಕರಣಾತ್ಮಕವಾಗಿಯೂ, ಜ್ಞಾನೇಂದ್ರಿಯಗಳಲ್ಲಿ ವ್ಯವಸಾಯಾತ್ಮಕ ವಾಗಿಯೂ ವರ್ತಿಸುವ ಮನದ ಕಾರ್ಯವು ಇತ್ತೆರನಾಗಿ ಅದು ಸಂಕಲ್ಪ ವಿಕಲ್ಪದಿಂದ ಬದ್ಧವಾಗಿದೆ. ಹೀಗೆ ಒಂದನ್ನು ಎರಡು ಮಾಡಿ ತೋರಿಸುವ ಈ ಭಿನ್ನದೃಷ್ಟಿ ಅಥವಾ ಬಿದಿರ್ಗಣ್ಣು ಒಡೆದು ಕ್ರಿಯಾಜ್ಞಾನಾತ್ಮಕವಾದ ಸಮ್ಯಕ್ ದೃಷ್ಟಿಯ ಒಳ್ಗಣ್ಣನ್ನು ಸಂಪಾದಿಸಿದ ಹೊರತು ಮನದ ಈ ಮಾಯಾ ಮಲವು ಅಳಿಯಲು ಸಾಧ್ಯವಿಲ್ಲ. ಕಾರ್ಮಿಕ ಮಲವು ಪ್ರಾಣವ್ಯಾಪಾರಕ್ಕೆ ಸಂಬಂಧಿಸಿದುದರಿಂದ ಅದರ ಅಳಿವು ಪ್ರಾಣವ್ಯಾಪಾರದ ಸುಸ್ಥಿರತೆಯಿಂದ ನಿರ್ಭಾವವನ್ನು ಅಳವಡಿಸಿಕೊಂಡ ಹೊರತು ಸಾಧ್ಯವಿಲ್ಲ.

ಮಣ್ಣಿನ ಅಂಶವಾದ ತನು— ಇದಕ್ಕೆ ಸಂಬಂಧಿಸಿದ ಆಣವ ಮಲವಳಿದು ಮಹಾತನುವೆಡೆಗೊಂಡುದೇ ಗುರು; ಇಂಥ ಗುರುತತ್ತ್ವವನ್ನು ಅಳವಡಿಸಿಕೊಂಡ ವನು ಬಸವಣ್ಣನು; ಇವನೇ ಗುರುಮೂರ್ತಿಯು. ಹೆಣ್ಣಿನ ಅಂಶವಾದ ಮನ—

---

೬ ವ. ಶಾ. ಸಾ. ಭಾಗ ೧ ( ಉತ್ತರಾರ್ಧ ) ವ. ೧ ಮತ್ತು ವ. ೪ ಪು. ೨೬೦

ಇದಕ್ಕೆ ಮುಸುಕಿದ ಮಾಯಾ ಮಲವಳಿದು ಘನಮನವುಂಟಾದುದೇ ಲಿಂಗ; ಇಂಥ ಲಿಂಗತತ್ತ್ವವನ್ನು ಸಾಧ್ಯಮಾಡಿಕೊಂಡವನು ಚೆನ್ನಬಸವಣ್ಣನು; ಇವನೇ ಲಿಂಗಮೂರ್ತಿಯು. ಹೊನ್ನಿನ ಅಂಶವಾದ ಭಾವ (ಧನ)— ಇದಕ್ಕೆ ಆವರಿಸಿದ ಕಾರ್ಮಿಕ ಮಲವಳಿದು ನಿರ್ಭಾವವೆಡೆಗೊಂಡುದೇ ಜಂಗಮ; ಇಂಥ ಜಂಗಮತತ್ತ್ವವನ್ನು ಹೊಂದಿದವನು ಅಲ್ಲಮನು; ಇವನೇ ಜಂಗಮಮೂರ್ತಿಯು. ಬಾಹ್ಯ ಪ್ರಪಂಚದಲ್ಲಿ ಮಣ್ಣು-ಹೆಣ್ಣು-ಹೊನ್ನುಗಳನ್ನು ಸದ್ವಿನಿಯೋಗಿಸುವ ಕಣ್ಣೇ ಅಂತರಂಗದಲ್ಲಿ ಜ್ಞಾನವಾಗಿಹುದು. ಈ ಜ್ಞಾನದಿಂದ ಮಲತ್ರಯವಳಿದು ನಿರ್ಮಲ ತನು (ಪ್ರಸಾದಕಾಯ) ವೆಡೆಗೊಂಬುವುದು. ಇಂಥ ನಿರ್ಮಲ ತನುವನ್ನು ಹೊಂದಿದವನೇ ಶರಣ ಅಥವಾ ಭಕ್ತ. ಭಕ್ತನು ಮಣಿಗಣಗಳ ನಡುವಿನ ಸೂತ್ರದಂತೆ. ಸೂತ್ರವಿಲ್ಲದೆ ಮಣಿಗಳ ಹೊಂದಿಕೆಗೆ ಆಶ್ರಯವಿಲ್ಲದಿರುವಂತೆ ಭಕ್ತನಿಲ್ಲದೆ ಗುರು-ಲಿಂಗ-ಜಂಗಮಕ್ಕೆ ಆಶ್ರಯವಿಲ್ಲ.

ರುದ್ರಾಕ್ಷ ತಾನೆ ಚಿನ್ನಾದಮಯ ಗುರುರೂಪು
ರುದ್ರಾಕ್ಷಮುಖವೆ ಚಿದ್ಬಿಂದುಮಯ ಲಿಂಗಗಳು
ರುದ್ರಾಕ್ಷವದನ ಪುಷ್ಪದೊಳೊಪ್ಪುತಿಹನಾಳ ಚಿತ್ಕಳಾಮಯ ಜಂಗಮಂ ॥
ರುದ್ರಾಕ್ಷಪೂರಿತದ ಸೂತ್ರ ಚಿನ್ಮಯ ಭಕ್ತ
ನಿರ್ಧರದೊಳಿಂತು ಚತುರ್ವಿಧ ಚಿತ್ಸ್ವರೂಪಾದ
ರುದ್ರಾಕ್ಷಗಳೆ ಚಿದಂಗಾಭರಣವಾಗಿರ್ಪ ಶರಣರಿಂಗೆಣೆಗಾಣೆನು ॥ ೭

ಎಂದು ಸಮ್ಯಕ್ ದೃಷ್ಟಿಯ ಆಧಿಕ್ಯವನ್ನು ವಿವರಿಸುತ್ತ ಷ್ಯಲಾರ ಬಸವಲಿಂಗ ಶರಣರು ಚತುರ್ವಿಧ ಸಾರಾಯ ಸಂಪತ್ತಿಯ ಪರಿಪೂರ್ಣತೆಗೆ ಭಕ್ತನೇ ಮೊದಲಿಗನೆಂದು ತಿಳಿಸಿರುವರು. ಲಿಂಗವಂತರಲ್ಲಿ ಭಕ್ತಾಧಿಕ್ಯವನ್ನು ಹೇಳಿದುದು ಈ ದೆಸೆಯಿಂದಲೇ !

ಶೂನ್ಯಸಂಪಾದನೆಯಲ್ಲಿ ಶೂನ್ಯವಾದುದು. ಆಣವ-ಮಾಯಾ-ಕಾರ್ಮಿಕ ಮಲತ್ರಯವು; ಸಂಪಾದನೆಯಾದುದು ಮಹಾತನು ಘನಮನ ನಿರ್ಭಾವದ್ಯೋತಕವಾದ ಗುರು-ಲಿಂಗ-ಜಂಗಮ ಮೂರ್ತಿತ್ರಯವು. ಹಾಗು ಇದಕ್ಕಾಧಾರಭೂತನಾದ ಶರಣ ಅಥವಾ ಭಕ್ತ ಎಂಬುದು ಸ್ಪಷ್ಟವಾದುದು. ಆದರೆ ಶಿವಶರಣರು ಶೂನ್ಯ ಸಂಪಾದನೆಯೊಂದಕ್ಕೆ ನಿಲ್ಲದೆ ಅದರ ಜೊತೆಗೆ ಶೀಲ(ಸದ್ಭಾವ-Character)ಸಂಪಾದನೆಯನ್ನು ಮಾಡಿದರೆಂಬದನ್ನು ಮರೆಯಲಾಗದು. ಗುರು-ಲಿಂಗ-ಜಂಗಮಾನುಸಂಧಾನದಿಂದ ಮಹಾತನು-ಘನಮನ-ನಿರ್ಭಾವಗಳು ಅಂಗವಿಸಿದಂತೆ ನಿರ್ಮಲತನುವೆಡೆಗೊಂಡು ಶೀಲ

೭ ವೀರಶೈವ ಷಟ್ಸ್ಥಲ ಸಿದ್ಧಾಂತ ೧-೩೮

ಸಂಪಾದನೆಯು ಸಹಜವಾಗಿ ದೊರೆಕೊಳ್ಳುವುದು. ಇಂಥ ಶೀಲ ಸಂಪಾದಕನೇ ಶರಣ ಅಥವಾ ಭಕ್ತ. ಭಕ್ತ-ಗುರು-ಲಿಂಗ-ಜಂಗಮ ಇವೇ ಶಿವಶರಣರ ಚತುರ್ವಿಧ ಸಾರಾಯ ಸಂಪತ್ತು. ಶಿವಶರಣರು ಬರಿಯ ಶೂನ್ಯವನ್ನು ಹೇಳಿ ನಿಷೇಧಾತ್ಮಕ (Negative) ವಿವೇಚನೆಗೆ ನಿಲ್ಲಲಿಲ್ಲ. ಅದರ ಜೊತೆಗೆ ಶೀಲವನ್ನೂ ಹೇಳಿ ನಿಶ್ಚಯಾತ್ಮಕ(Positive) ವೃತ್ತಿಗೆ ನಿಲುಕಿದರು ಎಂಬ ಸಂಗತಿಯು ಗಣ್ಯವಾಗಿದೆ. ಅವರ ವಚನಗಳಲ್ಲಿ ಅಲ್ಲಲ್ಲಿ ಕಂಡು ಬರುವ—ಬಸವಣ್ಣನಿಗೆ ಭಕ್ತಿಯ ಸಂಪತ್ತು, ಚೆನ್ನ ಬಸವಣ್ಣನಿಗೆ ಶಿವಪ್ರಸಾದ ಸಂಪತ್ತು, ಪ್ರಭುದೇವರಿಗೆ ವೈರಾಗ್ಯ ಸಂಪತ್ತು, ಮಾಚಿ ದೇವನಿಗೆ ಜ್ಞಾನ ಸಂಪತ್ತು, ಸಕಲೇಶ ಮಾದರಸನಿಗೆ ಶಾಂತಿಯ ಸಂಪತ್ತು, ಅಕ್ಕ ನಾಗಮ್ಮನಿಗೆ ಮಹತ್ತ್ವ ಸಂಪತ್ತು, ನೀಲಮ್ಮನಿಗೆ ಲಿಂಗಪೂಜೆಯ ಸಂಪತ್ತು, ಆಯ್ದಕ್ಕಿ ಮಾರಯ್ಯನಿಗೆ ಕಾಯಕ ಸಂಪತ್ತು, ನಿಜಗುಣರಿಗೆ ಆರೂಢ ಪದವಿ, ಅಜಗಣ್ಣನಿಗೆ ಮಂತ್ರ ಸಿದ್ಧಿ ದೊರೆಕೊಂಡಿದ್ದುವೆಂಬ ಅಂಶಗಳಿಂದಲೂ ಮತ್ತು ಎಲೇಶ್ವರ ಕೇತಯ್ಯಗಳ ಈ ವಚನದಿಂದಲೂ ಇದು ಸಿದ್ಧವಾಗುತ್ತಿದೆ:

> “ಬಸವಣ್ಣಂಗೆ ಸರ್ವಗುಣಶೀಲ, ಚೆನ್ನಬಸವಣ್ಣಂಗೆ ದಿವ್ಯಜ್ಞಾನಗುಣಶೀಲ, ಪ್ರಭುದೇವರಿಗೆ ಬಸವಣ್ಣ ಚೆನ್ನಬಸವಣ್ಣನ ಉಭಯಗುಣಶೀಲ, ಮಡಿವಾಳಯ್ಯಂಗೆ ವೀರಗುಣಶೀಲ, ಅಜಗಣ್ಣಯ್ಯಂಗೆ ಐಕ್ಯಗುಣಶೀಲ, ಚೆಂದಯ್ಯಂಗೆ ವೈರಾಗ್ಯಗುಣಶೀಲ, ನಿಜಗುಣಂಗೆ ಆತ್ಮಗುಣಶೀಲ, ಸಿದ್ಧರಾಮಯ್ಯಂಗೆ ಯೋಗಗುಣಶೀಲ, ಮೋಳಿಗಯ್ಯಂಗೆ ಭೇದಗುಣಶೀಲ, ಘಟ್ಟಿವಾಳಯ್ಯಂಗೆ ತ್ರಿವಿಧಗುಣಶೀಲ, ಅಕ್ಕಗಳಿಗೆ ನಿರ್ವಾಣಗುಣಶೀಲ, ಮಿಕ್ಕಾದ ಪ್ರಮಥರಿಗೆಲ್ಲಕ್ಕು ತಮ್ಮತಮ್ಮ ಸ್ವತಂತ್ರಗುಣಶೀಲ. ಎನಗೆ ಎಲೇಶ್ವರಲಿಂಗವು ಕೊಟ್ಟುದೊಂದೆ ವಿಶ್ವಾಸಗುಣಶೀಲ”೮

ಮಲತ್ರಯದ ಅಳಿವು; ನಿರ್ಮಲ ತನುವಿನ (ಪ್ರಸಾದಕಾಯದ) ಉಳಿವು; ಇದೇ ಶೂನ್ಯಸಂಪಾದನೆಯ ರಹಸ್ಯವೆಂಬದು ಈ ವಿವೇಚನೆಯಿಂದ ವ್ಯಕ್ತವಾಗುತ್ತಿದೆ.

## ೨

ಶಿವಶರಣರ ಅನುಭವ ಆಂದೋಲನದ ಧ್ಯೇಯದಲ್ಲಿ ಕೇವಲ ಲಯವು ಪ್ರಾಮುಖ್ಯವಾದುದಲ್ಲ. ಲಯದ ಜೊತೆಗೆ ಸಾಮರಸ್ಯವನ್ನೂ ಅವರು ಸೂಚಿಸಿರುವರು. ಅನುಭವವನ್ನು ಪಡೆಯುವಾಗ ಒಂದರ ಅಳಿವು (ಲಯ) ನಡೆದಂತೆ ಇನ್ನೊಂದರ ಉಳಿವು (ಸಾಮರಸ್ಯ) ಸಹಜವಾಗಿ ಉಂಟಾಗುವದೆಂಬದು ಅದರ ದಿವ್ಯ ಅನುಭವಕ್ಕೆ ನಿಲುಕಿತು. ತೆರವಾದ ಸ್ಥಳದಲ್ಲಿ ತುಂಬುವ ಕಾರ್ಯವಿರಬೇಡವೆ? ಇದುವೆ ಶೀಲ ಸಂಪಾದನೆ.

೮ ವ. ಶಾ. ಸಾ. ಭಾಗ ೧ (ಪೂರ್ವಾರ್ಧ) ವ. ೧೦ ಪು. ೨೦೪

" ಬುದ್ಧಿಯನ್ನು ಕ್ರಮಬದ್ಧ ಭಾವದಲ್ಲಿ ಪರಿವರ್ತನೆಗೊಳಿಸು; ಅಂದರೆ ದಿವ್ಯಪ್ರಭೆಯು ಬೆಳಗುವದು. ಪ್ರಯತ್ನವನ್ನು ಸರಿಯಾಗಿ ಪರಿಪೂರ್ಣವಾಗಿ ಹೊರಸೂಸುವ ಆತ್ಮಶಕ್ತಿಯಲ್ಲಿ ಪರಿವರ್ತವೆಗೊಳಿಸು; ಅಂದರೆ ಚೈತನ್ಯ ಶಕ್ತಿಯು ತಲೆದೋರುವದು. ಭೋಗವನ್ನು ಪ್ರಶಾಂತವಾಹ ನೆವವಿಲ್ಲದ ದೇವೋನ್ಮಾದದಲ್ಲಿ ಪರಿವರ್ತನೆಗೊಳಿಸು ಅಂದರೆ ದಿವ್ಯಾನಂದವು ಅಂಕುರಗೊಳ್ಳುವದು. ವಿಂಗಡಿಕೆಗೊಂಡ ವ್ಯಕ್ತಿತ್ವವನ್ನು ಜಗದ್ಗುರುತ್ವದಲ್ಲಿ ಪರಿವರ್ತನೆಗೊಳಿಸು; ಅಂದರೆ ದೇವತ್ವವು ನೆಲೆಗೊಳ್ಳುವದು. ಪಶುತನವನ್ನು ಪಶುಪತಿತನದಲ್ಲಿ ಪರಿವರ್ತನೆಗೊಳಿಸು; ಅಂದರೆ ನೀನೇ ಪಶುಪತಿಯಾಗುವಿ. ಇದುವೆ ನಿನ್ನ ಗುರಿಯಾಗಿರಲಿ."[೯]

ಎಂಬ ಶ್ರೀ ಅರವಿಂದರ ನುಡಿಯು ಬೆಡಗಿನಲ್ಲಿ ಶೀಲಸಂಪಾದನೆಯ ಘನತೆಯು ಒಡಮೂಡಿದೆ; ಅಲ್ಲದೆ ಜೀವನ ಪಂಚಕಂಚುಕಗಳು ಶಿವನ ಪಂಚಕಲೆಗಳಲ್ಲಿ ಮಾರ್ಪಾಡುಗೊಳ್ಳುವ ರೀತಿಯೂ ಹುದುಗಿದೆ.

" ನಾವು ಇನ್ನೂ ಸಾಧಿಸಿಕೊಳ್ಳಬೇಕಾದುದೇನಿದೆ? ಪ್ರೇಮ— ಯಾಕಂದರೆ ನಾವು ಇದುವರೆಗೆ ಗಳಿಸಿಕೊಂಡುದು ಕೇವಲ ದ್ವೇಷ, ಸ್ವಯಂ ತೃಪ್ತಿ; ಜ್ಞಾನ—ಯಾಕಂದರೆ ನಾವು ಇದುವರೆಗೆ ಗಳಿಸಿಕೊಂಡುದು ಕೇವಲ ತಪ್ಪು ತಿಳಿವಳಿಕೆ ಸಂಕಲ್ಪ ವಿಕಲ್ಪ; ಆನಂದ— ಯಾಕಂದರೆ ನಾವು ಇದುವರೆಗೆ ಗಳಿಸಿಕೊಂಡುದು ಕೇವಲ ಸುಖದುಃಖ ಔದಾಸೀನ್ಯ; ಬಲ— ಯಾಕಂದರೆ ನಾವು ಇದುವರೆಗೆ ಗಳಿಸಿಕೊಂಡುದು ಕೇವಲ ಸೋಲು ಗೆಲವು ನೋವು ಸಾವು; ಬಾಳುವೆ—ಯಾಕಂದರೆ ನಾವು ಇದುವರೆಗೆ ಗಳಿಸಿಕೊಂಡುದು ಕೇವಲ ಜನನ ಮರಣಾತ್ಮಕ ಸಂಸಾರದಲ್ಲಿ ಎಡೆಯಾಟ; ಐಕ್ಯ— ಯಾಕಂದರೆ ನಾವು ಇದುವರೆಗೆ ಗಳಿಸಿಕೊಂಡುದು ಕೂಡಿ ಅಗಲುವ ಧಾವತಿ." [೧೦]

ಎಂದು ಶ್ರೀ ಅರವಿಂದರು ತಿಳಿಸುವ ಪರಿವರ್ತನೆಯ ರಹಸ್ಯವು ಪರಿಸ್ಫುಟಗೊಂಡಿರುವ ಈ ನುಡಿಗಳಲ್ಲಿ ಶಿವಶರಣರು ಸ್ಥಲವಿಡಿದು ಆಚರಿಸುವ ಆಚರಣೆಯ ಮೇಲ್ಮೆಯೂ ಹೊರಹೊಮ್ಮಿದೆ. ಇಂತು ಆಚರಿಸಿದ ಹೊರತು ಮಲತ್ರಯದ ಶೂನ್ಯತೆಯುಂಟಾಗುವಂತಿಲ್ಲ. ಶೀಲ ಸಂಪಾದನೆಯಾಗುವಂತಿಲ್ಲ. ನಿರ್ಮಲ ತನುವಿನ ಗಳಿಕೆಯಂತೂ ಮುನ್ನವೇ ಇಲ್ಲ; ಸಾಮರಸ್ಯದ ಸುಳಿವೆಂತಾಗಬೇಕು? ಸ್ಥಲವಿಡಿದಾಚರಿಸಿ ಶರಣರು ಮಾತ್ರ ಇದೆಲ್ಲವನ್ನೂ ಅಳವಡಿಸಿಕೊಂಡರು.

ಶರಣರ ಘನತೆಯು ಇಂತಪ್ಪುದಾದರೆ ಅವರ ನಿಲವಾವುದು? ಶರಣ ಎಂದರೆ ಸಾಮಾನ್ಯವಾಗಿ ಆಸರ ಎಂಬರ್ಥ ' ಶ್ರೀ ಗುರುವೆ ನೀನೆ ಶರಣನಾಗೆನಗೆ ....' ಎಂದು ಹೇಳುವದಿಲ್ಲವೇ ? ಇಲ್ಲಿ ಶರಣ ಪದವು ಕೇವಲ ' ಆಸರ ' ಎಂದೇ ಬಳಕೆಗೊಂಡಿದೆ. ಶಿವನು ಶರಣನ ಆಸರವನ್ನು ಕೋರುವಂತೆ ಶರಣನೂ ಕೋರುವದು ಶಿವನ ಆಸರವನ್ನೇ ! ಈ ಕೋರಿಕೆಯಲ್ಲಿ ಶರಣನು ಎಳ್ಳಷ್ಟು ವಂಚಕಭಾವವಿಲ್ಲದೆ ತನ್ನನ್ನು ಶಿವನಿಗಾಗಿ ಮಾರಿಕೊಂಡವನಾಗಿರಬೇಕು.

---

೯ Thoughts and Glimpses pp. 1-2.
೧೦ Thoughts aud Glimpses pp. 3-4

ಶಿವಜೀವರ ಬಾಳುವೆಯಲ್ಲಿ ಮೇಳವಿದೆ. ಅದುದರಿಂದಲೇ ಅವು ಒಂದೆಯಾಗಿವೆ. .... ತುದಿಮೊದಲಿಲ್ಲದ ಈ ಘನವಾದ ಜೀವನದ ಶ್ರೇಷ್ಠವಾದ ಅರಿವನ್ನು ಸಂಪಾದಿಸಿಕೊಳ್ಳುವದು ನಮ್ಮ ಜೀವನದಲ್ಲಿ ಪ್ರಾಮುಖ್ಯವಾದ ಸಂಗತಿಯು. ಅದರಂತೆ ಓತಪ್ರೋತವಾಗಿ ಸುರಿಯುವ ಶಿವಕಾರುಣ್ಯಕ್ಕೆ ಇಂಬು ದೊರೆಯುವಂತೆ ನಮ್ಮ ಹೃದಯವನ್ನು ತೆರೆದಿಡುವದೂ ಸಹ ಅತ್ಯಂತ ಪ್ರಾಮುಖ್ಯವಾದ ಸಂಗತಿಯು. ಹೀಗೆ ಸುರಿಯುವ ಶಿವಕಾರುಣ್ಯಕ್ಕೆ ಇಂಬುಗೊಡಲು ನಮ್ಮನ್ನು ನಾವು ತೆರೆದಷ್ಟು ಮಟ್ಟಿಗೆ ಜೀವಭಾವವು ಅಡಗುವದು; ಶಿವಭಾವವು ಅಡಕಗೊಳ್ಳುವದು.''೧೧

ಎಂದು ಹೇಳಿದ ಆರ್. ಡಬ್ಲೂ. ಟ್ರಾಯಿನ್ ಎಂಬ ಆಂಗ್ಲ ತತ್ತ್ವವೇತ್ತಿಗಳ ನುಡಿಯಲ್ಲಿ ಶರಣನ ನಿಲವನ್ನೂ ನಿರ್ವಂಚಕ ಭಕ್ತಿಯ ಹಿರಿಮೆಯ ಬಗೆಯನ್ನು ಅರಿಯಬಲ್ಲೆವು. ಹೀಗೆ ನಿರ್ವಂಚಕ ಭಕ್ತಿಯನ್ನು ಸಾಧಿಸುತ್ತಿಹ ಶರಣನಲ್ಲಿ ಪ್ರಭುಕಾರುಣ್ಯಶಕ್ತಿಯು ಇಳಿದು ಇಂಬುಗೊಳ್ಳುವಿಕೆಯು ಅನುಭವದ ಪರಿವಿಡಿಯಲ್ಲಿ ಅವಶ್ಯವಾಗಿ ಸಂಭವಿಸುವ ಒಂದು ಸಂದುಕಟ್ಟಿನ ಮೆಟ್ಟು.

ತನ್ನನ್ನು ತೆರೆದಿಡುವ ಈ ಕ್ರಮದಲ್ಲಿ ಮೇಲಿನಿಂದ ಇಳಿದು ಬರುವ ಪ್ರಭುಶಕ್ತಿಯೂ (Descending Grace) ಕೆಳಗಿನಿಂದ ಏರುವ ಪುರುಷ ಭಕ್ತಿಯೂ ( Ascending Force ) ದಿವ್ಯಜೀವನಕ್ಕೆ ಅನಿವಾರ್ಯವಾದವುಗಳು. ಭಕ್ತಿಯು ಆಧಾರದಿಂದ ಕಳೆಯೇರುತ್ತ ನಡೆದಂತೆ ಶಕ್ತಿಯು ಕಳೆಯೇರುತ್ತ ಸಾಗುವದು. ಮಾಡಿ ಮಾಟವ ಮರೆದಂತೆ, ಕೂಡಿ ಕೂಟವ ಮರೆದಂತೆ, ನೀಡಿ ನಿಲವ ಮರೆದಂತೆ ದೈವ ಭಕ್ತಿಗೆ ದಿವ್ಯಶಕ್ತಿಯ ಬೆಸುಗೆಯುಂಟಾಗುವುದು. ಭಕ್ತಿ ಶಕ್ತಿಗಳ ಈ ಬೆಸುಗೆಯೇ ಮುಕ್ತಿ. ಸ್ವಭಾವತಃ ಈ ಭಕ್ತಿ ಶಕ್ತಿಗಳು ಪರಸ್ಪರ ಭಿನ್ನವಾದವುಗಳಲ್ಲ. ಭಕ್ತಿಯೇ ಶಕ್ತಿ; ಶಕ್ತಿಯೇ ಭಕ್ತಿ. ಭಕ್ತಿಯ ಕಳೆಯ ಬಳವಿಗೆಯಾದಷ್ಟು ಶಕ್ತಿಯು ಸಾಧ್ಯವಾಗುವುದು. ಶಕ್ತಿಯ ಕಳೆಯು ಅಂಗವಿಸಿದಷ್ಟು ಭಕ್ತಿಯು ಉಕ್ಕೇರುವುದು. ದೈವ ಭಕ್ತಿಯಲ್ಲಿ ಮುಳುಗಿದಷ್ಟು ಮಟ್ಟಿಗೆ ದಿವ್ಯಪ್ರಭೆಯು ( Divine Aura ) ಪಸರಿಸಿ ಬೆಳಗುವುದು. ತನ್ಮೂಲಕ ಕರ್ತೃತ್ವ ಶಕ್ತಿಯು ಕಂಗೊಳಿಸುವುದು.

ಆಧಾರ (ಅಂಗ) ಶುದ್ಧಿಗಾಗಿ ಪುರುಷ ಪ್ರಯತ್ನವು ಅಂದರೆ ವಂಚನೆ ಬೆರೆಯದ ಭಕ್ತಿಯು ಅತ್ಯವಶ್ಯವಾದುದು. ಶುದ್ಧಿಯಾದಷ್ಟು ಸಿದ್ಧಿಯೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಶುದ್ಧಿಯಾಗುತ್ತ ನಡೆದಂತೆ ಪ್ರಭುಕಾರುಣ್ಯವು ದೊರೆಯುವುದು. ಪ್ರಭುಕಾರುಣ್ಯವಿಲ್ಲದೆ ಶುದ್ಧಿಯ ಕ್ರಮವೂ ಇಲ್ಲ ಎಂಬುದನ್ನು ಮರೆಯಲಾಗದು. ಇದನ್ನೇ ಕುರಿತು ಮಗ್ಗೆಯ ಮಾಯಿದೇವರೂ, ಮೈಲಾರ ಬಸವಲಿಂಗ ಶರಣರೂ

" ಭಕ್ತಿ ಶಿವಪ್ರಸಾದ ಜನನೀ ಭವನಂ ಶಿವನ ಪ್ರಸಾದವಾ ಭಕ್ತಿಗೆ ಜನ್ಮಭೂಮಿ" ೧೨

---

೧೧ In Tune with the Infinite p. 5 ೧೨ ಶತಕತ್ರಯ ೧ ಪದ್ಯ ೮

ಚಾರುಸದ್ಭಕ್ತಿಗೆ ಪ್ರಸಾದ ಜನನಸ್ಥಾನ।
ಧೀರಪ್ರಸಾದಕ್ಕೆ ಭಕ್ತಿ ಜನನಸ್ಥಾನ।
ವೀ ರೀತಿಯಿಂದ ಸದ್ಭಕ್ತಿ ಪ್ರಸಾದಕ್ಕೆ ಬೀಜವೃಕ್ಷನ್ಯಾಯವು ॥ ೧೪

ಎಂದು ಹೇಳಿರುವರು. ಈ ರಹಸ್ಯವು ತಿಳಿಯದೆ ಭಕ್ತಿಯಿಲ್ಲದೆ ಕೋರಿದ ಪ್ರಭುಕಾರುಣ್ಯವೂ, ಪ್ರಭುಕಾರುಣ್ಯವಿಲ್ಲದೆ ಆಚರಿಸಿದ ಭಕ್ತಿಯೂ ವ್ಯರ್ಥವಾದವುಗಳು. ಪಡುವಣದವರಂತೆ ಕೇವಲ ಪುರುಷ ಪ್ರಯತ್ನಬೇಕು ಎಂದು ಹೇಳುವದೂ ತಪ್ಪು; ಮೂಡಣದವರಂತೆ ಕೇವಲ ಪ್ರಭುಕಾರುಣ್ಯವು ಒದಗಲಿ ಎಂದು ಹೇಳುವದೂ ತಪ್ಪು. ಪುರುಷಪ್ರಯತ್ನವೂ ಪ್ರಭುಕಾರುಣ್ಯವೂ ಪರಸ್ಪರ ಪೂರಕವಾದವುಗಳು. ಪ್ರಭುಕಾರುಣ್ಯಕ್ಕೋಸುಗ ಪ್ರಯತ್ನಪೂರ್ವಕವಾಗಿ ತೆರೆದಿಟ್ಟಷ್ಟು ಸ್ಥಳವು ತುಂಬಿಕೊಳ್ಳುವುದು; ಅಂದರೆ ಅಳಿದುಕೊಂಡಷ್ಟು ಉಳಿದುಕೊಳ್ಳುವುದು.

ಅಳಿದು ಕೂಡಿ ಸಂಸಾರವನ್ನು ನಿಸ್ಸಾರ ಮಾಡುವದರಲ್ಲಿಯೂ ಪುರುಷಾರ್ಥವಿಲ್ಲ. ಅದರಂತೆ ಉಳಿದು ಕೂಡಿ ಪ್ರಗತಿಯನ್ನು ಪ್ರತಿಬಂಧಕ್ಕೀಡುಮಾಡುವುದರಲ್ಲಿಯೂ ಪುರುಷಾರ್ಥವಿಲ್ಲ. ಅಳಿಯದೆ ಉಳಿಯದೆ ಕೂಡುತ್ತ ನಡೆವುದರಲ್ಲಿ ಮಾತ್ರ ನಿಜವಾದ ಪುರುಷಾರ್ಥವುಂಟು. ಇಂಥ ಪುರುಷಾರ್ಥವನ್ನು ಸಾಧಿಸಿದವನು ಶರಣನು, ಸದ್ಭಕ್ತನು. ಜೀವ ಶಿವರಲ್ಲ ಭಾವಸಮನ್ವಯವಿದೆ. ಜೀವವಳಿದರೆ ವ್ಯಕ್ತಿತ್ವವು ಕಳೆದು ಹೋಗುವುದು. ಆದುದರಿಂದ ಅಳಿಯಬೇಕಾದುದು ಜೀವವಲ್ಲ; ಜೀವವ ಜಂಜಡ, ಭಿನ್ನ ಭಾವ, ಭಿನ್ನ ದೃಷ್ಟಿ, ಬಿದಿರ್ಗಣ್ಣು. ಇದು ಗುರು-ಲಿಂಗ-ಜಂಗಮ ಸಕೀಲಾನುವರ್ತನದಿಂದ ಎಂಬದನ್ನು ತಿಳಿಸಿಯೇ ಇದೆ. ಹೀಗೆ ಭಾವವಳಿದರೆ ಜೀವನೇ ಶಿವನಾಗುವನು. ಅಂದರೆ ಲಿಂಗಾನುಸಂಧಾನಯೋಗಶಕ್ತಿಯಿಂದ ಶರಣನು ಶಿವನಾಗುವನು. ಈ ಭಿನ್ನಭಾವವಳಿದ ಜೀವನಿಗೆ ಅಂಗನೆಂದೂ ಹೆಸರು. ಅಂಗಲಿಂಗಸಮರಸದಲ್ಲಿ ವ್ಯಕ್ತಿತ್ವವು ನಷ್ಟವಾಗದೆ ತಾಯಿಯ ಗರ್ಭದಲ್ಲಿಯ ಕೂಸಿನ ವ್ಯಕ್ತಿತ್ವದಂತೆ ಅದು ಇದ್ದೇ ಇರುವುದು.

ಸಾಮರಸ್ಯವು ಲಿಂಗದೊಡನೆಯಾದರೆ ಆ ಲಿಂಗದ ನೆಲೆಕಲೆಗಳಾವವು? ಸ್ಫುರಣಾತ್ಮಕಜ್ಞಾನದ ( Intuitive knowledge ) ಗಟ್ಟಿಯೇ ಲಿಂಗ.

" ಆದಿ ಲಿಂಗ ಅನಾದಿ ಶರಣನೆಂಬುದು ತಪ್ಪದು. ಆದಿ ಗುರು ಅನಾದಿ ಶಿಷ್ಯನೆಂಬುದು ತಪ್ಪದು ಗುರುವಿಂಗೆ ಶಿಷ್ಯಂಗೆ ಏನು ದೂರ ಹೇಳಾ ದೇವಾ ! ಮುಳ್ಳುಗುತ್ತುವರೆ ತೆರಹಿಲ್ಲದ ಪರಿಪೂರ್ಣದ ಘನವ ಒಬ್ಬರಲ್ಲಿ ಒಂದು ಭಾವವುಂಟೇ? ಎನ್ನೊಳಗೆ ಬೆಳಗುವ ಜ್ಞಾನ ನಿನ್ನ ಹೃದಯ ಕಮಲದೊಳಗಣ ಅವ್ಯಕ್ತ ಲಿಂಗ. ನಿನ್ನೊಳಗೆ ತೊಳಗಿ ಬೆಳಗುವ ಜ್ಯೋತಿರ್ಲಿಂಗ ಎನ್ನ ಸುಜ್ಞಾನಲಿಂಗ........ಕಾಣಾ ಬಸವಣ್ಣಾ"೧೫

---

೧೪ ವೀ. ಷ. ಸಿದ್ಧಾಂತ ೧-೧೭ ೧೫ ಶೂನ್ಯಸಂಪಾದನೆ ವ. ೫ ಪು. ೭೪

ಎಂದು ಚೆನ್ನಬಸವಣ್ಣನವರು ನುಡಿಯುವಾಗ ಈ ಸ್ಫುರಣಾತ್ಮಕ ಜ್ಞಾನವನ್ನೇ ಎದುರಿಟ್ಟುಕೊಂಡಿರುವರು. ಈ ಜ್ಞಾನಕ್ಕೆ ಶ್ರುತಿಜ್ಞಾನವೆಂದೂ ಹೆಸರು. ಯಾಕೆಂದರೆ ಶ್ರುತಿ ಅಥವಾ ವೇದವು ಪುರುಷ ಪ್ರಯತ್ನದಿಂದ ಹುಟ್ಟಿದುದಲ್ಲ. ಅದು ದೇವೋನ್ಮಾದದ ನಿಬ್ಬೆರಗಿನ ಸ್ಫೂರ್ತಿಯಿಂದ ಹೊರಹೊಮ್ಮಿದ ದೈವೀವಾಣಿಯು.

ಈ ಸ್ಫುರಣ ಜ್ಞಾನವು ಅತ್ಯಂತ ತ್ವರಿತಗತಿಯುಳ್ಳದೂ ಚೈತನ್ಯಾತ್ಮಕವಾದುದೂ ಆಗಿರುವದರಿಂದ ಇದಕ್ಕೆ ಜಂಗಮವೆಂದೂ, ಎಂದೆಂದೂ ಅಳಿವಿಲ್ಲದುದರಿಂದ ಅಕ್ಷರವೆಂದೂ, ಇದು ಎಲ್ಲವನ್ನೂ ತನ್ನಲ್ಲಿ ಇಂಬಿಟ್ಟುಕೊಳ್ಳುವದರಿಂದ ಶಿವನೆಂದೂ, ಎಲ್ಲದರಿಂದ ಹೆಚ್ಚಿನದೂ ದೊಡ್ಡದೂ ಆಗಿರುವದರಿಂದ ಬ್ರಹ್ಮವೆಂದೂ, ಎಲ್ಲವನ್ನೂ ವ್ಯಾಪಿಸಿ ಹತ್ತು ಬೆರಳು ಹೆಚ್ಚಾದುದರಿಂದ ಘನವೆಂದೂ ಹೆಸರು. ಇಂತಪ್ಪ ಘನಕ್ಕೆ ಖಂಡಿತವಿಲ್ಲ. ಆದುದರಿಂದ ಇದಕ್ಕೆ ಅಖಂಡ ಲಿಂಗವೆಂದೂ ಹೆಸರು. ಇಂಥ ಅಖಂಡ ಲಿಂಗದ ಅವಿರಳ ಸಂಗದಿಂದ ಅಂಗದೋಷವಳಿದು ಪ್ರಸಾದಕಾಯವೆಡೆಗೊಂಬುವಂತೆ ದುಡಿದುಕೊಳ್ಳುವದೇ ಶರಣರ ಸಂಪಾದನೆಯ ವೈಶಿಷ್ಟ್ಯವು. ತನ್ನೊಳಗೆ ಇಂಬಿಟ್ಟುಕೊಳ್ಳುವ ಈ ಅಖಂಡ ಲಿಂಗವು ಅಂತರಂಗ, ಬಹಿರಂಗ, ಆತ್ಮಸಂಗವೆಂಬ ತ್ರಿವಿಧವನ್ನು ಅತಿಗಳೆದುದು. 'ಇಂಬಿಡು' ಎಂಬ ಶಬ್ದವು ಶಿವಶರಣರ ವಚನಗಳಲ್ಲಿ ಆಗಾಗ್ಗೆ ಬರುತ್ತಿದೆ. ಲಿಂಗಾಂಗ ಸಾಮರಸ್ಯದಲ್ಲಿ 'ಇಂಬಿಟ್ಟುಕೊಳ್ಳು' ಇದಕ್ಕೆ ವಿಶೇಷವಾದ ಅರ್ಥವುಂಟು.

> "ಎನ್ನ ಕರಸ್ಥಲದ ಮಧ್ಯದಲ್ಲಿ ಪರಮ ನಿರಂಜನ ಕುರುಹು ತೋರಿದ; ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆಯ ತೋರಿದ; ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ; ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ; ಎನ್ನೊಳಗೆ ತನ್ನ ತೋರಿದ; ತನ್ನೊಳಗೆ ಎನ್ನನಿಂಬಿಟ್ಟುಕೊಂಡ ಮಹಾ ಗುರುವಿಗೆ ನಮೋ ನಮೋ ಎನುತಿರ್ದೆನಯ್ಯ ಅಖಂಡೇಶ್ವರಾ."೧೫

ಹೀಗೆ ಇಂಬಿಟ್ಟುಕೊಳ್ಳುವ ಈ ಅಖಂಡ ಲಿಂಗದ ವರ್ಣನೆಯಲ್ಲ ಸಹಜವಾಗಿ ಷಟ್ಸ್ಥಲದ ವರ್ಣನೆಯೂ ಬಂದಿದೆ.

ಇಂತಪ್ಪ ಸ್ಫುರಣಾತ್ಮಕ ಜ್ಞಾನದ ಪಿಂಡವೆನಿಸಿದ ಈ ಅಖಂಡ ಲಿಂಗವು ತನ್ನೊಳು ಅಡಕಗೊಂಡು ತನ್ನಿಂದಲೆ ಹೊರಹೊಮ್ಮಿ ತನ್ನನ್ನು ಆನಂದ ಸಾಗರದಲ್ಲಿ ತೇಲಿಸಿ ಬಿಡುವುದರಿಂದ ಶಿವಶರಣರು ಅನೇಕ ಸಲ ಇದನ್ನು 'ಶರಣಸತಿ ಲಿಂಗಪತಿ' ಎಂಬ ಮಾತಿನಲ್ಲಿ ಪತಿಗೆ ಹೋಲಿಸಿದಂತೆ ಎತ್ತಿ ಮುದ್ದಾಡುವ ಮಗುವೆಂದು ಉಪಮೆಯಿಂದ ವರ್ಣಿಸುವದೂ ಉಂಟು.೧೬ ಸತಿಪತಿಗಳು ಪರಸ್ಪರರ ಇಲ್ಲವೆ ಹೆತ್ತವರು ತಮ್ಮ ಮಕ್ಕಳ ನೋಟಕೂಟದಲ್ಲಿ ತಮ್ಮ ತಾವು ಮೈಮರೆತು ಬಿಡುವಂತೆ

---

೧೫ ವ. ಶಾ. ಸಾ. ಭಾಗ ೧ (ಪೂರ್ವಾರ್ಧ) ವ. ೧೭ ಪು. ೬೫

೧೬ ವ. ಶಾ. ಸಾ. ಭಾಗ ೧ (ಪೂರ್ವಾರ್ಧ) ವ. ೧೩. ಪು. ೬೪

ಲಿಂಗಾನುಭವಿಗಳು ಲಿಂಗದ ನೋಟಕೂಟದಲ್ಲಿ ನಿಬ್ಬೆರಗುಗೊಳ್ಳುವರು. ಅವರ ಈ ನಿಬ್ಬೆರಗಿನ ಅವಸ್ಥೆಯನ್ನರಿಯಲು ಇಲ್ಲಿ ಉದಾಹರಿಸಿರುವ ಮಾತುಗಳು ಸಾಕು.

ಉಂಡಂತಾದುದು ಸುಖವೆಡೆ
ಗೊಂಡಂತಾದುದು ಮನಕ್ಕೆ ದಿವ್ಯಾಮೃತಮುಂ ॥
ಕೊಂಡಂತಾದುದು ನಿಮ್ಮಂ
ಕಂಡಾಕ್ಷಣದೊಳ್ ( ಅಖಂಡ ) ಲಿಂಗ ಪ್ರಭವೆ ॥

ತೆಗೆದಪ್ಪುತೆ ಬಿಗಿಪಪ್ಪುತೆ
ನೆಗೆದಾಡುತೆ ಕೊಬ್ಬಿ ಕೊನರಿ ಕುಡಿವರಿಯುತ್ತುಂ ॥
ಹೊಗಳುತೆ ಹೊಮ್ಮುತೆ ರಮಿಸುವೆ
ನಗಲದೆ ನಿಮ್ಮಂ ( ಅಖಂಡ ) ಲಿಂಗ ಪ್ರಭವೆ ॥

ಪುಳಕದ ಜಳಕದೊಳಂಗಂ
ಮುಳುಗಿ ಮನಂ ತುಳುಕಿ ತೂಗಿ ತೊನೆದಾಡುತ್ತುಂ ॥
ಇಳಿವ ಸುಖಾನಂದಾಶ್ರುವ
ನೆಳೆಸುವೆ ಸತತಂ ( ಅಖಂಡ ) ಲಿಂಗ ಪ್ರಭವೆ ॥

ನಂಬಿಸಿ ಚುಂಬಿಸಿ ಪದಯುಗ
ಮಂ ಬಿಗಿಬಿಗಿದಪ್ಪಿ ಹೆಪ್ಪನಿಟ್ಟಂತೆ ಮನಂ ॥
ತುಂಬಿದ ತೊರೆಯುವೊಲಿಹ ಸುಖ
ಮಂ ಬಯಸುವೆನಾಂ ( ಅಖಂಡ ) ಲಿಂಗ ಪ್ರಭವೆ ॥

ಆದುದರಿಂದ 'ನೀನಾರೆಂಬದನ್ನರಿ' 'Know thyself first' ಎಂದು ಹೇಳುವ ಮಾತುಗಳು ಕೇವಲ ಅತಿ ಮೊದಲನೆಯ ಮೆಟ್ಟಿಲಾಗಿರುವವು.

ಕರದಿಷ್ಟಲಿಂಗದ ಸ್ವರೂಪವನ್ನಷ್ಟು ಮನದಂದರೆ ಈ ಇಂಬಿಡು ಶಬ್ದದ ವೈಶಿಷ್ಟ್ಯವು ಇನ್ನಿಷ್ಟು ಸ್ಪಷ್ಟವಾಗುತ್ತದೆ. ಯಾವದಕ್ಕೆ ಬಣ್ಣವಿರುವದಿಲ್ಲವೋ ಅದು ಇಲ್ಲ ಬಣ್ಣದ ಪದಾರ್ಥವು. ಅದು ಕಪ್ಪು ಇರುವದರಿಂದ ಎಲ್ಲವನ್ನೂ ತನ್ನೊಳಗೆ ಇಂಗಿಸಿಕೊಳ್ಳುವುದು; ಇಂಬಿಟ್ಟುಕೊಳ್ಳುವದು. ಅದೇ ಬಿಳಿಯ ಬಣ್ಣದ ಮಾತು ಹಾಗಲ್ಲ; ಅದು ಸೂರ್ಯಕಿರಣಗಳನ್ನು ಹೊರಗೆ ಹಾಕುವುದು. ಇಂಬಿಟ್ಟುಕೊಳ್ಳುವ ರೂಢಿಯು ಆ ಬಣ್ಣಕ್ಕಿಲ್ಲ. ಆದುದರಿಂದಲೇ ಲಿಂಗಕ್ಕೆ ಕರಿಯ ಕಂತೆಯಿರುತ್ತದೆ. ಕಣ್ಣಿನ ಕಿರಣಗಳನ್ನು ಸೆರೆಹಿಡಿಯಲು ಇದು ಸಹಾಯವನ್ನೀಯುತ್ತಿದೆ. ಹೀಗೆ ಅಖಂಡ ಲಿಂಗವು ಇಂಬಿಟ್ಟುಕೊಳ್ಳುವ ಕ್ರಮದಲ್ಲಿ ಶಿವ-ಶಕ್ತಿ-ಶರಣ ಇವರೊಳಗೆ ಶರಣನು ಯಾವಾಗಲೂ ತನ್ನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳುವನು.

ಇಂತಪ್ಪ ಅಖಂಡ ಲಿಂಗದ ಅವಿರಳ ಸಂಗದಿಂದ ಅಂಗದೋಷಗಳಳಿವುದೇ ಶೂನ್ಯಸಂಪಾದನೆ. ಲಿಂಗಾಂಗ ಸಾಮರಸ್ಯ ದೊರೆಕೊಳ್ಳುವುದೇ ಶೀಲಸಂಪಾದನೆ.

೨೮-೧೨-೧೯೩೮

---

# ಇಷ್ಟಲಿಂಗ ರಹಸ್ಯ

(ಶ್ರೀ ಗುರುಸಿದ್ಧ ಪ್ರಭುದೇವರು ನವಕಲ್ಯಾಣಮಠ ಅವರ ರನ್ನ ಮಹೋತ್ಸವದ ಕಾಲಕ್ಕೆ (೧೫--೮--೧೯೪೪) ಶ್ರೀ ಕುಮಾರಸ್ವಾಮಿಗಳು ಮಾಡಿದ ಭಾಷಣದ ಸಾರಾಂಶವಿದು.)

ಸಂಗ್ರಾಹಕರು : ಶ್ರೀ ವೀ. ರು. ಕೊಪ್ಪಳ, ಎಂ. ಎ., ಬಿ. ಟಿ., ಧಾರವಾಡ.

ವೀರಶೈವವು ಶೈವಧರ್ಮದ ಒಂದು ಪ್ರಭೇದವು. ಶೈವಧರ್ಮದ ಬೇರುಗಳು ಬಹು ಪುರಾತನ ಕಾಲದಿಂದ ನಮ್ಮೀ ಭರತಭೂಮಿಯಲ್ಲಿ ಇಳಿದಿದ್ದರೂ ಅದರಲ್ಲಿ ತೋರಿದ ಸಪ್ತವಿಧಗಳು ಎಂದಿನಿಂದ ಬಳಕೆಯಲ್ಲಿ ಬಂದುವು ಮತ್ತು ಅವನ್ನು ಯಾರು ರೂಢಗೊಳಿಸಿದರು ಎಂಬುದನ್ನು ಐತಿಹಾಸಿಕ ದೃಷ್ಟಿಯಿಂದರಿಯುವದು ಕಷ್ಟಸಾಧ್ಯವಾಗಿದೆ. ಇಂತಿರಲು ಶೈವದ ಕೊನೆಯಾಗಿದ್ದ ವೀರಶೈವವು ಉಗಮುಗೊಂಡ ಬಗೆಯೂ ಸಹ ಅನೇಕ ತರ್ಕವಿತರ್ಕಗಳಿಗೆ ಅವಕಾಶವನ್ನಿತ್ತಿರುವ ಮಾತು ಆಶ್ಚರಿಯಲ್ಲ; ಅದು ಹೊಸತೂ ಅಲ್ಲ. ಶಿವಾಗಮಗಳ ಹಲಕೆಲವು ಭಾಗಗಳಲ್ಲಿ ವೀರಶೈವದ ಉಲ್ಲೇಖವಿರುವದರಿಂದ ಆಗಮಗಳ ಕಾಲದಿಂದಲೇ ಅದು ಪ್ರಚಾರದಲ್ಲಿತ್ತೆಂದು ಸ್ಥೂಲಮಾನವಾಗಿ ಹೇಳುವುದು ನ್ಯಾಯವಾಗಿಯೇ ಇದೆ. ಆದರೆ ವ್ಯಕ್ತಿಯ ನಿಲವಿಗೆ ಹುಟ್ಟು ಬೆಳವಣಿಗೆ ಬದಲಾವಣೆಗಳಿರುವಂತೆ ತತ್ತ್ವದ ನಿಲವಿನಲ್ಲಿಯೂ ಇವನ್ನು ಕಾಣಬಹುದೆಂಬುದನ್ನು ನೆನಿಸಿದರೆ ಆಗಮಗಳಲ್ಲಿ ತೋರಿದ ವೀರಶೈವದ ನಿಲವು ಬೆಳೆಯುತ್ತ ಕಾಲಕಾಲಕ್ಕೆ ಪರಿವರ್ತನೆಯನ್ನು ಪಡೆಯುತ್ತ ಸಾಗಿತೆಂಬುದನ್ನು ಅರಿಯಬೇಕು. ಮತಧರ್ಮವೊಂದರ ಆಚರಣೆಯಲ್ಲಿ ಮಲೆತು ನಿಂತ ಸಂಗತಿಗಳು ಮೂಡಿದಾಗ ಮಹಾನುಭಾವರು ಪ್ರಗತಿಪರದೃಷ್ಟಿಯುಳ್ಳವರಾಗಿ ಅದರ ಉತ್ತಮಿಕೆಗಾಗಿ ಪ್ರಯತ್ನಿಸಿರುವ ಉದಾಹರಣೆಗಳು ಎಲ್ಲ ಮತಧರ್ಮಗಳ ಇತಿಹಾಸದಲ್ಲಿಯೂ ಕಂಡುಬರುವವು. ಅದರಂತೆ ವೀರಶೈವದ ನಂಬುಗೆಯಲ್ಲಿಯೂ ಈ ಮಾರ್ಪಾಟಗಳನ್ನರಿಯುವದಾದರೆ ಅವು ಜೀವಂತ ಧರ್ಮದ ಸಾಮಾನ್ಯವಾದ ಲಕ್ಷಣಗಳೆಂದೇ ತಿಳಿಯಬೇಕು.

ಆಗಮ ಪ್ರತಿಪಾದಿತವಾದ ವೀರಶೈವದ ಅಳವಡಿಕೆಯಲ್ಲಿ ಒದಗಿದ ತೊಂದರೆಗಳನ್ನರಿತು, ಅದರಲ್ಲಿಯ ಲೋಪದೋಷಗಳನ್ನು ತಮ್ಮ ಬಗೆಯಲ್ಲಿ ತಿದ್ದಿ ತಮ್ಮ ಅನುಭವದ ಆಚರಣೆಗೆ ಸುಗಮ ಮಾರ್ಗವನ್ನುಂಟುಮಾಡಿಕೊಂಡವರು ಶ್ರೀಮದ್ ಬಸವಾದಿ ಶಿವಶರಣರು. ಶುದ್ಧ ಶಿವಾನುಭಾವಿಗಳಾದ ಅವರ ಅನುಭಾವ ಜೀವನದ ಆದರ್ಶದಲ್ಲಿ, ಅದರ ಪಡಿನೆಳಲೆನಿಸಿದ ಅವರ ವಚನಶಾಸ್ತ್ರದಲ್ಲಿ ಮೂಡಿರುವ ವೀರಶೈವದ ಬಗೆಯು ಆಗಮಕಾರರು ಕಂಡ ವೀರಶೈವಕ್ಕಿಂತ ಭಿನ್ನವಾದುದು. ಶಿವಶರಣರು

ಸತ್ಯಾನ್ವೇಷಣದಲ್ಲಿ ಶಿವಾಗಮಗಳನ್ನೆ ಬಹುಮಟ್ಟಿಗೆ ಅನುಸರಿಸುವಂತೆ ಕಂಡು ಬರಬಹುದು; ಆದರೆ ಆಳವಾಗಿ ಆರೈದು ನೋಡಿದರೆ ಸಂಪ್ರದಾಯಿಕ ದೃಷ್ಟಿಯನ್ನು ಕೆಲಮಟ್ಟಿಗೆ ಅವಲಂಬಿಸಿದ್ದರೂ ಸ್ವತಂತ್ರ ದೃಷ್ಟಿಯಿಂದ ಸತ್ಯಾನ್ವೇಷಣೆ ಮಾಡಿ ಶಿವಾಗಮಗಳಿಗಿಂತಲೂ ಭಿನ್ನವಾದ ಮತ್ತು ಭವ್ಯವಾದ ದರ್ಶನವೊಂದನ್ನು ನಿರ್ಮಿಸಿ ಕೊಂಡರೆಂಬುದನ್ನರಿಯಲು ಸಾಕಷ್ಟು ಅವಕಾಶವಿರುವದು. ದ್ರಾವಿಡರ ಧರ್ಮದ ನಂಬುಗೆವಿಡಿದು ಆರ್ಯರ ಪರಿಭಾಷೆಯಲ್ಲಿ ಆಗಮಕಾರರು ವೀರಶೈವದ ನಿರೂಪಣೆ ಯನ್ನೇನೋ ಮಾಡಿದರು. ಆದರೆ ಅದರಲ್ಲಿ ಪೌರಾಣಿಕ ದೃಷ್ಟಿಯೇ ಹೆಚ್ಚಾಗಿತ್ತ ಲ್ಲದೆ ಪ್ರಗತಿಪರ ದೃಷ್ಟಿಯಿರಲಿಲ್ಲ. ಅವರು ಪ್ರಚಾರಗೊಳಿಸಿದುದು ಕೇವಲ ಸನಾತನ ವೆನಿಸಿದ ಶೈವಧರ್ಮವನ್ನು ಮತ್ತು ಅದರ ಪ್ರಭೇದವನ್ನು. ಅದರಲ್ಲಿ ಅವರಿಗಿದ್ದ ವೀರವೃತ್ತಿಯನ್ನು ಪರ್ಯಾಲೋಚಿಸಿದರೆ ಆಗಿನ ಕಾಲಕ್ಕನುಸಾರವಾಗಿ ವೀರಶೈವರೆಂಬ ಹೆಸರು ಅವರಿಗೆ ಸಲ್ಲುವಂತಿತ್ತು. ವಚನಕಾರರು ಮಾತ್ರ ಶೈವದ ಕಲ್ಪನೆಯ ವಿಕಾಸದಲ್ಲಿ ಆಗಮಕಾರರಿಗಿಂತಲೂ ಮುಂದುವರಿದವರು. ಪ್ರಾಗತಿಕ ದೃಷ್ಟಿಯು ಅವರದಾಗಿದ್ದುದರಿಂದ ಆಗಮಕಾರರ ಶೈವ ವೀರಶೈವಗಳ ಕಲ್ಪನೆಯಲ್ಲಿ ಅದೆಷ್ಟೋ ಸುಧಾರಣೆಯನ್ನುಂಟುಮಾಡಿದರು. ಈ ದೆಸೆಯಿಂದ ಆಗಮಕಾರರು ಸನಾತನಿ ಗಳಾಗಿ ಪೌರಾಣಿಕ ವೀರಶೈವವನ್ನೂ ವಚನಕಾರರು ಸುಧಾರಕರಾಗಿ ಪ್ರಗತಿಪರ ವೀರಶೈವವನ್ನೂ ಪ್ರತಿಪಾದನೆಗೊಳಿಸಿದರೆಂದು ಹೇಳಬಹುದು.

ವಚನಕಾರರು ಸಂಪ್ರದಾಯವನ್ನವಲಂಬಿಸಿ ಶಿವನು ಶಕ್ತಿವಿಶಿಷ್ಟನೆಂದು ಒಪ್ಪಿರುವರು. ಸೃಷ್ಟಿಯ ಬಗೆಗೆ ಮಾತ್ರ ಆಗಮಕಾರರಿಗಿಂತ ಅವರು ಭಿನ್ನಾಭಿ ಪ್ರಾಯಪುಳ್ಳವರು. ಆಗಮಕಾರರು ದೃಷ್ಟಿಸೃಷ್ಟಿಗಳೆರಡು ಒಂದೇ ವಸ್ತುವಿನ ಅಂತರ್ಬಾಹ್ಯಸ್ವರೂಪಗಳೆಂದು ನಂಬಿದ್ದರೂ ಸೃಷ್ಟಿಯನ್ನು ಕಿರಿದುಮಾಡಿ ದೃಷ್ಟಿ ಯನ್ನು ಹಿರಿದುಮಾಡಿದರು. ಸೃಷ್ಟಿಗೆ ಶಕ್ತಿಯೆಂದೂ ದೃಷ್ಟಿಗೆ ಭಕ್ತಿಯೆಂದೂ ಕರೆದು ಶಕ್ತಿಗಿಂತ ಭಕ್ತಿಯೇ ಅಧಿಕವೆಂದು ಸಾರಿದರು. ದೊಡ್ಡದಾದ ಅಗ್ನಿಜ್ವಾಲೆ ಯಲ್ಲಿ ದೀಪದ ಆಕೃತಿಯು ವಿಭಾಗಿಸಲ್ಪಡುವಂತೆ ಆ ಪರಮೇಶ್ವರ ಶಕ್ತಿಯಲ್ಲಿ ಭಕ್ತಿರೂಪವು ವಿಭಾಗಿಸಲ್ಪಟ್ಟಿದೆ. ಮಹಾಜ್ವಾಲೆಯಂತಿರುವ ಶಕ್ತಿಯಲ್ಲಿ ಹೊಗೆಗೆ ಸದೃಶವಾದ ವಾಸನಾ ಅಂದರೆ ಸೃಷ್ಟಿ ಸಾಮರ್ಥ್ಯವು ಇರುವದು; ದೀಪದಂತೆ ಸುಪ್ರ ಕಾಶಿತವಾದ ಭಕ್ತಿಯಲ್ಲಿ ವಾಸನಾರೂಪವಿಲ್ಲ. ಕಾರಣ ಶಕ್ತಿಯು ಪ್ರವೃತ್ತಿಯೆಂದು ಭಕ್ತಿಯು ನಿವೃತ್ತಿಯೆಂದೂ, ಶಕ್ತಿಯು ಅಧೋಮುಖಿಯೆಂದು ಭಕ್ತಿಯು ಊರ್ಧ್ವಮುಖಿಯೆಂದೂ,ಶಕ್ತಿಯು ಸಮಾಯೆಯೆಂದು ಭಕ್ತಿಯು ನಿರ್ಮಾಯೆಯೆಂದೂ ಆಗಮಕಾರರು ಬಗೆದರು. ಸಾಮಾನ್ಯವಾಗಿ ಭಾರತೀಯರಿಗೆಲ್ಲ ಬಹಿರಂಗಕ್ಕಿಂತ ಅಂತರಂಗವೇ ಮಿಗಿಲೆನಿಸಿದುದರಿಂದ ಶಕ್ತಿಯನ್ನು ಒತ್ತಿನೂಕಿ ಭಕ್ತಿಯನ್ನು ಎತ್ತಿ

ಹಿಡಿದರು ಆಗಮಕಾರರು. ಭಕ್ತಿಶಕ್ತಿಗಳಲ್ಲಿ-ದೃಷ್ಟಿಸೃಷ್ಟಿಗಳಲ್ಲಿ ಸಮಾನ್ವಯ ದೃಷ್ಟಿಯಿಲ್ಲದ್ದರಿಂದ ಸೃಷ್ಟಿಯು ಕ್ಷಣಭಂಗುರವಾಯಿತವರ ತಿಳಿಗೆ. ಶಕ್ತಿಯ ವಿಸ್ತಾರವೆ ಸೃಷ್ಟಿಯಾಗಿದ್ದುದರಿಂದ ಸೃಷ್ಟಿಯು ಸಟೆಯಿಲ್ಲ, ದಿಟವೆಂದು ಸಾರಿದರು ವಚನಕಾರರು. ಅವರಿಗೆ ಮರ್ತ್ಯವೆಂಬುದು ಕರ್ತಾರನ ಕಮ್ಮಟ—ಟಂಕಸಾಲೆ. ಶುದ್ಧ ನಾಣ್ಯಗಳ ನಿರ್ಮಾಣಕ್ಕೂ ಸಲುವಳಿಗೆಗೂ ಆಶ್ರಯಸ್ಥಾನವದು. ಅಂತರಂಗ ಬಹಿರಂಗಗಳ ಕಡುಗಲಿತನಕ್ಕೆ ಮತ್ತು ಶುದ್ಧ ಶೀಲಸಂಪಾದನೆಗೆ ಅದೊಂದು ಗರುಡಿಯ ಶಾಲೆ. ಅದು ಅನಂತ ರಹಸ್ಯಗಳ ಆಗರವೂ ಅಹುದು; ಅವನ್ನರಿಯಬೇಕು ಸೃಷ್ಟಿಯ ಆಳವಾದ ಅಂತರಂಗದ ಗರ್ಭಗುಡಿಯಲ್ಲಿ ಬಗೆಬಗೆಯ ಅನರ್ಘ್ಯವಾದ ಜ್ಞಾನರತ್ನಗಳೂ ಹುದುಗಿವೆ;ಅವನ್ನು ಹೊರದೆಗೆಯಬೇಕು, ಅದಕ್ಕಾಗಿ ನಾವು ಮತ್ತೆ ಮತ್ತೆ ಆಳವಾಗಿ ಮುಳುಗಬೇಕು. ಈ ಅನಂತರಹಸ್ಯವನ್ನರಿಯುವಾಗ ಈ ಅನರ್ಘ್ಯ ರತ್ನಗಳನ್ನು ಹುಡುಕಿ ತೆಗೆಯಲು ಆಳವಾಗಿ ಮುಳುಗುವಾಗ ಇತಿಮಿತಿಯಿಲ್ಲದೆ ಅಂಕೆಶಂಕೆಗಳೂ ಅಡೆತಡೆಗಳೂ ಕಷ್ಟನಷ್ಟಗಳೂ ವ್ಯಸನವಿಡ್ತುರಗಳೂ ಸಾವುನೋವುಗಳೂ ಎದುರಾಗಬಹುದು. ಆದರೆ ಅವುಗಳಿಗೆ ಅಂಜದೆ ಅಳುಕದೆ ಹೆದರದೆ ಹೇಸದೆ ಬೆವರದೆ ಬೆಚ್ಚದೆ ಭಾವಯೋಗದ ಬಲದಿಂದ ಅಪರೋಕ್ಷಜ್ಞಾನವನ್ನು ಪಡೆದು ಅದರಿಂದ ಶೋಕನಿವೃತ್ತಿಯನ್ನು ಪಡಯಲೂ ಈ ಸೃಷ್ಟಿಯಮೇಲೆ ನಿರಂಕುಶ ಪ್ರಭುತ್ವವನ್ನು ಪ್ರಸ್ಥಾಪಿಸಲೂ ಅವಕಾಶವುಂಟು. ಆದ್ದರಿಂದ ಈ ಸೃಷ್ಟಿಯು ಕರ್ಮಭೂಮಿಯೆಂದು ಕಡೆಗಣಿಸದೆ, ಈ ಸೃಷ್ಟಿಯು ಮಾಯೆಯೆಂದು ಮುಖದಿರುವದೆ, ಈ ಸೃಷ್ಟಿಯು ಲೀಲಾ ಜಾಲವೆಂದು ಭಾವಿಸಿ ಕೂಪ್ರದೆ-ಇದೊಂದು ಕಲಹಕ್ಷೇತ್ರವೆಂದು ಶಿವಶರಣರು ಅನುಭಾವಗೊಂಡರು. ಈ ದೆಸೆಯಿಂದ ಅವರು ಪ್ರಕೃತಿ-ಪುರುಷರಲ್ಲಿ, ಪುರುಷ-ಪುರುಷರಲ್ಲಿ, ಅದು ಏಕೆ ಪುರುಷ ಪರಬ್ರಹ್ಮರಲ್ಲಿಯೂ ಸಹ ಹೋರಾಟವನ್ನು ಕಂಡುಕೊಂಡರು.

ಭಾರತ ತತ್ತ್ವವೇತ್ತರೆಲ್ಲ ಬಹುತರವಾಗಿ ಅದ್ವೈತವನ್ನೇ ಒಪ್ಪಿಕೊಂಡಿರುವರು; ಆಗಮಕಾರರು ಈ ಮಾತಿಗೆ ಹೊರಗಲ್ಲ. ಅವರ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಎರಡಳಿದ ಏಕಾದ ಬಗೆಯನ್ನು ಗುರುತಿಸುವುದಾದರೂ ಅದರ ಸಾಧನೆಯಲ್ಲಿ ಅವರಿಗೂ ವಚನಕಾರರಿಗೂ ಹೊಂದಿಕೆಯಿಲ್ಲ. ಕಣ್ಗಳೆರಡಾದರೂ ನೋಟವೊಂದೇ, ಕೈಗಳೆರಡಾದರೂ ಮಾಟವೊಂದೇ; ಕಾಲ್ಗಳೆರಡಾದರೂ ಓಟವೊಂದೇ ಆಗಿರುವವಷ್ಟೇ! ಈ ನೋಟಮಾಟಓಟಗಳು ಒಂದೇ ಕೂಟವನ್ನು ಹೇಳುವದಿಲ್ಲವೇ ? ಆಗಮಕಾರರಿಗಿದ್ದಂತೆ ಶಿವಶರಣರ ಅಭಿಮತದಲ್ಲಿ ದೃಷ್ಟಿಯೇನು ಹಿರಿದಲ್ಲ, ಸೃಷ್ಟಿಯೇನು ಕಿರಿದಲ್ಲ. ಅರುಹಿನ ಶಕ್ತಿಯಲ್ಲಿ ಹಿರಿತನ ಕಿರಿತನಗಳು ಅರತು ಹೋಗುವವು. ಚಿತ್‌ಕಳೆ ಪರೆಕಲೆ ಎಂದು ಪರ್ಯಾಯನಾಮಗಳನ್ನು ಪಡೆದ ಈ ಅರುಹಿನ ಶಕ್ತಿಗೇ ಕ್ರಿಯಾಶಕ್ತಿಯೆಂದೂ ಹೆಸರು. ಕ್ರಿಯಾಶಕ್ತಿಯು ಸತ್ಯವೆಂದು ಬಗೆದು ಅದರ ನೆರವಿನಿಂದ ಶಿವಶರಣರು ಶಕ್ತಿವಿಶಿಷ್ಟಾದ್ವೈತವನ್ನು-ಶಿವಜೀವೈಕ್ಯ

ವನ್ನು-ಲಿಂಗಾಂಗ ಸಾಮರಸ್ಯವನ್ನು-ಸಾಧಿಸಿದರು. ಕರ್ಮಮಾರ್ಗದಿಂದ ಅದ್ವೈತ ಸಾಧ್ಯವೆಂದು ಜಗತ್ತಿಗೆ ಸಿದ್ಧ ಮಾಡಿಕೊಟ್ಟರೂ ಮಾಡು ಕರ್ಮವನ್ನು ಮಾಡು ! ಈ ಕರ್ತೃತ್ವಶಕ್ತಿಯಿಂದಲೇ ಕರ್ಮಭೂಮಿಯನ್ನು ಧರ್ಮಭೂಮಿಯನ್ನಾಗಿ ಮಾಡಲು ಸಾಧ್ಯವಿದೆ. ಯಾವ ಕರ್ಮಗಳನ್ನು ಮಾಡಿದರೂ ಚಿಂತೆಯಿಲ್ಲ; ಅವು ಬಾಧಕವಾಗವು. ಕರ್ಮಗಳನ್ನೆಸಗುವ ಕರ್ತನ ಬುದ್ಧಿಯನ್ನವಲಂಬಿಸಿವೆ ಬಂಧಮೋಕ್ಷಗಳು. ಶುದ್ಧ ಬುದ್ಧಿಯಿಂದ ಕರ್ಮವನ್ನೆಸಗಿದರೆ, ಕಾಯಕಗಳನ್ನು ಮಾಡಿದರೆ ಬಂಧನವಿಲ್ಲ. ಗುಣಕರ್ಮಗಳಿಂದ ವರ್ಣ ವ್ಯವಸ್ಥೆಯನ್ನು ರೂಢಿಗೊಳಿಸುವ ಹವಣಿಕೆಯೂ ಬೇಡ; ಯಾಕೆಂದರೆ ಗುಣಗಳು ರಕ್ತಗತವಲ್ಲ, ಆತ್ಮಗತವಾಗಿಹವು. ಆತ್ಮನು ಅವನ್ನು ತನ್ನ ಕರ್ತೃತ್ವ ಶಕ್ತಿಯ ಪ್ರಭಾವದಿಂದಲೇ ಪಡೆಯಬೇಕು. ತನ್ನ ಸುತ್ತುಮುತ್ತಲಿನ ಸನ್ನಿವೇಶಗಳನ್ನೂ ಪರಿಸ್ಥಿತಿಗಳನ್ನೂ ತನ್ನ ಕರ್ತೃತ್ವ ಶಕ್ತಿಯಿಂದ ಸುಗಮವಾಗಿಯೂ ಸುಲಲಿತವಾಗಿಯೂ ಸರಾಗವಾಗಿಯೂ ರಚಿಸುವ ಗುಣವು ನೈಜವಾಗಿ ಆತ್ಮನದೇ ! ಇಂತಿರಲು ಸೃಷ್ಟಿಯು ಸಂತೆಯೆಂದು ಭಾವಿಸಿ ಅದೊಂದು ಅನಂತ ದುಃಖದಾರಿದ್ರ್ಯಗಳ ಬೀಡೆಂದು ಬಗೆದು ಅಂತರ್ಮುಖಿಗಳಾಗಿ ಬರಿಯ ಆತ್ಮಿಕ ಆನಂದದಲ್ಲಿ ರಮಿಸಹತ್ತಿ ಶಕ್ತಿಯನ್ನಲ್ಲಗಳೆಯಲಾಗದು; ಶಕ್ತಿವಿಶಿಷ್ಟಾದ್ವೈತವನ್ನು ನೆನೆಯಲಾಗದು—ಎಂಬ ಸಂದೇಶವನ್ನು ಶಿವಶರಣರು ಬೀರಿದರು ಮಾತ್ರವಲ್ಲ, ಅದನ್ನು ಪ್ರತ್ಯಕ್ಷಗೊಳಿಸಿ ತೋರಿಸಿದರು. ಅವರು ಆಗಮಕಾರರಂತೆ ಭೌತಿಕ ಪ್ರಗತಿಯನ್ನು ಕುಂಟುಗೆಡಹದೆ ಅವರ ಮಾಹೇಶ್ವರಶಕ್ತಿಯು ಇಂತಿದೆ ಎಂದು ಸಿದ್ಧಗೊಳಿಸಿದರು. ವಿಶಾಲದೃಷ್ಟಿಯ ವಿಶ್ವಬಾಂಧವ್ಯವನ್ನು ರಚಿಸುವಾಗ ಸಮಾಜದ ಬಹುದಿವಸಗಳ ರೂಢಿಗಳೊಡನೆ ಮತ್ತು ಅಜ್ಞಾನ-ಅಹಂಕಾರಗಳೊಡನೆ ಅವರು ಹೋರಾಟಮಾಡಬೇಕಾಯಿತು. ಆದ್ದರಿಂದ ಸೃಷ್ಟಿಯೊಂದು ಸಮರ ಭೂಮಿಯಾಯಿತವರಿಗೆ. ಸೃಷ್ಟಿಯ ಸಹಜ ಒಡನಾಟದಿಂದ ಅವರ ದೃಷ್ಟಿಯರಳಿ ಇಷ್ಟಮೂರ್ತಿಗಳಾಗಲೂ ಅವರಿಗೆ ಅವಕಾಶ ದೊರೆಯಿತು.

ತತ್ತ್ವದ ವಿಚಾರದಲ್ಲಿಯೇ ಆಗಮಕಾರರಿಗೂ ವಚನಕಾರರಿಗೂ ಇನಿತೊಂದು ಅಭ್ಯಂತರವು; ಇನ್ನು ಆ ತತ್ತ್ವದ ತಿರುಳನ್ನು ಕರುಳಿಗಂಟಿಸಿಕೊಳ್ಳುವ ಆಚರಣೆಯಲ್ಲಿ ಅವರೀರ್ವರಲ್ಲಿ ಇನ್ನೂ ಮಹದಂತರವುಂಟು. ಶೈವರಿಗೆ ಶಿವನೇ ಇಷ್ಟದೇವತೆಯು. ಆ ಶಿವನೇ ಲಿಂಗವಾಗಿ ಬಂದುದರಿಂದ ಶಿವಲಿಂಗದಲ್ಲಿ ನಿಷ್ಠಾಗರಿಷ್ಠವೃತ್ತಿಯನ್ನು ತಾಳಿ ನಡೆಯುವವರು ವೀರಶೈವರು ಎಂದು ಆಗಮಕಾರರ ಅಭಿಮತ. ಅವರ ನಿತ್ಯದ ನಡೆಯಲ್ಲಿ, ಅವರ ಶಿವಭಕ್ತಿ ಶಿವಲಿಂಗಭಕ್ತಿಗಳಲ್ಲಿ ವೀರವೃತ್ತಿಯು ತುಂಬಿ ತುಳುಕುತ್ತಿತ್ತು. ಆ ಶಿವನಿಗಾಗಿ ಆ ಶಿವಲಿಂಗಭಕ್ತಿಗಾಗಿ ತಮ್ಮ ಪ್ರಾಣವನ್ನೂ ಕೂಡ ಈಡಾಡಲು ಹಿಂದು ಮುಂದು ನೋಡದ ವೀರವೃತ್ತಿಯನ್ನು ಅಲ್ಲಿ ಕಾಣ

ಬಹುದು. 'ಶಿವ' ಶಬ್ದವು ಆರ್ಯರಿಂದ ಪ್ರಚುರವಾದುದಿರಲಿ ಅದು ದ್ರವಿಡರಿಂದ ರೂಢವಾದುದಿರಲಿ 'ಶಿವ' ಎಂದರೆ ಸಾಮಾನ್ಯವಾಗಿ 'ಕಲ್ಯಾಣ' ಎಂಬ ಅರ್ಥವಾಗುವದು. ಇಲ್ಲಿ ಕಲ್ಯಾಣವೆಂದರೆ 'ಒಳ್ಳೆಯದು-ಲೇಸು' ಎಂಬು ತಿಳಿಯಬೇಕು. ಭದ್ರಂ ಶುಭಂ ಶಿವಂ ಕಲ್ಯಾಣಂ ಮಂಗಲಂ ಎಂಬ ಪದಗಳಿಗೆಲ್ಲ ಒಂದೇ ಅರ್ಥ. ತಾನು ಒಳ್ಳೆಯವನಾಗಿ ಎರಡನೆಯವರಿಗೆ ಒಳ್ಳೆಯದನ್ನು ಮಾಡುವದು ಶಿವಭಾವವೆನಿಸುವದು. ಲಿಂಗವು ಸ್ಥಿರ ಇಲ್ಲವೆ ಸ್ಥಾವರ ಸೂಚಕವು. ಈ ಶಿವಭಾವವು ಗಟ್ಟಿಗೊಂಡುದೇ ಶಿವಲಿಂಗ. ಹೀಗೆ ಗಟ್ಟಿಗೊಂಡ ಶಿವಭಾವದಲ್ಲಿ ಅಡಿಯಿಟ್ಟು ಎಡೆಯಾಡುವವನೇ ವೀರಶೈವನೆಂದು ವಚನಕಾರರ ತಿಳಿವಳಿಕೆ. ಒಳ್ಳೆಯವನಾಗಿ ಒಳ್ಳೆಯದನ್ನೆಸಗು ಎಂಬುದು ಅವರ ಸೂತ್ರ.

'ಇಷ್ಟಿ' ಎಂದರೆ ಪೂಜೆ. ಪೂಜೆಗೆ ಅರ್ಹವಾದ ಲಿಂಗವು ಇಷ್ಟಲಿಂಗವು. ಮನದಿಷ್ಟವನ್ನು ನೀಡಲೂ ಪಡೆಯಲೂ ಸಾಧನವಾಗಿದ್ದುದರಿಂದ ಅದು ಆಗಮಕಾರರಿಗೆ ಇಷ್ಟಲಿಂಗವೆಂದೆನಿಸಿತು. ಇಲ್ಲಿ ಶೈವರ ಸ್ಥಾವರಲಿಂಗಕ್ಕೂ ಆಗಮಕಾರರ ಈ ಇಷ್ಟಲಿಂಗಕ್ಕೂ ಯಾವ ಅಭ್ಯಂತರವೂ ಇರುವದಿಲ್ಲ. ಶಿವಭಾವಕ್ಕೆ ಅಥವಾ ಕಲ್ಯಾಣಕ್ಕೆ 'ಇಷ್ಟ'ವೆಂದು ಹೆಸರಿಟ್ಟ ಶಿವಶರಣರ ವಿಚಾರಕ್ಕೆ ಇದು ಪಾಸಟೆಯಲ್ಲ. ಶಿವಶರಣರು ಅಕಲ್ಯಾಣಕ್ಕೆ ಅನಿಷ್ಟವೆಂದು ಕರೆದರು. ಇಷ್ಟಾನಿಷ್ಟಗಳೆರಡು ಅವರ ದೃಷ್ಟಿಯಲ್ಲಿ ಸ್ವತಂತ್ರವೂ ಪ್ರತಿಯೋಗಿಯೂ ವಿರುದ್ಧವೂ ಆಗಿರುವವು. ಬಾಹ್ಯ ಪ್ರಪಂಚದಲ್ಲಿಯ ಕ್ರಿಯೆ-ಪ್ರತಿಕ್ರಿಯೆಗಳಂತೆ ನೈತಿಕ ಕ್ಷೇತ್ರದ ಆ ಪದಗಳಲ್ಲಿ ಸಮತೂಕವಿದೆ, ಸಮಕಟ್ಟಿದೆ ಅಲ್ಲದೆ ಸ್ವತಂತ್ರತೆಯೂ ಇದೆ. ಆ ಶಿವಶರಣರಿಗೆ ಅನಿಷ್ಟದೊಡನೆ ಹೋರಾಟವೇ ಇಷ್ಟಲಿಂಗದ ಪೂಜೆಯಾಗಿತ್ತು. ಆ ಅನಿಷ್ಟವು ಆ ಅನ್ಯಾಯ ಅಸತ್ಯಗಳು ಹೊರಗಿರಲಿ ಒಳಗಿರಲಿ, ಮಠದಲ್ಲಿರಲಿ ಘಟದಲ್ಲಿರಲಿ, ಮನೆಯಲ್ಲಿರಲಿ ಮನದೊಳಗಿರಲಿ ಅದೆಲ್ಲವೂ ಅನಿಷ್ಟವೇ! ಹರುಷಭರಿತವಾದ ಹೋರಾಟದಿಂದ ಅದು ನಷ್ಟವಾಗಬೇಕು. ಅನಿಷ್ಟವು ವೈಯಕ್ತಿಕವಾಗಿರಲಿ, ಕೌಟುಂಬಿಕವಾಗಿರಲಿ, ಸಾಮಾಜಿಕವಾಗಿರಲಿ, ಇಲ್ಲವೆ ರಾಷ್ಟ್ರೀಯವಾಗಿರಲಿ ಕ್ಷೇತ್ರಮರ್ಯಾದೆಯಿಂದ ಅದರ ವಿಸ್ತಾರವು ಹೆಚ್ಚುಕಡಿಮೆಯಾಗುವದೇ ಹೊರತು ತತ್ತ್ವದ ದೆಸೆಯಿಂದ ಅದರಲ್ಲಿ ಭಿನ್ನತೆಯಿಲ್ಲ. ಅತುಲವಾದ ಸಾಮರ್ಥ್ಯದಿಂದ ಅಪಾರವಾದ ಸ್ವಾರ್ಥ ತ್ಯಾಗದಿಂದ ಕೂಡಿದ ಅನಿಷ್ಟ ನಿವಾರಣೆಯ ಉದ್ಯಮದಲ್ಲಿ ಇಷ್ಟಪ್ರಾಪ್ತಿಯು. ಈ ಅನಿಷ್ಟವಳಿದು ಇಷ್ಟವು ಉಳಿಯಬೇಕು ಅದುವೆ ಇಷ್ಟಲಿಂಗಪೂಜೆ ಎನಿಸುವದು,- ಎಂಬುದು ಶಿವಶರಣರ ದೃಷ್ಟಿಗೆ ನಿಲುಕಿತು.

ಇಷ್ಟಾನಿಷ್ಟಗಳಲ್ಲಿ ಒಂದು ಇನ್ನೊಂದರ ಅಭಾವವೆಂದು ಬಗೆದು ಹೋರಾಟವು ಹುಸಿಯೆಂದು ಸಾರಿ ಭೌತಿಕ ಪ್ರಗತಿಗೆ ಅರವಾಳವನ್ನು ಹಚ್ಚಿತು ಆಗಮ ಧರ್ಮವು.

ಇಷ್ಟಾನಿಷ್ಟ, ಧರ್ಮಾಧರ್ಮ, ಕಲ್ಯಾಣಾಕಲ್ಯಾಣ ಇವುಗಳಲ್ಲಿ ಎರಡೂ ಪರಸ್ಪರ ವಿರುದ್ಧ ಹಾಗು ಸ್ವತಂತ್ರವಾದವುಗಳಿರುವುದರಿಂದ ಇವುಗಳಲ್ಲಿ ಹೋರಾಟವಿದೆ ಯೆಂದೂ ಈ ಹೋರಾಟವೇ ಹರುಷವೆಂದೂ ವಚನಧರ್ಮವು ಬೀರಿತು. ಈ ಹೋರಾಟದಲ್ಲಿ ಪ್ರಾಣವನ್ನು ಕೊಡಲೂ ಅದರಂತೆ ಪ್ರಾಣವನ್ನು ತೆಗೆದು ಕೊಳ್ಳಲೂ ಸಿದ್ಧರಾಗಿರಬೇಕೆಂದು ಸಾರಿತದು. ಹಿಂಸೆ ಅಹಿಂಸೆಗಳೆರಡಕ್ಕೂ ಸ್ಥಾನ ಮಾನವಿದೆ ಈ ಜಗತ್ತಿನಲ್ಲಿ. ಹಿಂಸೆಯೆಂದರೆ ಕ್ರೂರತನವಲ್ಲ; ಅಹಿಂಸೆಯೆಂದರೆ ಹೇಡಿತನವಲ್ಲ— ಎಂಬುದನ್ನೂ ನಿರೂಪಿಸಿತು ವಚನಧರ್ಮವು.

ಆಗಮಕಾಲದ ವೀರಶೈವರಲ್ಲಿ ಇಷ್ಟಲಿಂಗವನ್ನು ಎದೆಯ ಮೇಲೆಯೇ ಕಟ್ಟಿ ಕೊಳ್ಳಬೇಕೆಂಬ ಕಟ್ಟಿದ್ದಿಲ್ಲ. ತಮತಮಗೆ ಬೇಕಾದರೆ ಅವರು ಅದನ್ನು ಕಕ್ಷೆ, ಕರ, ಶಿರ, ಉರ, ಕಂಠ, ಅಮಳೋಕ್ಯ ಎಂಬ ಆರು ಸ್ಥಾನಗಳಲ್ಲೊಂದರಲ್ಲಿ ಧರಿಸುತ್ತಿದ್ದರು; ಇಲ್ಲವಾದರೆ ತಮ್ಮ ತಮ್ಮ ಪೂಜಾದ್ರವ್ಯಗಳೊಡನಿರಿಸಿಕೊಂಡು ಪೂಜೆಯ ಕಾಲಕ್ಕೆ ಮಾತ್ರ ಅದರ ಉಪಾಸನೆಯನ್ನು ಮಾಡುತ್ತಿದ್ದರು; ಇಲ್ಲವೆ ಕೆಲವು ಆರಾಧ್ಯ ಬ್ರಾಹ್ಮಣರಂತೆ ಜನ್ನಿವಾರದ ಜೊತೆಗೆ ಲಿಂಗವನ್ನೂ ಸೇರಿಸುತ್ತಿದ್ದರು. ಬಂಧುಬಳಗದವರ ಮಾತೊಂದಿರಲಿ, ಮನೆತನವೊಂದರಲ್ಲಿಯ ವ್ಯಕ್ತಿಗಳು ಅದನ್ನು ಸ್ವೇಚ್ಛೆಯಾಗಿ ಧರಿಸುತ್ತಿದ್ದರೆಂಬುದನ್ನು ಆಗಮ ವಚನಶಾಸ್ತ್ರಗಳಿಂದ ಅರಿಯ ಬಹುದು. ಇಷ್ಟಲಿಂಗ ಧಾರಣೆಗೆ ಸಾರ್ವತ್ರಿಕ ಸ್ವರೂಪವು ಆಗ ಇನ್ನೂ ಬಂದಿರಲಿಲ್ಲ. ಆದ್ದರಿಂದಲೇ ಲಿಂಗಕಟ್ಟಿದವರೆಲ್ಲ ಭಕ್ತರು ಉಳಿದವರು ಭವಿಗಳು; ಭಕ್ತನು ಭವಿಯ ಬಳಕೆ ಮಾಡಲಾಗದು ಎಂಬಿವೇ ಮೊದಲಾದವು ಬಹುದಿನಗಳಿಂದ ರೂಢವಾದ ವಿಚಾರಗಳಿದ್ದವು. ಇಲ್ಲಿಯೂ ಸಹ ಶಿವಶರಣರ ಪ್ರಗತಿಪರ ದೃಷ್ಟಿಯನ್ನರಿಯ ಬಯಸುವವರಾದರೆ ಇಷ್ಟಭಾವವುಳ್ಳಾತನೇ ಭಕ್ತ, ತದ್ವಿರುದ್ಧವಾಗಿರುವನೇ ಭವಿ ಎಂಬುದು ಅವರ ಗಟ್ಟಿಗೊಂಡ ಅನುಭವ. ಅವರ ವಿಶಾಲ ದೃಷ್ಟಿಯಲ್ಲಿ ಇಷ್ಟಾನಿಷ್ಟ ಪೂಜಕರಾದ ಭಕ್ತಭವಿಗಳೆಂಬ ಎರಡೇ ಕುಲಗಳು. ಎಲ್ಲಿ ಅನ್ಯಾಯ ಅಸತ್ಯಗಳೊಡನೆ ಹೋರಾಡುವ ಭಕ್ತರಿರುವರೋ ಎಲ್ಲಿ ಸತ್ಯ ನ್ಯಾಯ ನಿಷ್ಪಕ್ಷಪಾತ ನಡೆಗಾಗಿ ಪ್ರಾಣಾರ್ಪಣವನ್ನು ಕೊಡ ಮಾಡುವ ವೀರರಿರುವರೋ ಅವರೆಲ್ಲರೂ ವೀರಶೈವರೇ! ಅಲ್ಲಿ ಜಾತಿ ಕುಲ ಗೋತ್ರ ಲಿಂಗ ವರ್ಣಗಳನ್ನು ನೋಡತಕ್ಕದ್ದಲ್ಲ. ಕೊರಳಲ್ಲಿ ಲಿಂಗವಿದ್ದೂ ಅನಿಷ್ಟ ಮಾರ್ಗದಿಂದ ನಡೆದರೆ ಆತನಿಗೇನೆನ್ನಬೇಕು? ಆತನು ಲಿಂಗಭವಿಯಲ್ಲವೇ? ಭಾವ ಕೆಟ್ಟ, ಕೆಟ್ಟ ಭವಿಯೂ ಅವನೇ ಅಲ್ಲವೇ? ಅನಿಷ್ಟದೊಡನೆ ಹೋರಾಡಿ ಇಷ್ಟವ ಬೀರುವ ವೀರರೆಲ್ಲರೂ ಒಂದೇ! ಅವರೆಲ್ಲಿದ್ದರೂ ಅವರು ಯಾವ ಜನಾಂಗದವರಿದ್ದರೂ ಅವರು ಒಂದೇ! ಹಾಗಾದರೆ ಇಷ್ಟದ ಕುರುಹಾದ ಆ ಪ್ರತೀಕದಿಂದ ಇಲ್ಲಿ ಪ್ರಯೋಜನವೇನು? ಎಂಬ ಶಂಕೆ

ಯುಂಟಾಗುವದು ಸಹಜವಾದುದು. ಮನಸ್ಸಿನಿಂದ ಶಿವನನ್ನು ನೆನೆವಂತೆ,ವಾಕ್ಕಿನಿಂದ ಅವನನ್ನು ಸ್ಮರಿಸುವಂತೆ, ದೇಹದಿಂದ ಅವನನ್ನು ಧರಿಸಬೇಕು. ಕ್ರೈಸ್ತರ ಕ್ರಾಸ ದಂತೆ, ಮುಹಮ್ಮದೀಯರ ಅರ್ಧಚಂದ್ರದಂತೆ, ಶೀಖರ ಕೃಪಾಣದಂತೆ, ನಾಝಿಗಳ ಸ್ವಸ್ತಿಕದಂತೆ ಆ ವೀರವೃತ್ತಿಯು ವೀರರನ್ನು ಗುರುತಿಸಲು ಲಿಂಗವು ಒಂದು ಚಿಸ್ಹೆ ವಾಗಿರಬೇಕು; ಇದುಕಾರಣ ಶಿವಶರಣರು ಇಷ್ಟದ ಲಾಂಛನವಾದ ಇಷ್ಟಲಿಂಗ ವನ್ನು ಎದೆಯ ಮೇಲೆ ಧರಿಸಹೇಳಿವರು.

ಇಷ್ಟಲಿಂಗವು ಇಷ್ಟದ ಕುರುಹು ಏನೋ ನಿಜ ಆದರೆ ಅದು ಬರಿಯ ಕುರುಹು ಆಗಿದ್ದರೆ ತೊಂದರೆಯಿಲ್ಲ; ಅದನ್ನು ಪೂಜಿಸ ಹೇಳುವರಲ್ಲ; ಅದು ಏಕೆ? ಹಾಗು ಅದರಲ್ಲಿ ಪೀಠ ಪಿಂಡಿಕೆ ಗೋಳಕಗಳ ಆಕೃತಿಗಳೇಕೆ? ಎಂಬ ಕುತೂಹಲದ ಪ್ರಶ್ನೆ ಗಳು ಮೊಳೆಯುವವು. ಇವುಗಳಿಗೆ ಪರಿಹಾರವೇನು? ಸರಿ. ಈಗಿನ ವಿಚಾರ ಸರಣಿಯನ್ನೇ ಇನ್ನಿಷ್ಟು ಮುಂದಕ್ಕೆ ಚಾಚುವಾ. ಇಷ್ಟಾನಿಷ್ಟ ಘಟಕಗಳು ನಮಗೀಗ ದೊರೆತಿವೆ. ಇವುಗಳ ತತ್ತ್ವಜ್ಞಾನವೇನೆಂಬುದನ್ನು ಮನದಂದರೆ ಇಷ್ಟಲಿಂಗದ ಪೂಜೆಯ ರಹಸ್ಯವು ಗೊತ್ತಾಗುವದು. ಇಷ್ಟಕ್ಕೆ ವಿಮರ್ಶಶಕ್ತಿ ಯೆಂದೂ ಚಿತ್‌ಶಕ್ತಿಯೆಂದೂ ಹೆಸರು; ಅನಿಷ್ಟಕ್ಕೆ ಮಾಯಾಶಕ್ತಿಯೆಂದೂ ಅವಿದ್ಯೆ ಯೆಂದೂ ಹೆಸರು; ಪ್ರಕೃತಿ ಅಥವಾ ಮಾಯೆಯು ತ್ರಿಗುಣಾತ್ಮಕವಾಗಿರುವದು. ಸತ್ವ ರಜ ತಮವೆಂದು ಇದನ್ನು ಚಿತ್ರಿಸಿ ತೋರಿಸುವುದಾದರೆ ಇದೊಂದು △ ಹೀಗೆ ಸಮಭುಜ ತ್ರಿಕೋಣದ ಆಕೃತಿಯಾಗುವದು. ವಿಮರ್ಶಶಕ್ತಿ ಅಥವಾ ಚಿತ್ ಶಕ್ತಿಯು ಸಚ್ಚಿದಾನಂದಮಾಯಿಯು. ಸತ್‌ಚಿತ್‌ಆನಂದಗಳ ಈ ವಿಮರ್ಶ ಶಕ್ತಿಯನ್ನು ಚಿತ್ರಿಸಿ ತೋರಿಸಬೇಕಾದರೆ ಸಹ ಇನ್ನೊಂದು ಸಮಭುಜತ್ರಿಕೋಣದ ಆಕೃತಿಯನ್ನೇ ಬರೆಯಬೇಕಾಗುವದು. ಮಾಯೆಯು ಅಪರಾಪ್ರಕೃತಿಯು ಅಂದರೆ ಕೆಳಗಿನದು, ಅಧೋಮುಖಿಯು. ಚಿತ್‌ಶಕ್ತಿಯು ಪರಾಪ್ರಕೃತಿಯು ಅಂದರೆ ಮೇಲಿನದು, ಊರ್ಧ್ವಮುಖಿಯು. ಇವುಗಳಲ್ಲಿ ಒಂದರಮೇಲೊಂದನ್ನಿರಿಸಲು ⧖ ಈ ಆಕೃತಿಯಾಗುವದು. ಇಷ್ಟಾನಿಷ್ಟ ವಿದ್ಯಾವಿದ್ಯೆ ಪರಾಪರಗಳನ್ನು ಮೀರಿ ಅನುಪಮ ವಾದ ವಸ್ತುವೊಂದಿದೆ. ಅದು ಜಡವೂ ಅಲ್ಲ, ಚೇತನವೂ ಅಲ್ಲ ; ಅದು ಸಾಕಾರವೂ ಅಲ್ಲ, ನಿರಾಕಾರವೂ ಅಲ್ಲ; ಅಂತಪ್ಪ ಪರಾತ್ಪರ ವಸ್ತುವನ್ನು ಚಿತ್ರಿಸುವುದೆಂತು ? ಈ ಬಗೆಯಲ್ಲಿ ಮಾನವ ಬುದ್ಧಿಯ ಪ್ರಯತ್ನಗಳೆಲ್ಲ ಶೂನ್ಯತೆಯನ್ನು ಪಡೆಯುವವು. ಆದ್ದ ರಿಂದ ಆ ವಸ್ತುವನ್ನು ಚಿತ್ರಿಸಿ ತೋರಿಸಬೇಕಾದರೆ ○ ಹೀಗೆ ಒಂದು ಶೂನ್ಯವನ್ನೇ ಬರೆಯಬೇಕಾಗುವದು. ಅಂದರೆ ಆ ಇಡಿಯ ಚಿತ್ರವು ⧖ ಹೀಗೆ ಆಗುವದು. ಆ ಪರಾತ್ಪರ ವಸ್ತುವಿನ ತೆರಹಿಲ್ಲದ ಅನುಸಂಧಾನದಿಂದ, ಆ ಇಷ್ಟದ ಬಲದಿಂದ

ಅನಿಷ್ಟವನ್ನು ಗೆದ್ದು ಮಾನವ ಕೋಟಿಯಲ್ಲಿ ಮುಂದುವರಿದವನೇ ಅರುಹಿನ ಮಹಾಂತನು, ಪ್ರಮಥ ಪುಂಗವನು, ಪ್ರಾಸಾದಿಕ ಪುರುಷನು, ಅನುಭಾವಿಯು! ಇಂತು ಮುಂದುವರಿದ ದಿವ್ಯಾನುಭವಿಯ ನಿಲವನ್ನು ತೋರಿಸಬೇಕಾದರೆ — ಹೀಗೆ ಒಂದು ಸರಳ ರೇಖೆಯನ್ನೆಳೆಯಬೇಕು. ಯಾಕೆಂದರೆ ದಿವ್ಯಾನುಭವವು ಸಂಸಾರ ಚಕ್ರಕ್ಕೆ ಅಡ್ಡವಾಗಿರುವದು. ಆಮೇಲೆ ಪರಿಪೂರ್ಣವಾದ ಆ ಚಿತ್ರವು ಈ ಬಗೆಯಲ್ಲಿ ರೂಪುಗೊಳ್ಳುವದು. ಇಷ್ಟಲಿಂಗದ ಆಕೃತಿಯಿಂದ ವ್ಯಕ್ತವಾಗುವ ಇಂತಹ ಅನುಭವದ ಅರಿವು ಮೈಮನಗಳಿಗೆ ಎಂದೆಂದೂ ದೂರವಾಗಕೂಡದು, ಅದು ಎಂದೆಂದೂ ಮರವೆಯಿಂದ ಮುಸುಗಕೂಡದು ಎಂಬ ನಿಚ್ಚ ಎಚ್ಚರಿಕೆಗೋಸುಗ ಇಷ್ಟಲಿಂಗವನ್ನು ಅಂಗದ ಮೇಲೆ ಅಗಲಲಾರದಂತಿರಿಸಿಕೊಂಡು ಅನುದಿನವು ಆರಾಧಿಸಬೇಕು. ಇದುವೆ ಇಷ್ಟಲಿಂಗಧಾರಣೆ ಅರ್ಚನೆ ಪೂಜೆಗಳ ರಹಸ್ಯವು.

ಈ ಇಷ್ಟಲಿಂಗದ ಅನುಭವವನ್ನು ಅಂಗವಿಸಿಕೊಳ್ಳುವ ಭರದಲ್ಲಿ ಶಿವಶರಣರಿಗೆ ಹೊಳೆದುದು ಶರಣರ ಸಂಗದ ಮಹತಿ, ಅನುಭಾವಿಗಳ ಕೂಟದ ಘನತೆ, ಅದಕ್ಕಾಗಿ ಅವರು ಸ್ಥಾಪಿಸಿದುದು ಅನುಭವಮಂಟಪವನ್ನು. ಅದರಲ್ಲಿ ಇಷ್ಟಲಿಂಗದ ನಿರ್ಣಯವಾಗಿ ಅದರ ರಹಸ್ಯವನ್ನು ಅರಿತು ಅಂತು ಆಚರಿಸಲು ಅನುವಾಯಿತು. ಶರಣರ ಇಷ್ಟಲಿಂಗ ಪ್ರಭಾವವು ಕರಗತವಾಯಿತು. ಜಗತ್ತಿನ ಧರ್ಮಾಚರಣೆ ಅನುಭಾವಗಳ ಇತಿಹಾಸದಲ್ಲಿ ಇಷ್ಟಲಿಂಗ ರಹಸ್ಯಕ್ಕೆ ಒಂದು ಸ್ಥಾನವು ದೊರೆಯಿತು.

# ಚತುರ್ವಿಧ ಸಾರಾಯ ಸಂಪತ್ತು

**ಸಂಗ್ರಾಹಕರು : ಶ್ರೀ ವೀರಭದ್ರಪ್ಪ ಕೊಪ್ಪಳ, ಎಂ. ಎ., ಬಿ. ಟಿ. ಧಾರವಾಡ**

[ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ತಾ. ೨೯-೩೦ ಅಗಷ್ಟ ೧೯೪೦ ಈ ಎರಡು ದಿವಸ ಬೆಂಗಳೂರ ನಗರದಲ್ಲಿ ಮಾಡಿದ ಭಾಷಣಗಳ ಸಾರಾಂಶವಿದು.]

ತತ್ತ್ವಜ್ಞಾನ, ಅನುಭಾವವಿದ್ಯೆ ಮತ್ತು ಅನುಭವ ಸಂಪಾದನೆಯ ರೀತಿ ಇವುಗಳಲ್ಲಿ ಶಿವಶರಣರ ಆಂದೋಲನವು ತನ್ನದೇ ಆದ ಒಂದು ವೈಶಿಷ್ಟ್ಯವನ್ನು ತಾಳಿದೆ ಎಂಬುದು ತುಲನಾತ್ಮಕ ದೃಷ್ಟಿಯ ವಿಮರ್ಶಕರಿಗೆ ತಿಳಿಯದಿರದು. ವಿಶ್ವದಲ್ಲಿ ಹುದುಗಿದ ವೈಚಿತ್ರ್ಯವನ್ನು ಪಿಂಡದಲ್ಲಿ ಅರಿತು ಪಿಂಡದ ನೆರವಿನಿಂದಲೇ ಅದನ್ನಳವಡಿಸಿಕೊಂಡು ಅಖಂಡದ ಆನಂದದಲ್ಲಿ ನಿಬ್ಬೆರಗುಗೊಳ್ಳುವ ಶರಣರ ಅರಿವಿನ ಬಗೆಯು ಅನ್ಯಾದೃಶವಾದುದು. ಒಂದು ಹಲವಾಗಿ ತೋರಿ ಹಲವು ಒಂದರಲ್ಲಡಗುವ ಈ ಗೂಢವು ಬ್ರಹ್ಮಾಂಡದಲ್ಲಿದ್ದಂತೆ ಪಿಂಡಾಂಡದಲ್ಲಿಯೂ ಇರುವುದು; ಕಣ್ಣಳವಿಗೆ ನಿಲುಕದ ಬ್ರಹ್ಮಾಂಡವು ಪಿಂಡಾಂಡದ ನೆಲೆಯರಿತಲ್ಲಿಯೇ ಕರಗತವಾಗುವುದು; ಪಿಂಡಾಂಡದ ಕೂಲಂಕಷವಾದ ವಿವೇಚನೆಯಿಂದಲೇ ಬ್ರಹ್ಮಾಂಡದ ನೆಲೆಯೂ ಸಾಧಿಸುವುದು; ಪಿಂಡಬ್ರಹ್ಮಾಂಡಗಳ ಐಕ್ಯದಲ್ಲಿಯೇ ಅವಿರಳವಾದ ಆನಂದಾನುಭೂತಿಯುಂಟಾಗುವುದು— ಎಂಬ ದೃಷ್ಟಿಯು ಶಿವಶರಣರಿಗೆ ಸೇರಿಧುದು. ಅವರಿಗೆ ಜೀವನವೆಲ್ಲ ಒಳಗಿನಿಂದ ಹೊರಹೊಮ್ಮಿದುದು; ಅಂತೆಯೇ ಬಾಹ್ಯಸೃಷ್ಟಿಯತ್ತ ದೃಷ್ಟಿಯನ್ನು ಹೊರಳಿಸದೆ ಅಂತರ್ಮುಖಿಗಳಾಗಿ ಪಿಂಡಪ್ರಕೃತಿಯ ನಿಲವನ್ನಳೆದು ಅಖಂಡದ ಅನುಭವಗೊಂಬುವದೇ ಅವರಿಗೆ ಇಷ್ಟ. ಇದರಿಂದ ಬಾಹ್ಯಸೃಷ್ಟಿಯಲ್ಲಿ ಅವರಿಗೆ ತಿರಸ್ಕಾರವುಂಟೆಂಬ ಅರ್ಥವಲ್ಲ; ಒಂದರಿಂದ ಇನ್ನೊಂದರ ಸೊಬಗು ಹೆಚ್ಚುವುದೆಂದೇ ಅವರ ತಿಳಿವಳಿಕೆ. ಆದ್ದರಿಂದ ಯಾವುದೂ ಅವರಿಗೆ ತ್ಯಾಜ್ಯವಲ್ಲ. ಪಿಂಡಪ್ರಕೃತಿಯಲ್ಲಿ ನಡೆದಿರುವ ವ್ಯವಹಾರ ವೈಚಿತ್ರ್ಯದಿಂದ ಬ್ರಹ್ಮಾಂಡವನ್ನೂ ಪಿಂಡಬ್ರಹ್ಮಾಂಡಗಳಿಗೆ ಕರ್ತೃವೆನಿಸಿದ ಅಖಂಡದ ಅರಿವನ್ನೂ ಕಾಣುವ ಅವರ ದೃಷ್ಟಿಕೋನವು ನಾವೀನ್ಯತೆಯಿಂದ ಕೂಡಿದುದು.

ಸಚ್ಚಿದಾನಂದಲಕ್ಷಣಲಕ್ಷಿತನಪ್ಪ ಅಖಂಡನೆನಿಸಿದ ಪರಶಿವನು ಸ್ವಯಂಪ್ರಕಾಶಮಯನೂ ಆ ಪ್ರಕಾಶದ ನಿಚ್ಚ ಎಚ್ಚರಿಕೆಯಿಂದ, ವಿಮರ್ಶೆಯಿಂದ ಕೂಡಿದವನೂ ಆಗಿರುವನು. ತನ್ನ ತಾನೆ ನೆನೆಯುತ್ತಿಪ್ಪ ಪರಶಿವನ ಈ ಚಿತ್‌ಸಾಮರ್ಥ್ಯವೇ, ಈ ದಿವ್ಯನೆನಹೇ ಚಿತ್‌ಶಕ್ತಿ ಎಂದು ಹೆಸರುಗೊಂಡಿರುವುದು. ಕಾರಮೇಘದೊಳಗಣ ಮಿಂಚಿನಂತೆ, ಉದಕದೊಳಗಣ ಕಿಚ್ಚಿನಂತೆ, ಕಾಷ್ಠದೊಳಗಣ ಅಗ್ನಿಯಂತೆ, ಸೂರ್ಯನೊಳಗಣ ಪ್ರಕಾಶದಂತೆ ಚಂದ್ರನೊಳಗಣ ಶೈತ್ಯದಂತೆ, ಹೂವಿನೊಳಗಣ ಕಂಪದಂತೆ, ಹಣ್ಣಿನೊಳಗಣ ರಸದ ರುಚಿಯಂತೆ, ಹಾಲಿನೊಳಗಣ ತುಪ್ಪದಂತೆ, ಬೀಜದೊಳಗಣ ವೃಕ್ಷದಂತೆ, ಕನ್ನೆಯೊಳಗಣ ಸ್ನೇಹದಂತೆ ಬಿಚ್ಚಿಬೇರಾಗದ, ಬೆರಸಿ

ಒಂದಾಗದ ಬೆಡಂಗಿನಿಂದ ಈ ಚಿತ್‌ಶಕ್ತಿಯು ಪರಶಿವನಲ್ಲಿ ಅಡಗಿರುವುದು. ತೋರುವ ತೋರಿಕೆಯಲ್ಲ ಸೃಷ್ಟಿ-ಸ್ಥಿತಿ-ಲಯಕಾರಣಕರ್ತೃವೆನಿಪ ಈ ಚಿತ್‌ಶಕ್ತಿಯ ಒಡಲಿನಿಂದ ಹೊರಹೊಮ್ಮಿದುದು. ಪರಶಿವನು 'ಅತ್ಯತಿಷ್ಠದ್ದಶಾಂಗುಲಂ' ಎಂದು ವರ್ಣಿತನಾಗಿರುತ್ತಾನೆ; ಯಾಕೆಂದರೆ ಅವನು ಸೃಷ್ಟಿಯ ಗುಣಧರ್ಮಗಳನ್ನು ಹೊದ್ದನು. ಚಿತ್‌ಶಕ್ತಿಗೆ ಸೃಷ್ಟಿಯೊಡನೆ ಸಂಬಂಧವಿದ್ದಂತೆ ಪರಶಿವನಿಗಿಲ್ಲ; ಅವನು ಕೇವಲ ನಿರ್ಲಿಪ್ತನು. ಸೃಷ್ಟಿಯ ವ್ಯವಹಾರದ ಆಗುಹೋಗುಗಳೆಲ್ಲ ಚಿತ್‌ಶಕ್ತಿಯ ಅಧೀನತೆಗೆ ಒಳಪಟ್ಟವುಗಳು.

ಪರಶಿವ-ಚಿತ್‌ಶಕ್ತಿ-ಸೃಷ್ಟಿ ಇವುಗಳ ಪರಸ್ಪರ ಸಂಬಂಧವನ್ನು ಶಿವಶರಣರು ಒಳ್ಳೇ ಮನಂಬುಗುವ ರೀತಿಯಲ್ಲಿ ವಿವರಿಸಿರುವರು. 'ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ.' ಅವನಿಗೆ 'ಕಾಣಬಾರದ ಕಾಯ, ನೋಡಬಾರದ ತೇಜ, ಉಪಮಿಸಬಾರದ ನಿಲವು'ಂಟು. ಅವನು 'ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ.' 'ಲೀಲೆಯಾದಡೆ ಉಮಾಪತಿ, ಲೀಲೆ ತಪ್ಪಿದಡೆ ಸ್ವಯಂಭು.' ಅವನು 'ತನ್ನ ವಿನೋದಕ್ಕೆ ತಾನೇ ಸಕಲ ಪ್ರಪಂಚವನು ಸೃಷ್ಟಿಸಿ ಜಗದ್ವಿಲಾಸ ಸಾಕಾದಡೆ ಮತ್ತೆ ಪರಿವನಾ ಮಾಯಾಪಾಶವನು' 'ಮಣಿಗಳ ಸೂತ್ರದಂತೆ' ಅವನಿಹನು ಸಚರಾಚರಂಗಳಲ್ಲಿ. ಇಂತು ಪರಶಿವನ ದಿವ್ಯ ನೆನಹಿನಿಂದಲೇ ಸೃಷ್ಟಿಯು ಹೊರಹೊಮ್ಮಿದುದರಿಂದ ಪರಶಿವ ಮತ್ತು ಅವನ ದಿವ್ಯ ನೆನಹೆನಿಸಿದ ಚಿತ್‌ಶಕ್ತಿ ಇವು ಸತ್ಯವಾಗಿರುವಂತೆ ಸೃಷ್ಟಿಯೂ ಸತ್ಯವಾದುದು. ಪರಶಿವನ 'ಅಸ್ಮಿ, ಪ್ರಕಾಶೆ, ನಂದಾಮಿ' ಎಂಬ ವರ್ಣನೆಯಲ್ಲಿ ರೂಪಗೊಳ್ಳುವ ಸತ್ ಚಿತ್ ಆನಂದ ಸ್ವರೂಪಗಳಲ್ಲಿ ಅವನ ಸತ್ ಸ್ವರೂಪವನ್ನು ವ್ಯಕ್ತಗೊಳಿಸುವ ಇರಹು ಬ್ರಹ್ಮಾಂಡವ್ಯಾಪಿಯಾಗಿಯೂ ಅವನ ಚಿತ್ ಸ್ವರೂಪವನ್ನೂ ವ್ಯಕ್ತಗೊಳಿಸುವ ಅರುಹು ಪಿಂಡಾಂಡವ್ಯಾಪಿಯಾಗಿಯೂ ಇರುವುದು. ಮತ್ತು ಪಿಂಡ ಬ್ರಹ್ಮಾಂಡಗಳ ಐಕ್ಯವಲ್ಲಿ ಅವನ ಆನಂದ ಸ್ವರೂಪದ ಅರಿವು ಉಂಟಾಗುವುದು; ಅವರೋಹಣ ಕ್ರಮದಲ್ಲಿ ಶಕ್ತಿಯ ಕಾರ್ಯವೆನಿಸಿದ ಸೃಷ್ಟಿಯು ಸತ್ತ್ವರಜಸ್ತಮೋಮಯವಾದುದು; ಇಲ್ಲಿ ಗುಣತ್ರಯವು ಪಾರದರ್ಶಕವಲ್ಲ, ಜಡವಾದುದು; ಅರ್ಥಾತ್ ಸೃಷ್ಟಿಯು ಕಾಠಿಣ್ಯತೆಯಿಂದ ಕೂಡಿದುದು. ಸೃಷ್ಟಿಯಲ್ಲಿ ಅಡಗಬೇಕಾದುದು ಜಾಡ್ಯವು, ಕರಗಬೇಕಾದುದು ಕಾಠಿಣ್ಯವು. ಆರೋಹಣ ಕ್ರಮದಲ್ಲಿ ಸೃಷ್ಟಿಯ ಕಾಠಿಣ್ಯವಳಿದು ತೆಳುವಾಗಿ ತೋರಿದರೆ ಅದುವೆ ಪ್ರಳಯವೆನಿಸುವುದು. ಸೃಷ್ಟಿ ಮತ್ತು ಪ್ರಳಯಗಳು ಪರಶಿವನ ದಿವ್ಯನೆನಹಿಗೆ ಸಂಬಂಧಪಟ್ಟ ಸಂಗತಿಗಳು. ಶಿವಶರಣರ ತತ್ತ್ವಜ್ಞಾನದಲ್ಲಿ ಅವರೋಹಣ-ಆರೋಹಣಗಳ ಈ ಕ್ರಮಕ್ಕೆ ಶಿವ ಲೀಲೆ-ಶಕ್ತಿಯ ವಿಲಾಸ ಎಂದು ಹೆಸರು. ಪಿಂಡಬ್ರಹ್ಮಾಂಡದೊಡನಿಹ ಪರಶಿವನ ಈ ನಿಲವಿಗೆ ಶಿವಶರಣರು ಪಿಂಡಸ್ಥಲವೆಂದು ಕರೆದಿರುವರು.

ಸೃಷ್ಟಿಯ ಕಾಠಿಣ್ಯಾವಳಿಯ ಬೇಕು, ಇದು ಶಿವಲೀಲೆಯ - ಶಕ್ತಿವಿಲಾಸದ ಇನ್ನೊಂದು ಸ್ವರೂಪವೆಂದು ಹೇಳಲಾಯಿತಷ್ಟೇ! ಕಾಠಿಣ್ಯವು ಅಳಿಯುವದು ಹೇಗೆ, ಆರಿಂದ ಮತ್ತು ಆರ ನೆರವಿನಿಂದ ಇವೇ ಮೊದಲಾದ ಸಂಗತಿಗಳು ಒಡೆಯಲಾಗದ ಒಗಟಿಗೆ ಸಂಬಂಧಿಸಿದವುಗಳು. ಪ್ರಾಣಿಗಳೆಲ್ಲರಲ್ಲಿ ವಿಶೇಷ ತರಹದ ತಿಳಿವಳಿಕೆಯನ್ನು ಪಡೆದ ಮಾನವನು ಕಾಠಿಣ್ಯದ ಕುಡಿಯು ಕೊನರಲಿಕ್ಕೂ ಕರಗಲಿಕ್ಕೂ ಕಾರಣನಿಹನು. ಶಿವಲೀಲೆ - ಶಕ್ತಿವಿಲಾಸಗಳಲ್ಲಿಯ ಗೊತ್ತುಗುರಿಗಳನ್ನು ಅರಿಯುವ ಸೂಕ್ಷ್ಮಮತಿಯೂ ಅವನ್ನು ಈಡೇರಿಸುವ ಧೃತಿಯೂ ಅವನಿಗುಂಟು. ಆದುದರಿಂದ ಪರಶಿವಲೀಲೆಯ ನೃತ್ಯದಲ್ಲಿ ಹೆಜ್ಜೆಗೆ ಸರಿಯಾಗಿ ಗೆಜ್ಜೆಯ ಕಟ್ಟಿಕೊಂಡು, ತಾಳಕ್ಕೆ ಸರಿಯಾಗಿ ಮೇಳವ ಕೂಡಿಸಿಕೊಂಡು, ರಾಗಕ್ಕೆ ಸರಿಯಾಗಿ ಸೂರನು ಸೇರಿಸಿಕೊಂಡು, ಲೀಲೆಯ ಪರಮಾನಂದದಲ್ಲಿ ನಿಬ್ಬೆರಗುಗೊಂಡು ಸಾಗುವ ಹೊಣೆಗಾರಿಕೆಯು ಆ ವಿಶೇಷ ತರಹದ ತಿಳಿವಳಿಕೆಯ ಮಾನವನಿಗೆ ಸೇರಿದುದು. ಈ ತಿಳಿವಳಿಕೆಯ ಉಪಯೋಗವನ್ನು ಅವನು ಕಾಲಕಾಲಕ್ಕೆ ಹೇಗೆ ಮಾಡಿಕೊಳ್ಳುತ್ತ ಬಂದಿರುವನೆಂಬುದು ಜಗತ್ತಿನ ಐತಿಹ್ಯದಿಂದ ವಿದಿತವಾಗುತ್ತಲಿದೆ. ವಿಶ್ವದ ಆದರ್ಶವನ್ನು ಅಣುವಿನಲ್ಲಿ ಕಾಣಲಾಗುವಂತೆ ವಿಶ್ವದ ಅರಿವನ್ನೂ ಮತ್ತು ವಿಶ್ವದ ಅರಿವನ್ನು ಅಡಗಿಸಿಕೊಂಡ ಪರಶಿವನ ಅರಿವನ್ನೂ ವ್ಯಕ್ತಿಯ ಅರಿವಿನಲ್ಲಿ ಕಂಡುಕೊಳ್ಳಬಹುದು. ನಾನಾಮುಖದ ವ್ಯವಹಾರಕ್ಕೆ ಈ ಅರಿವಿನ ಹರಿವಿಲ್ಲದೆ ಆಗದು. ಈ ವ್ಯವಹಾರವು ಬುದ್ಧಿಯನ್ನು ಬೆರೆಸಿಕೊಂಡು ಸಾಗದೆ ಭಾವವನ್ನು ಬಳಸಿಕೊಂಡು ಸಾಗಿ ವಿಶ್ವಗತಿಯಲ್ಲಿ ಪರಶಿವಲೀಲೆಯ ಪ್ರಕಟತೆಗೆ ಸೌಲಭ್ಯವನ್ನುಂಟುಮಾಡಿಕೊಟ್ಟಿದಾದರೆ, ಸಚ್ಚಿದಾನಂದ ಪರಶಿವನ ನಿಲವನ್ನರಿಯಲು ಮಾನವನ ಕೈಸೋತ ಪ್ರಯತ್ನಗಳಲ್ಲಿ ಕಳೆತುಂಬಿ ಆ ಪರಶಿವನ ದಿವ್ಯತೆ ಭವ್ಯತೆ ನವ್ಯತೆಗಳ ತಿಳಿವಳಿಕೆಯುಂಟಾಗುವದು. ಆಗ 'ಪರಶಿವನು ತನ್ನ ಬಿಟ್ಟು ಬೇರಿಲ್ಲ. ತನ್ನ ಬಿಟ್ಟು ಬೇರೆಡೆಗೆ ಅವನನ್ನು ಹುಡುಕಿದರೂ ಅವನು ನಿಲುಕುವಂತಿಲ್ಲ; ತನ್ನೊಳಗೆ ಅವನಿಹನು; ಅದೇಕೆ ತಾನೇ ಅವನು' - ಎಂಬ ಅನುಭವವುಂಟಾಗಿ ಅಖಂಡ ಪರಶಿವನ ಹಂಬಲದಲ್ಲಿದ್ದ ಆ ವ್ಯಕ್ತಿಯಲ್ಲಿ —

ಜ್ಞಾನ ಮುಕುರದೊಳಗೆ ನೋಡಿ ತಾನು ತನ್ನ ಕುರುಹುವಿಡಿದು
ತಾನು ತನಗೆ ಅನ್ಯವಿಲ್ಲವೆಂಬ ಭೇದವಾ
ತಾನೆಯರಿದು ಮಾಯೆ ಮಿಥ್ಯವಂ ನಿವೃತ್ತಿ ಮಾಡಿ ಶಿವ
ಧ್ಯಾನದಲ್ಲಿ ಮನವನಿತ್ತ ಸೌಖ್ಯಶರಣನು

ತಾನಲ್ಲದೆ ಇನ್ನಾರು - ಎಂಬ ಅರಿವು ಅಂಕುರಗೊಳ್ಳುವುದು. ಇದುವೆ ಶಿವಶರಣರ ಪರಿಭಾಷೆಯಲ್ಲಿ ಪಿಂಡಜ್ಞಾನಸ್ಥಲವು.

ಹೀಗೆ ಪಿಂಡಜ್ಞಾನವುಂಟಾದರೂ ಅದು ಅಂಗವಿಸಬೇಕಲ್ಲವೇ? ಇದಕ್ಕಾಗಿ ಪುರುಷಪ್ರಯತ್ನವು ಬೇಕು; ಪುರುಷಪ್ರಯತ್ನವೇ ಪ್ರಭುಕಾರುಣ್ಯವಾಗುವಷ್ಟು ಪ್ರಯತ್ನವು ಬೇಕು. ಇಂಥ ಪ್ರಯತ್ನದಲ್ಲಿ ಜಡವಾದ ಇಂದ್ರಿಯ ಮನ ಪ್ರಾಣಗಳ ಒಡನಾಟದಿಂದ ಅರಿವಿಗೆ ಉಂಟಾಗಿದ್ದ ಮರವೆಯ ಮುಸುಕು ಓರೆಯಾದ ಹೊರತು ಜ್ಞಾನವು ಅಂಗವಿಸಲು ಸಾಧ್ಯವಿಲ್ಲೆಂದು ಕಳವಳಿಸಿ ಸ್ವಸ್ವರೂಪಮಪ್ಪ ಅಖಂಡದ ನೆಲೆಯನ್ನು ಗಣಸಾಕ್ಷಿಯಾಗಿ ಗುರುಮುಖದಿಂದರಿತು ಸಾಧನೆಯ ಕ್ರಮಕ್ಕೆ ನಿಲ್ಲಲು ಭಕ್ತಿಸ್ಥಲದಲ್ಲಿ ನಿಂತಿಹ ಆತ್ಮನವನಾಗುವನು. ಅವನಿಗೆ ಮರವೆಯಳಿದು ಪ್ರಸನ್ನ ಪರಿಣಾಮವುಳಿಯುವದೇ ಗಳಿಕೆಯ ಗುರಿಯಾಗಿಹುದು. ಇದಕ್ಕಾಗಿ ಕರ್ತೃ-ಭೃತ್ಯ, ಪೂಜ್ಯ-ಪೂಜಕ, ಉಪಾಸ್ಯ-ಉಪಾಸ್ಯಕ, ಸೇವ್ಯ-ಸೇವಕ, ಶಿವ-ಜೀವ, ದೇವ-ಭಕ್ತ, ಗುರು-ಶಿಷ್ಯ, ಎಂಬ ಉಭಯ ಭಾವವು ಬಲಿತಿರುವುದವನಲ್ಲಿ. ಗುಣತ್ರಯದ ಸಂಸಾರದಲ್ಲಿ ತೊಳಲಿ ಬಳಲುತ್ತಿದ್ದ ಜೀವನು ಈ ತರಹದ ಅನುಭವ ಸಂಪಾದನೆಯ ಕ್ರಮದಲ್ಲಿ ಪ್ರಸನ್ನ ಕಾಯ, ಪ್ರಸನ್ನಕರಣ, ಪ್ರಸನ್ನ ಪ್ರಾಣಗಳನ್ನು— ಪ್ರಸಾದಪಿಂಡವನ್ನು ಪಡೆಯುತ್ತ ಸಾಗುವನು. ಆಗ ಇಂದ್ರಿಯಮನ ಪ್ರಾಣಗಳ ಹಂಗು ಹರಿಯಿಲ್ಲದೆ ತನ್ನ ಮರೆತು ರೂಹಿಲ್ಲದಾತನ ರೂಹಿಸಲೆಳಿಸುವನು ಭಕ್ತನು; ರೂಪಕ್ಕೆ ಬಾರದೆ ಸೂಕ್ಷ್ಮಾತ್ ಸೂಕ್ಷ್ಮತರವೆನಿಸುವನು ದೇವನು. ಅದೇನು ಕಾರಣ? ಭಕ್ತ ದೇಹಿಕ ದೇವನು ಅವನಿರುವುದರಿಂದ! ಇಂಥ ಅವಸ್ಥೆಯಲ್ಲಿಯೂ ನಾನು ತಾನೆಂಬ ಉಭಯದರಿವೇ? ಅಂತೆಯೇ ಗೆಲುವೆನೆಂಬ ಭಕ್ತನ ಅಬ್ಬರಕ್ಕೆ!ಕೊಲುವೆನೆಂಬ ದೇವನ ಆರ್ಭಟೆ. ಅರಿವು ವಿಕಸನಗೊಳ್ಳಲೋಸುಗ ನಾನು-ತಾನು, ದೇವ-ಭಕ್ತ, ಗುರು-ಶಿಷ್ಯವೆಂಬ ಉಭಯಸ್ಥಲವಿದೆಯಲ್ಲದೆ ಪರಿಪೂರ್ಣವಾದ ಅರಿವಿನಲ್ಲಿ ಈ ದ್ವಂದ್ವದ ದಂದುಗವಿಲ್ಲ.

> "ಅರಿವಿನ ಹೃದಯ ಕಣ್ದೆರೆಯಬೇಕೆಂದು ಗುರುವೆಂದು ಸಂಕಲ್ಪಿಸಿಕೊಂಡೆನಲ್ಲದೆ ಗುರುವಿಂಗೆ ಶಿಷ್ಯನೆಂದುಂಟೇ? ಶಿಷ್ಯಂಗೆ ಗುರುವೆಂದುಂಟೇ? ಗಮನಾಗಮನ ನಾಸ್ತಿಯಾದ ಲಿಂಗಕ್ಕೆ ಅಂಗವೆಲ್ಲಿಯದೋ ಗುಹೇಶ್ವರಾ."

ಎಂಬ ಅಲ್ಲಮ ಪ್ರಭುವಿನ ಅನುಭವದ ನುಡಿಯಲ್ಲಿ ಗುರುಶಿಷ್ಯ ಸಂಬಂಧದ ಗೂಢವು ಅಡಗಿದೆ; ಮತ್ತು ಅಖಂಡವಾದ ಅರಿವೇ ಲಿಂಗವೆಂದು ಧ್ವನಿಯಿದೆ. 'ಕಣ್ಣ ಬೆಳಗು ಸೂರ್ಯನ ಬೆಳಗು ಕೂಡಿ ವಸ್ತುವ ಕಾಂಬಂತೆ ಎನ್ನ ನಿನ್ನ ಅರಿವಿನ ಬೆಂಬಳಿಯಲ್ಲಿ ಲಿಂಗವು ಕಾಣಬಂದಿತ್ತು' ಎಂಬ ಶರಣರ ವಚನವು ಸಹ ಗುರುಶಿಷ್ಯರ ಮಧ್ಯದಲ್ಲಿಯೇ ಲಿಂಗದುದಯವಿದೆ ಎಂಬುದನ್ನು ತಿಳಿಸುತ್ತದೆ.

ಶಿವಶರಣರ ವಚನಗಳಲ್ಲಿ ಲಿಂಗದ ಬಗೆಗೆ ಮಾರ್ಮಿಕವಾದ ವಿವೇಚನೆಯಿದೆ. 'ಲಿಂಗವೆಂಬುದು ಸರ್ವಕಾರಣ ನಿರ್ಮಲ; ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ; ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಕಾರಣ; ಲಿಂಗವೆಂಬುದು

ಸರ್ವ ತತ್ತ್ವಪೂರಣ;' 'ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ; ಲಿಂಗವೆಂಬುದು ಪರಶಿವನ ಘನತೇಜ; ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖವು; ಲಿಂಗವೆಂಬುದು ಪರಶಿವನ ಪರಮಜ್ಞಾನ;'– ಇತ್ಯಾದಿಯಾದ ವರ್ಣನೆಯಲ್ಲಿ ಶಿವಶರಣರು ಹೇಳುವ ಪಿಂಡಸ್ಥಲದಲ್ಲಿ ವರ್ಣಿತವಾದ ಅಖಂಡ ಪರಶಿವನೇ ಲಿಂಗವೆಂದು ಸ್ಪಷ್ಟವಿದೆ; ಮತ್ತು ಶಬ್ದಗಳ ಅಳವಿಗೆ ನಿಲುಕದ ಶಿವನನ್ನು ಶಬ್ದಕ್ಕೆ ತಂದು ಹೇಳುವ ಸಾಹಸವೂ ಇದೆ. ಇಂದ್ರಿಯಂಗಳಿಗೆ ಪ್ರತ್ಯಕ್ಷವಾಗದ ಲಿಂಗದ ಈ ಕಲ್ಪನೆಯಲ್ಲಿ ಆನಂದವಿಲ್ಲ ಶರಣರಿಗೆ. ಕಲ್ಪನೆಗೆ ನಿಲುಕಿದುದು ಕರಗತವೇಕಾಗ ಬಾರದೆಂಬುದೇ ಅವರ ಹಂಬಲ ಮತ್ತು ಅದನ್ನು ಕರಗತಮಾಡಿಕೊಳ್ಳಲೂ ಅವರ ಸಾಹಸ, ಪ್ರಯೋಗ ! 'ಅರುಹುವಿಡಿದು ಪೂಜಿಸಲೆಂದು ಕುರುಹ ಕೊಟ್ಟಡೆ ಅರುಹ ಬಿಟ್ಟು ಕುರುಹನೆ ಪೂಜಿಸುವ ಹೆಡ್ಡರ ನೋಡಾ;' 'ತನ್ನನರಿವುದಕ್ಕೆ ದೃಷ್ಟವ ಕೈಯಲ್ಲಿ ಕೊಟ್ಟ;' 'ಮರಹು ಬಂದಿಹುದೆಂದು ಗುರು ಕುರುಹ ಕೈಯಲ್ಲಿ ತೋರಿದ;' 'ಅಂತರಂಗದಲ್ಲಿರ್ದ ನಿರವಯ ಲಿಂಗವನು ಸಾವಯವ ಲಿಂಗವ ಮಾಡಿ ಶ್ರೀಗುರುಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ;' 'ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಶ್ರೀಗುರುವು;' 'ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು;' 'ಮುನ್ನನಾದಿಯ ಶರಣ ತನ್ನಯ ಸ್ವರೂಪವನು ಭಿನ್ನವಿಲ್ಲದೆ ವಾಮ ಕರದಿ ಪಿಡಿದು'—ಎಂಬಿವೇ ಮೊದಲಾದ ಲಿಂಗದ ರಹಸ್ಯವ ಬೀರುವ ಮಾತುಗಳಲ್ಲಿ ಕಣ್ಣಿಗೆ ಕಾಣದುದೂ ಕೂಡ ಕರಗತವಾಗುವ ರೀತಿಯು ಹುದುಗಿದೆ. ಇಲ್ಲಿ 'ತನ್ನಯ ಸ್ವರೂಪ', 'ಅರುಹು', 'ಮರಹು', 'ಕುರುಹು', 'ಕರಸ್ಥಲ' ಇತ್ಯಾದಿ ಪದಗಳು ಲಿಂಗದ ಸಂಸ್ಕೃತಿಯನ್ನು ವ್ಯಕ್ತಗೊಳಿಸುವವು. ಮಾತುಮನಂಗಳಿಂದತ್ತತ್ತ ಮೀರಿದ ಘನವು ಪ್ರತ್ಯಕ್ಷವಾಗಲು ತಕ್ಕ ಕ್ಷೇತ್ರವು ಬೇಕಲ್ಲವೇ? ಅದುವೆ ಭಕ್ತ, ಶಿಷ್ಯ, ಲಿಂಗ ಪದವಾಚ್ಯನಾದ ಸಂಸ್ಕೃತಿಯನ್ನು ಪಡೆದ ಜೀವಾತ್ಮನು. ಜೀವಾತ್ಮನಿಗೆ ತನ್ನಯ ಸ್ವರೂಪವೆ ಪರಮಾತ್ಮನೆಂಬ ಅರುಹು (Positive pole of Existence) ಇರುವುದಾದರೂ ಅದು ಮರವೆ (Negative pole of Existence) ಯಿಂದ ಮಲಿನಗೊಳ್ಳುವದು. ಮಲವಳಿದು ಮರವೆಯು ನಷ್ಟವಾಗಿ ಅರುಹು ಬೆಳಗಿ ಸ್ವಸ್ವರೂಪ ಜ್ಞಾನವು ಪ್ರತ್ಯಕ್ಷವಾಗಲು ಕುರುಹಿನ (Real Existence) ಅವಶ್ಯಕತೆಯುಂಟು—ಎಂಬುದನ್ನು ಈ ವಚನವು ಸ್ಪಷ್ಟಗೊಳಿಸುವುದು :

ಎನ್ನ ಕರಸ್ಥಲದ ಮಧ್ಯದಲ್ಲಿ ಪರಮ ನಿರಂಜನ ಕುರುಹ ತೋರಿದ
ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆಯ ತೋರಿದ
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ
ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ
ಎನ್ನೊಳಗೆ ತನ್ನ ತೋರಿದ ತನ್ನೊಳಗೆ ಎನ್ನನಿಂಬಿಟ್ಟುಕೊಂಡ
ಮಹಾಗುರುವಿಗೆ ನಮೋ ನಮಃ ಎನುತಿರ್ದೆನಯ್ಯಾ ಅಖಂಡೇಶ್ವರಾ.

ಮರವೆಯನ್ನೇ ಆಹಾರಗೊಂಡ ಜೀವಾತ್ಮನಿಗೆ ಅರುಹಿನ ಕಲ್ಪನೆಯುಂಟಾಗದು. ಮರವು ಅಖಂಡಪ್ರಾಯವಾಗಿ ತೋರಿದರೂ ಅದನ್ನು ಓರೆಮಾಡಿಕೊಳ್ಳಬಯಸು ವವನಿಗೆ ಅದೇನು ಘನವಾದುದಲ್ಲ. ಓರೆಮಾಡಿಕೊಳ್ಳುವ ನೆನವು ಉಂಟಾದರೆ ಅಣುಮಾತ್ರವಾದ ಅರುಹಿನಿಂದ ಮರವೆಯ ಮಾಯಾವಿಲಾಸವು ಅಡಗುವುದು. ಇದಕ್ಕಾಗಿ ನಿರ್ಭಯ ಜ್ಞಾನವೂ ನಿಶ್ಚಲ ವೃತ್ತಿಯೂ ಅಳವಡುತ್ತ ಸಾಗಬೇಕು ಅವ ನಲ್ಲಿ.ಮರಹು ಅರುಹುಗಳಲ್ಲಿ ಮರವೆಗೆ ಅಧಃಸೃಷ್ಟಿ ಅಥವಾ ಅಧಃಕುಂಡಲಿನಿ ಎಂದೂ ಅರುಹಿಗೆ ಊರ್ಧ್ವಸೃಷ್ಟಿ ಅಥವಾ ಊರ್ಧ್ವಕುಂಡಲಿನಿ ಎಂದೂ ಹೆಸರು. ಜೀವಾ ತ್ಮನು ಇಂದ್ರಿಯ ವಶನಾಗಿರುವವರೆಗೆ ಸ್ವಾರ್ಥಪರಾಯಣನೂ ಪ್ರವೃತ್ತಿಪರದೃಷ್ಟಿ ಯವನೂ ಅಧೋಮುಖಿಯೂ ಆಗಿರುವನು; ಯಾಕಂದರೆ ಅಲ್ಲಿ ಅವನಿಗೆ ಇಂದ್ರಿಯ ಗಳ ಜಾಡ್ಯದಿಂದ ಮರಹು ಮುಸುಕಿರುವುದು. ಆದರೆ ಇಂದ್ರಿಯಗಳ ವಶವರ್ತಿ ಯಾಗದೆ ಅವುಗಳನ್ನು ವಶದಲ್ಲಿಟ್ಟುಕೊಂಡು ಅರುಹನ್ನು ಅಂಗವಿಸಿಕೊಂಡಾಗ ಅವನು ಕೇವಲ ನಿಸ್ವಾರ್ಥ ನಡೆಯುವನು, ನಿವೃತ್ತಿಪರ ದೃಷ್ಟಿಯುಳ್ಳವನು, ಊರ್ಧ್ವ ಮುಖಿಯು ಎಂದೆನಿಸುವನು. ಜೀವಾತ್ಮನು ತನ್ನ ಇರುಹಿನಲ್ಲಿದ್ದು ಮರಹಿನ ಕಡೆಗೆ ಇಳಿದರೆ ಮಾನವನಾಗುವನು. ಅರುಹಿನ ಕಡೆಗೆ ಏರಿದರೆ ಶರಣನಾಗುವನು. ಮರವಿನಾಚರಣೆಯ ಮಾನವನಿಗೆ ಭವಿಯೆಂದೂ ಅರುಹಿನಾಚರಣೆಯ ಶರಣನಿಗೆ ಭಕ್ತನೆಂದೂ ಹೆಸರು.

ಭಕ್ತನಾಗಿಹ ಲಿಂಗವಂತನು ಎಂದೆಂದೂ ಅಗಲದಂತೆ ಅಂಗದ ಮೇಲೆ ಧರಿಸಿ ಕೊಂಡಿಪ್ಪ ಲಿಂಗವು ಅರುಹಿನ ಕುರುಹು ಎಂದು ಹೇಳಿತಷ್ಟೇ! ಪಿಂಡಬ್ರಹ್ಮಾಂಡಗಳು ಈ ಪರಿಪೂರ್ಣ ಅರುಹಿನ ನೆನಹಿನಿಂದ ಹೊರಹೊಮ್ಮಿದುದರಿಂದ ಅವೂ ಅರುಹಿನ ಕುರುಹುಗಳೇ! ಮಾನವನ ಕಾಯಕ್ಕೆ 'ಕುರುಹಿನ ಅಂಗ' ವೆಂದು ಹೆಸರು. ಲಿಂಗ ವಂತನು ಕಲ್ಪಿಸಿಕೊಂಡ ಅಂಗದ ಮೇಲಿನ ಅರುಹಿನ ಕುರುಹು 'ಕುರುಹಿನ ಅಂಗ'ದ ಸ್ವರೂಪವನ್ನು ವ್ಯಕ್ತಗೊಳಿಸುವುದು. 'ಕುರುಹಿನ ಅಂಗ' ದ ಈ ಸ್ವರೂಪಕ್ಕೆ ಇಷ್ಟ ಲಿಂಗವೆಂದು ಪಾರಿಭಾಷಿಕ ಶಬ್ದವು. ಲಿಂಗವಂತನು 'ಕುರುಹಿನ ಅಂಗ' ದ ಮೇಲಿರಿ ಸಿದ ಈ ಅರುಹಿನ ಕುರುಹನ್ನು ಅಂಗೈಯಲ್ಲಿರಿಸಿ ಅನುಸಂಧಾನಗೆಯ್ಯುವನಾದುದರಿಂದ ಇದಕ್ಕೆ 'ಕರಸ್ಥಲ' ವೆಂದೂ ಹೆಸರು. ಪಿಂಡವಲ್ಲಿಯ ಮಾನವನ ಅರಿವು ಜಾಗರ ಸ್ವಪ್ನ ಸುಷುಪ್ತಿ ಅವಸ್ಥೆಗಳಿಗೆ ಸಾಕ್ಷೀಭೂತವಾಗಿರುವ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳನ್ನು ವ್ಯಾಪಿಸಿದುದು. ಈ ಅರಿವು ಜಡವಾದ ಇಂದ್ರಿಯ ಮನ ಪ್ರಾಣಗಳ ಬಳಕೆಯಿಂದ ಮರವೆಗೊಳಪಟ್ಟು ಜಾಗರಾವಸ್ಥೆಯಲ್ಲಿ ಬುದ್ಧಿಯ ರೂಪವಾಗಿಯೂ ಸ್ವಪ್ನಾವಸ್ಥೆಯಲ್ಲಿ ಮನದ ರೂಪವಾಗಿಯೂ ಸುಷುಪ್ತ್ಯವಸ್ಥೆಯಲ್ಲಿ ಮದಡವಾದ ಅಚಿತ್ ರೂಪವಾಗಿಯೂ ವ್ಯವಹರಿಸುವುದು. ಶಿವಶರಣರ ಪರಿಭಾಷೆಯಲ್ಲಿ

ಇಂಥ ಅರಿವಿನ ಮೊತ್ತಕ್ಕೆ 'ತನು ಮನ ಧನ' ವೆನ್ನುವರು. ಆರೋಹಣ ಕ್ರಮದಲ್ಲಿ ಜಾಗರದ ಅರಿವೊಂದನ್ನೇ-ಸ್ಥೂಲವೊಂದನ್ನೇ-ಲಿಂಗಮಯಗೊಳಿಸಿದರೆ ಅರಿವಿನ ಪರಿಪೂರ್ಣ ವಿಕಾಸವಾದಂತಾಗುವದಿಲ್ಲವೆಂದು ಬಗೆದು ಸೂಕ್ಷ್ಮ ಮತ್ತು ಕಾರಣ ಶರೀರ ಗಳಲ್ಲಿಯ ಮಾಲಿನ್ಯಗೊಂಡ ಈ ಅರಿವಿಗೂ ಸಹ ಲಿಂಗ ಸ್ಪರ್ಶವಾಗಬೇಕು, ಅದೂ ಬೆಳಗಬೇಕು— ಎಂದು ಸ್ಥೂಲಕ್ಕೆ ಸಂಬಂಧಪಟ್ಟ ಕರಸ್ಥಲದಂತೆಯೇ ಸೂಕ್ಷ್ಮ ಮತ್ತು ಕಾರಣಗಳಿಗೆ ಸಂಬಂಧಪಟ್ಟ 'ಮನಸ್ಥಲ' ಮತ್ತು 'ಭಾವಸ್ಥಲ' ಗಳ ನಿರ್ದೇಶವನ್ನು ಪಡೆದರು ಶಿವಶರಣರು. ಮನಸ್ಥಲದಲ್ಲಿಯ ಅರಿವು ಪ್ರತಿಪ್ರಾಣ ವಾಗಿರುವುದರಿಂದ ಅದಕ್ಕೆ ಪ್ರಾಣಲಿಂಗವೆಂದೂ ಭಾವಸ್ಥಲದಲ್ಲಿಯ ಅರಿವು ಭಾವಭರಿತ ನಿರ್ಭಾವವಾಗಿರುವುದರಿಂದ ಅದು ಭಾವಲಿಂಗವೆಂದೂ ಸಂಕೇತಿಸಿ ಇಷ್ಟ ಪ್ರಾಣ ಭಾವಲಿಂಗಗಳ ಅನುಸಂಧಾನದಿಂದ ಅರಿವಿನ ಪರಿಪೂರ್ಣ ವಿಕಾಸಕ್ಕೆ ಅವಕಾಶ ವನ್ನು ಮಾಡಿಕೊಂಡರವರು.

'ಲಿಂಗವ ಮುಟ್ಟಿದ ಕೈ ಮೀಸಲು' ಎಂದು ಶಿವಶರಣರ ಕಟ್ಟಾಚಾರದ ಅನುಭವೋಕ್ತಿಯೊಂದುಂಟು. ಅಳಿಯಾಸೆಯಿಂದ ಪ್ರಪಂಚವೆಲ್ಲ ಮೀಸಲುಗೆಡುವುದ ರಿಂದ ಆ ಅಳಿಯಾಸೆಯ ಪ್ರಪಂಚ ನಿವೃತ್ತಿಗಾಗಿ ಲಿಂಗವಂತನು ಹಂಬಲಿಸುತ್ತಿರು ವನು. ಜಡವಾದ ಇಂದ್ರಿಯಂಗಳ ಬಳಕೆಯ ದೆಸೆಯಿಂದ ಅನಿಷ್ಟ ಪ್ರವೃತ್ತಿಯು ಹೆಚ್ಚಿ ಅಂತರಂಗವನ್ನೂ ಕಲಕುವದು, ಪರಿಸ್ಥಿತಿಯನ್ನೂ ಹದಗೆಡಿಸುವದು ಎಂದು ಕಂಡು ಅವನು ಅನಿಷ್ಟವನ್ನು ನಿವಾರಿಸಲು ಇಷ್ಟವ ತಾಳುವನು. ಇದಕ್ಕಾಗಿ ಅವನು ನಿತ್ಯವೂ —

ಪರದೈವಕೆ ಪರವನಿತೆಗೆ
ಪರಹಿಂಸೆಗೆ ಪರಧನಕ್ಕೆ ಪರನಿಂದೆಗೆ ನಾಂ।
ಪರರ ತುತಿಗೆಯ್ವ ದೈನ್ಯ
ಕ್ಕೆರವಣಿಸದ ತೆರನ ಮಾಡು ಪರಮಪ್ರಭುವೇ॥

ಎಂದು ಬೇಡುವನು; ದುಷ್ಪ್ರವೃತ್ತಿಗಳಿಲ್ಲವ ನೀಡುವನು. ಇಂದ್ರಿಯ ಪಾವಿತ್ರತೆಯೇ ಪ್ರಾಮುಖ್ಯವಾಗಿರುವ ಅವನು ಅನಿಷ್ಟಪ್ರವೃತ್ತಿಯುಳ್ಳವರ (ಭವಿಗಳ) ಸಂಗವ ತ್ಯಜಿಸಿ ಇಷ್ಟಪ್ರವೃತ್ತಿಯುಳ್ಳವರ (ಭಕ್ತರ) ಸಂಗವ ಭಜಿಸುವನು. ಸ್ಥೂಲ ತನುವಿನ ಅನಿಷ್ಟಪ್ರವೃತ್ತಿಗಳನ್ನು ಹೊಡೆದೋಡಿಸಲು ಅವನಿಗೆ ಕಾಯಾರ್ಪಣದ ನೀತಿ ಕ್ರಿಯಾಚಾರವೇ ಸಾಧನವು. ಇದರಿಂದ ಅವನು ತನ್ನನ್ನೂ ತನ್ನ ಪರಿಸ್ಥಿತಿ ಯನ್ನೂ ಪರಿಶುದ್ಧಗೊಳಿಸಲು ಬಲ್ಲಿದನಾಗುವನು. ಇಷ್ಟಲಿಂಗದ ಅನುಸಂಧಾನ ದಿಂದ ಸ್ಥೂಲದ ಅನಿಷ್ಟಪ್ರವೃತ್ತಿಗಳನ್ನು ಪರಿಹರಿಸಿ ಲಿಂಗವಂತನು ತನುಶುದ್ಧಿ ಯನ್ನುಂಟುಮಾಡಿಕೊಳ್ಳುವನು. ಇಂಥ ಶುದ್ಧವಾದ ತನುವೇ ಶುದ್ಧಪ್ರಸಾದ ವೆನಿಸುವದು; ಆದುದರಿಂದ ಅವನೇ ಶುದ್ಧಪ್ರಸಾದಿಯು. ಅನಿಷ್ಟ ಪ್ರವೃತ್ತಿಗಳನ್ನಡಗಿಸಿ

ಕೊಂಡ ಇಷ್ಟಲಿಂಗಾನುಸಂಧಾನಿಗೆ ಕೈಯ ಕರಿದು ಬಿಳಿದು ಆಗುವದು. ನೀತಿಯೇ ತಳಹದಿಯಾದ ಅವನ ಶುದ್ಧ ನಡೆಯು ಸದ್ಭಕ್ತರಿಗೆಲ್ಲ ಮಾರ್ಗದರ್ಶಿಯಾಗುವದು.

ಅನೀತಿ ಅನಾಚಾರ ಅತ್ಯಾಚಾರ ಪ್ರವೃತ್ತಿಯುಳ್ಳ ಜೀವಿಗಳೆಲ್ಲರು ವಾಯು ಪ್ರಾಣಿಗಳು. ವಿಷಯವಾಸನೆಯೇ ಭೋಗದ ಬೀಡವರಿಗೆ. ಅವರ ಪ್ರಾಣ ವ್ಯಾಪಾರವೆಲ್ಲ ರಜೋಗುಣದ ದೋಷಪೂರಿತವಾದುದು. ನೀತಿಯ ನಡೆಯಿಂದ ಇಷ್ಟ ಲಿಂಗವ ಪಡೆದ ಲಿಂಗವಂತನು ಪ್ರಾಣವ್ಯಾಪಾರವನ್ನು ಸುಸ್ಥಿರಗೊಳಿಸಿಕೊಳ್ಳುವನು. ಅವನು ವಾಯುಪ್ರಾಣಿಯೆನಿಸದೆ ಪ್ರಾಣವನ್ನು ಲಿಂಗದ ಕಿರಣದಿಂದ ಪ್ರಕಾಶಿತ ಗೊಳಿಸುವನು; ಪ್ರಾಣವೇ ಲಿಂಗವೆಂಬರಿವನ್ನು ಪಡೆವನು. ಪ್ರಾಣಲಿಂಗದ ಅನುಸಂಧಾನದಿಂದ ಸೂಕ್ಷ್ಮತನುವಿನ ರಜೋಗುಣವಳಿಸಿ ಪ್ರಾಣಸಿದ್ಧಿಯನ್ನು ಹೊಂದುವನು ಇಂಥ ಸಿದ್ಧವಾದ ಪ್ರಾಣದ ದೆಸೆಯಿಂದ ಅವನ ಸೂಕ್ಷ್ಮತನುವು ಸಿದ್ಧ ಪ್ರಸಾದವೆನಿಸುವದು. ಆದುದರಿಂದ ಅವನೇ ಸಿದ್ಧಪ್ರಸಾದಿಯು. ಪ್ರಾಣದ ಪ್ರಸನ್ನತೆ ಯನ್ನು ಪಡೆಯಲು ಅವನಿಗೆ ಕರಣಾರ್ಪಣಭೂಯಿಷ್ಠವಾದ ಜ್ಯೋತಿವಿಶಿಷ್ಟವಾದ ಅಂತರ್ಮುಖ ಸಮ್ಯಕ್ ದೃಷ್ಟಿಯೇ ಸಾಧನವು. ಇದರಿಂದ ಅವನ 'ಒಡಲ ಬೆಡಗಿನ ಗಡಣವು ಸ್ಫಟಿಕದ ಘಟದೊಳಗೆ ಜ್ಯೋತಿಯನಿರಿಸಿದಂತೆ, ಕತ್ತಲೆಯ ಮನೆಯಲ್ಲಿ ರತ್ನವ ಹರಹಿದಂತೆ, ರತ್ನದ ಸಿರಿಗೆ ರವಿಕೋಟಿಕಿರಣಂಗಳು ಮುಸುಕಿದಂತೆ, ಬೆಳಬೆಳಗು ಹಳಚಿ ಮಹಾ ಬೆಳಗಿನೊಬ್ಬುಳಿಯನೊಳಕೊಂಡು ಘನಗಂಭೀರ' ವಾಗಿಹುದು. ಈ ಮೆಟ್ಟಿನಲ್ಲಿ ಇಷ್ಟಲಿಂಗಾನುಸಂಧಾನಿಗೆ ನಿಲುಕದ ದೂರದೃಷ್ಟಿ, ದೂರಶ್ರವಣ, ವಿವಿಧಪ್ರಕಾರದ ಗಂಧ ಸೇವನೆಯ ಅನುಭವ ಮೊದಲಾದ ಇಂದ್ರಿಯಂಗಳ ಪಾರದರ್ಶ್ಯವನ್ನು ವ್ಯಕ್ತಗೊಳಿಸುವ ವಿಶೇಷ ತರಹದ ಅನುಭವವು ಪ್ರಾಣಲಿಂಗಿಗೆ ಸಾಧ್ಯವಾಗುವದು. ವಿಷಯಗಳು ಇಂದ್ರಿಯ ಸ್ಪರ್ಶವ ಹೊಂದುವ ಪೂರ್ವದಲ್ಲಿಯೇ ವಿಷಯಗಳತ್ತ ಪ್ರಾಣಲಿಂಗಿಯ ಅರಿವು ಗಮಿಸಿ ಅವುಗಳ ಅರಿವನ್ನುಂಟುಮಾಡಿಕೊಳ್ಳುವುದು ಪ್ರಾಣಲಿಂಗಿಯ ಅರಿವು ಯೋಗಿಯ ಅರಿವಿಗಿಂತ ಭಿನ್ನವಾದುದಲ್ಲ. ಪ್ರಾಣಲಿಂಗಿಯು ಪ್ರತ್ಯಕ್ಷ ಯೋಗಿಯೇ! ಶುದ್ಧ ಶಿವಯೋಗಿಯವನು. ಆದ್ದರಿಂದ ಅವನಿಗೆ ನಾದಬಿಂದುಕಳೆಗಳು ಸಾಧ್ಯವಾಗುವದು ಅಚ್ಚರಿಯಲ್ಲ.

ಲಿಂಗವಂತನಿಗೆ ಪ್ರಾಣಲಿಂಗಿಯ ಅರಿವೇ ಕೊನೆಯದಲ್ಲ. ಜನ್ಮಜನ್ಮಾಂತರದಲ್ಲಿ ಗಳಿಸಿಕೊಂಡ ಸಂಸ್ಕೃತಿಬೀಜವನ್ನು ಸಂಗ್ರಹಿಸಿಕೊಂಡಿರುವ ಭಾವದಲ್ಲಿ ನಡೆಯುತ್ತಿರುವ ವೈಚಿತ್ರ್ಯವನ್ನರಿತು ಭಾವವನ್ನು ಬಯಲುಗೊಳಿಸುವುದೇ ಲಿಂಗವಂತನ ಗುರಿಯು. ಭಾವಲಿಂಗದ ಅನುಸಂಧಾನದಲ್ಲಿ, ಅವನಿಗೆ ಬುದ್ಬುದಾಕಾರವಾಗಿ ಹೊರಹೊಮ್ಮಿ ಕಾಣಿಸಿಕೊಳ್ಳಲು ಅವಕಾಶವನ್ನು ಕಾಯುತ್ತಿರುವ ಭಾವಬೀಜಗಳನ್ನು ಭಾವಾರ್ಪಣ ಸಾಧನೆಯಿಂದ ಹುರಿದು ಅವನು ಭಾವಪ್ರಸಿದ್ಧಿಯನ್ನು ಪಡೆವನು. ಇಂಥ ಪ್ರಸಿದ್ಧ

ವಾದ ಭಾವವಿಶಿಷ್ಟನಾದ ಅವನ ಕಾರಣತನುವು ಪ್ರಸಿದ್ಧ ಪ್ರಸಾದವೆನಿಸುವುದು. ಆದುದರಿಂದ ಅವನಿಗೆ ಪ್ರಸಿದ್ಧಪ್ರಸಾದಿಯೆಂದು ಹೆಸರು. ಅಂತರಂಗದಲ್ಲಿ ಭಾವಿಸುವ ಬಹಿರಂಗದಲ್ಲಿ ಬಯಸುವ ತೆರನನತಿಗಳೆದು ಅವನು ತನ್ನಲ್ಲಿ ತಾನೇ ಸಹಜವಾಗಿರುವನು. ಪ್ರಾಣಲಿಂಗಾನುಸಂಧಾನಿಗೆ ದೊರಕಿದ ಅನುಭವಸುಖರತಿಯು ಅಗಲೀತೆಂಬ ಭಾವತಿಯಿಲ್ಲವನಿಗೆ. ಅದು ಕೈಜಾರಿ ಹೋಗಕೂಡದೆಂಬ ಪ್ರಾಣಲಿಂಗಿಯ ಭೀತಿಗೆ ಇಲ್ಲಿ ಅವಕಾಶವಿಲ್ಲ. ಭಾವಲಿಂಗಾನುಸಂಧಾನಿಯು ಕೇವಲ ಭೀತಿರಹಿತನು. ನೀತಿಜ್ಯೋತಿಗಳ ನಿಲವನ್ನು ಮೀರಿದ ನಿರ್ಭೀತ ನಿರಂಜನನು, ನಿರಾಭಾರಿಯು ಅವನು. ನಿರ್ವಿಕಲ್ಪ ನಿರ್ಬೀಜ ಸಮಾಧಿಸಾಧಕನೆಂದರೂ ಅವನೇ! ಪ್ರಾಣಲಿಂಗಿಸ್ಥಲದ ಮೊದಲ ಮೆಟ್ಟಿನಲ್ಲಿ ಕಾಣಬಹುದಾದ ಸ್ವಕಪೋಲ ಕಲ್ಪಿತ ದರ್ಶನ ಧ್ವನಿ ವಿಶೇಷಗಳ ಸುಳುವು ಭಾವಲಿಂಗಾನುಸಂಧಾನಿಗೆ ಇರುವುದಿಲ್ಲ. ಪ್ರಾಣಲಿಂಗಿಗೆ ಸೂಕ್ಷ್ಮವಾಗಿ ತೊಡಕಿರುವ ಆ ಭೀತಿಯ ಒಡಲೂ ಭಾವಲಿಂಗಿಗೆ ಇರುವುದಿಲ್ಲ. ಅವನ

ತನು ಬಯಲು ನಿರವಯದೊಳಡಗಿತ್ತು
ಮನ ಬಯಲು ನಿರವಯದೊಳಡಗಿತ್ತು
ಭಾವ ಬಯಲು ನಿರವಯದೊಳಡಗಿತ್ತು
ಬಯಲು ಬಯಲ ಬೆರಸಿ ಬಯಲೆ ಆಯಿತ್ತು
ಕೂಡಲ ಚೆನ್ನಸಂಗಯ್ಯನೆಂಬ ನುಡಿಯುಡಗಿತ್ತು.

ಆದರಿಂದ ಅವನು ಬಯಲೊಡಲಿಗನು. 'ನಾ ನಿಮ್ಮ ಪೂಜಿಸಿ ಬಯಲಾದೆ ಗುಹೇಶ್ವರಾ' ಎಂದು ಅಲ್ಲಮ ಪ್ರಭುದೇವರು ಹೇಳುವಂತೆ ಲಿಂಗದ ನೆಲೆಯರಿತು ಲಿಂಗವಾಗುವ – ಲಿಂಗವ ಪೂಜಿಸಿ ಲಿಂಗವಾಗುವ ಗೂಢವು ಶಿವಶರಣರು ಕಂಡುಕೊಂಡ ಈ ಅಖಂಡ ಲಿಂಗದಲ್ಲಿ—ಈ ಮಹಾಲಿಂಗದಲ್ಲಿ ಅಡಗಿದೆ.

ಶಿವಶರಣರ ದರ್ಶನದಲ್ಲಿ ಪರಿಪೂರ್ಣ ಅರಿವಿನ ಆದರ್ಶವಾದ ಅವ್ಯಕ್ತ ಪರಶಿವನೇ ಅಖಂಡ ಮಹಾಲಿಂಗವು. ಈ ಅರಿವಿನ ಅನುಭವವನ್ನು ವ್ಯಕ್ತಗೊಳಿಸಿ ಅಂಗವಿಸಿಕೊಳ್ಳಲೋಸುಗ, ಈ ಅಖಂಡ ಲಿಂಗದ ಸಮರಸವ ಹೊಂದಲೋಸುಗ, ಪರಶಿವನ ಚಿತ್‌ಶಕ್ತಿಯಿಂದ ಹೊರಹೊಮ್ಮಿ ಸತ್ಯವಾಗಿ ತೋರುವ ಸೃಷ್ಟಿಯಲ್ಲಿ ಪಿಂಡದ ನೆರವಿನಿಂದ ಅವರು ಕಂಡುಕೊಂಡ ಇಷ್ಟ ಪ್ರಾಣ ಭಾವಲಿಂಗಗಳ ಸಾಧನೆಯ ಕ್ರಮವು ಮೂದೆರಸಾದದು. ನೀತಿ ಜ್ಯೋತಿ ನಿರ್ಭೀತಿಗಳೇ ಲಕ್ಷ್ಯವಾಗಿರುವ ಅವರ ಈ ಸಾಧನೆಯ ಕ್ರಮದಲ್ಲಿ ನೀತಿವಿಡಿದು ಇಷ್ಟಲಿಂಗ ಸಮರಸಿಯಾದ ಮಹಂತನೇ ಭಕ್ತನು. ಜ್ಯೋತಿವಿಡಿದು ಪ್ರಾಣಲಿಂಗ ಸಮರಸಿಯಾದ ಪ್ರಸನ್ನ ಪರಿಣಾಮಿಯೇ ಗುರುವು. ನೀತಿ ಜ್ಯೋತಿಗಳ ಕವಲು ಇಲ್ಲದೆ ಭಾವಲಿಂಗ ಸಮರಸಿಯಾದ ನಿರ್ಭೀತ ನಿರಂಜನ ನಿರಾಭಾರಿಯೇ ಜಂಗಮವು. ಲಿಂಗವಂತರಲ್ಲಿ ರೂಢವಾಗಿರುವ ಸಾಮಾನ್ಯ, ವಿಶೇಷ, ನಿರಾಭಾರಿ ವೀರಶೈವರು ಎಂಬ ಪದಗಳು ವಿಶೇಷ ತರಹದ ಅನುಭವ

ಸಂಪಾದನೆಯ ದೆಸೆಯಿಂದ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ ಅನುಸಂಧಾನಿಗಳಿಗೆ ಅನ್ವಯಿಸುವವು. ಸಾಮಾನ್ಯ ವಿಶೇಷ ನಿರಾಭಾರಿ ಈ ಮೂರು ವಿಧಗಳು ಬೇರೆಬೇರೆ ವ್ಯಕ್ತಿಗಳಿಗೆ ಅನ್ವಯಿಸದೆ ಅರಿವನ್ನು ಸಂಪೂರ್ಣವಾಗಿ ವಿಕಾಸಗೊಳಿಸಿ ಕೊಳ್ಳುವ ಒಬ್ಬ 'ಅಂಗ'ನಿಗೇ ಅನ್ವಯಿಸುತ್ತವೆ. ಆ ಅಂಗನು ಇಷ್ಟಲಿಂಗದ ಅನುಸಂಧಾನದಿಂದ ಬಹಿರಂಗವನ್ನು ಶುದ್ಧಗೊಳಿಸಿ ಭಕ್ತನೆನಿಸಿಕೊಳ್ಳುವನು; ಇವನಿಗೇ ಸಾಮಾನ್ಯ ವೀರಶೈವನೆಂದು ಹೆಸರು. ಆ ಅಂಗನು ಪ್ರಾಣಲಿಂಗದ ಅನುಸಂಧಾನದಿಂದ ಅಂತರಂಗವನ್ನು ಶುದ್ಧಗೊಳಿಸಿ ಗುರುವೆನಿಸಿಕೊಳ್ಳುವನು ; ಇವನಿಗೇ ವಿಶೇಷ ವೀರಶೈವನೆಂದು ಹೆಸರು. ಆ ಅಂಗನು ಭಾವಲಿಂಗದ ಅನುಸಂಧಾನದಿಂದ ಭಾವವ ಬತ್ತಲೆಗೊಳಿಸಿ ಆತ್ಮಸಂಗದ ವಿರಕ್ತ ಅಥವಾ ಜಂಗಮವೆನಿಸಿಕೊಳ್ಳುವನು; ಇವನಿಗೇ ನಿರಾಭಾರಿ ವೀರಶೈವನೆಂದು ಹೆಸರು. ವಿವೇಕಚಿಂತಾಮಣಿಯಲ್ಲಿ ಶ್ರೀ ನಿಜಗುಣರು ಹೇಳುವ ಈ ವೀರಶೈವ ವರ್ಗೀಕರಣದ ತಿರುಳು ಹೀಗಿದೆ. ಪಿಂಡವು ಪ್ರಸಾದವಾಗಿ ಅರಿವು ತುಂಬಾ ಕರಿಗೊಳ್ಳಲು ಮತ್ತು ಕರಿಗೊಂಡ ಅರಿವಿನಿಂದ ಬ್ರಹ್ಮಾಂಡವನ್ನು ಪ್ರಸಾದಗೊಳಿಸಿ ಪಿಂಡ ಬ್ರಹ್ಮಾಂಡಗಳ ಸಮರಸವನ್ನು ಪಡೆಯಲು ಈ ಲಿಂಗತ್ರಯದ ಅನುಸಂಧಾನ ಮತ್ತು ಅರಿವಿನ ಆದರ್ಶವನ್ನು ವ್ಯಕ್ತಗೊಳಿಸುವ ಭಕ್ತ, ಗುರು, ಜಂಗಮ ಇವುಗಳ ಘನತೆ ಹಾಗು ಅವಶ್ಯಕತೆ ಇಂತುಂಟು. ಲಿಂಗವಂತರಲ್ಲಿ ಭಕ್ತ, ಗುರು, ಜಂಗಮ ಮತ್ತು ಈ ಮೂವರಿಗೆ ಪ್ರತಿಪ್ರಾಣವಾಗಿರುವ ಲಿಂಗ ಇವುಗಳಿಗೆ ಚತುರ್ವಿಧ ಸಾರಾಯ ಸಂಪತ್ತು ಎಂದು ಕರೆಯುವರು. ಈ ಸಂಪತ್ತಿಯು ಅತ್ಯಧಿಕವಾಗುವಷ್ಟು ಮಟ್ಟಿಗೆ ಅರಿವಿನ ವಿಕಾಸವು ಸಂಪೂರ್ಣತೆಗೆ ಸಮೀಪಿಸುವದೆಂಬುದನ್ನು ಕಂಡು ಕೊಂಡರು ಶರಣರು.

ತತ್ತ್ವಜ್ಞಾನ ಅನುಭಾವವಿದ್ಯೆ ಅನುಭವ ಸಾಧನೆಯ ರೀತಿ ಈ ದೃಷ್ಟಿಯಿಂದ ಶಿವಶರಣರು ಕಂಡ ಚತುರ್ವಿಧ ಸಾರಾಯ ಸಂಪತ್ತಿಯ ಘನತೆಯು ಇಂಥ ವಿಶಿಷ್ಟತೆಯಿಂದ ಕೂಡಿದುದು. ಅನುಭವವನ್ನು ಸುಲಭವಾಗಿ ಮಾಡಿಕೊಂಡು ಜನತೆಗೆ ಅದನ್ನು ನೀಡುವವರ ಹಿತಬುದ್ಧಿ ಏನೋ ಹಿರಿದಾಗಿಹುದು; ಆದರೆ ಅದನ್ನು ಪಾಲಿಸಿಕೊಂಡು ಹೋಗುವವರ ಮೇಲಿನ ಹೊಣೆಯೂ ಸಹ ಹಿರಿದಾದುದೆಂಬುದನ್ನು ಮರೆಯಲಾಗದು. ಯಾವ ತತ್ತ್ವ ಅನುಭವಗಳೇ ಆಗಿರಲಿ, ಅವನ್ನು ಪಾಲಿಸುವವರ ಯೋಗ್ಯತೆಯ ಮೇರೆಗೆ ಅವುಗಳಿಗೆ ಬೆಲೆಯುಂಟೆಂಬ ಸಂಗತಿಯು ಯಾವಾಗಲೂ ನಿಜವಾದುದೇ ! ತತ್ತ್ವಾನುಭವಗಳ ನಡೆಗೆ ಅನಾದರವುಂಟಾದರೆ, ಚ್ಯುತಿಯುಂಟಾದರೆ, ಇಲ್ಲವೆ ಅದರಲ್ಲಿ ಕೀಳ್ಮೆಗೆಳಿಸುವ ಪಲ್ಲಟವುಂಟಾದರೆ ಆ ತತ್ತ್ವಾನುಭವಗಳ ನುಡಿಗಳೆಲ್ಲ ಆಡಂಬರದ ನುಡಿಗಳಾಗುವವು. ಅನುಭವ ಜ್ಯೋತಿಯು ಹೊತ್ತಿರದ ಜನಸಮೂಹದಲ್ಲಿ ಕಾವ

ಇವು ಮುಸುಕಿ ತತ್ತ್ವಾನುಭವಗಳ ಯಥಾರ್ಥ ತಿಳಿವಳಿಕೆಯೂ ಆಗದೆ ಕಾರ್ಯಸಾಧಕರಿಂದ ಅವು ಸಿಕ್ಕ ಹಾಗೆ ಬಳಸಲ್ಪಡುವವು. ಕಾಲಾಂತರದಲ್ಲಿ ಅನುಭಾವ ಸಂಪಾದಕರ ನಿಲವು ಉದ್ದೇಶ ಗೊತ್ತು ಗುರಿಗಳು ಮಸುಳಿಸಿ ಅವರು ಜನಸಮುದಾಯದ ಶುಷ್ಕವಾದ ಆದರದಲ್ಲಿ ಮಾತ್ರ ಉಳಿಯಬೇಕಾಗುವದು. ಶಿವಶರಣರು ಕಂಡುಹಿಡಿದ ಭಕ್ತ ಗುರು ಜಂಗಮ ಇವಕ್ಕಾಸರವಾದ ಲಿಂಗ ಈ ಚತುರ್ವಿಧದ ಆದರ್ಶದ ಪೆರ್ಮೆಯಲ್ಲಿ ಲಿಂಗದ ನೆಲೆಕಲೆಯನ್ನರಿತು ಅದನ್ನು ಅಂಗವಿಸಿಕೊಂಡು ಅಂಗಲಿಂಗ ಸಮರಸಗೊಳ್ಳುವದೇ ಅಂಗನಿಗೆ ಆತ್ಯಂತಿಕ ಧ್ಯೇಯವು. ಈ ಧ್ಯೇಯವನ್ನು ಈಡೇರಿಸುವದು ಪ್ರತಿಯೊಬ್ಬ ಲಿಂಗವಂತನಿಗೆ ಇಷ್ಟವಾಗಿದೆ. ತನ್ನ ದುಡಿಮೆಯ ವೈಶಿಷ್ಟ್ಯದಿಂದ ಪ್ರತಿಯೊಬ್ಬ ಲಿಂಗವಂತನಿಗೆ ಭಕ್ತ ಗುರು ಜಂಗಮ, ಅದೇಕೆ ಪರಿಪೂರ್ಣ ಮತ್ತು ಅಖಂಡ ಅರಿವಿನ ಆದರ್ಶವಾದ ಲಿಂಗವಾಗಲು ಶಕ್ಯವಿದೆ—ಎಂಬ ತತ್ತ್ವದ ತಿರುಳು ಅನುಭಾವದ ಗುಟ್ಟು ಯಾವ ಧ್ಯೇಯದಿಂದ ಶಿವಶರಣರ ಈ ಚತುರ್ವಿಧ ಸಾರಾಯ ಸಂಪತ್ತಿಯಲ್ಲಿ ಹೊಂದಿಕೆಗೊಂಡಿತೋ ಅದು ಸುಸಂಬದ್ಧವಾದ ಅನುಭವ ಪರಂಪರೆಯಿಲ್ಲದೆ ಕಾಲಾಂತರದಲ್ಲಿ ಕಲ್ಪಿಸಲಿಕ್ಕೆ ಬಾರದಷ್ಟು ಬದಲಾಗುತ್ತ ಬಂದಿತೆಂಬುದು ಲಿಂಗವಂತರ ತತ್ತ್ವಜ್ಞಾನ ಮತ್ತು ಅನುಭವ ಇವುಗಳ ಐತಿಹ್ಯದಿಂದ ತಿಳಿದುಬರುವುದು. ಸದ್ಯದಲ್ಲಿ ಭಕ್ತ ಗುರು ಜಂಗಮ ಈ ತತ್ವಗಳು ವಿಶಿಷ್ಟ ವರ್ಗದ ಸೊತ್ತುಗಳಾಗಿ ಬಿಟ್ಟಿವೆ; ಲಿಂಗವಾಗುವ ಗುರಿಯು ಯಾರಿಗೋ ! ಹೇಳುವದು ಕಷ್ಟ! ಭಕ್ತ ಗುರು ಜಂಗಮ ಈ ವರ್ಗಗಳಿಗೆ ಲಿಂಗವು ಅವಶ್ಯವಾಗಿ ಬೇಕೇಬೇಕು. ಯಾಕಂದರೆ ಭಕ್ತನೂ ಲಿಂಗಭಕ್ತನೇ, ಗುರುವೂ ಲಿಂಗಭಕ್ತನೇ ಮತ್ತು ಜಂಗಮವೂ ಲಿಂಗಭಕ್ತನೇ ! ಲಿಂಗಾಚಾರವು ಎಲ್ಲರಿಗೂ ಬೇಕು. ಲಿಂಗದ ‘ ಆಚಾರವಿಲ್ಲದ ಭಕ್ತ ದುಷ್ಕರ್ಮಿ, ಆಚಾರವಿಲ್ಲದ ಗುರು ಭೂತಪ್ರಾಣಿ, ಆಚಾರವಿಲ್ಲದ ಜಂಗಮ ಮಾನವ.... ಇದು ಕಾರಣ ಅಟ್ಟವನೇರುವುದಕ್ಕೆ ನಿಚ್ಚಣಿಕೆಯೇ ಸೋಪಾನವು.’ ಎಂದು ತೋಂಟದಾರ್ಯರು ಎಚ್ಚರಿಸಿದುದನ್ನಿಲ್ಲಿ ಅರಿತಿರಬೇಕು. ‘ ಸದಾಚಾರವನಾಚರಿಸುವ ಸತ್ಕ್ರಿಯಾಸಂಪನ್ನನಿಗೆ ಸಮ್ಯಕ್ ಜ್ಞಾನವುದಯವಾಗುವದು. ಆ ಸಮ್ಯಕ್ ಜ್ಞಾನೋದಯದಿಂದ ತನ್ನ ತಾನರಿದು ತಾನೇ ಶಿವನಲ್ಲದೆ ತನಗೇನೂ ಇದಿರಲ್ಲ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವನೈಯ್ದುವಡೆ ಆಚಾರವೇ ಮುಖ್ಯವಯ್ಯ.’ ಎಂದು ಸ್ವತಂತ್ರ ಸಿದ್ಧಲಿಂಗೇಶ್ವರರು ಉಚ್ಚರಿಸಿದುದನ್ನಿಲ್ಲಿ ಮರೆತಿರಲಾಗದು. ಮನವನ್ನು ಇಷ್ಟಲಿಂಗದಲ್ಲಿಯೇ ಇರಿಸಿದ ಲಿಂಗವಂತನಿಗೆ ಭಕ್ತನೆಂದು ಅವನೇ ಸಾಮಾನ್ಯ ವೀರಶೈವನೆಂದೂ, ಆ ಮನವು ಪ್ರಾಣಲಿಂಗದಲ್ಲಿ ಸಿಲುಕಿದ ಲಿಂಗವಂತನಿಗೆ ಗುರುವೆಂದು ಅವನೇ ವಿಶೇಷ ವೀರಶೈವನೆಂದೂ, ಅದೇ ಮನವು ಭಾವಲಿಂಗದಲ್ಲಿ ಬೆರೆತಾಗ ಲಿಂಗವಂತನಿಗೆ ಜಂಗಮವೆಂದು ಅವನೇ ನಿರಾಭಾರಿ ವೀರಶೈವನೆಂದೂ ಸಂಕೇತವಿರುತ್ತಿರಲು

ಈ ಅನುಭವವನ್ನು ತೂರಿ, ಸಮಾಜದಲ್ಲಿ ಕಾರ್ಯಸಾಧಕರ ಕೈವಾಡವು ಸೇರಿ, ಆಗಮ ಪ್ರತಿಪಾದನೆಯೆಂದು ಸಾರಿ, ಭಕ್ತ ಸಮೂಹವೇ ಸಾಮಾನ್ಯರು, ಪಟ್ಟಚರಾಧಿಪರೇ ವಿಶೇಷರು, ಮತ್ತು ವಿರಕ್ತ ಅಥವಾ ಜಂಗಮರೇ ನಿರಾಭಾರಿಗಳು ಎಂದು ರೂಢಿಯು ಉಂಟಾಯಿತು. ಭಕ್ತರಿಗೆ ಸಾಮಾಜಿಕ ಕಾರ್ಯಗಳಲ್ಲಿ ಅಧಿಕಾರವಿಲ್ಲ, ನಿರಾಭಾರ ವೃತ್ತಿಯಂತೂ ಅವರಿಗೆ ಮುನ್ನವೇ ನಿಲುಕುವಂತಿಲ್ಲ, ಆದ್ದರಿಂದ ಅವರು ಎಂದೆಂದಿಗೂ ಭಕ್ತರೇ! ಪಟ್ಟಚರಾಧಿಪರು ಸಾಮಾಜಿಕ ಕಾರ್ಯಗಳಿಗೆ ಅಧಿಕಾರಿಗಳು, ಇದೇ ಸಾಮಾನ್ಯರಿಗಿಂತ ಅವರಿಗಿರುವ ವೈಶಿಷ್ಟ್ಯವು, ಗುರುಗಳಾಗಿರತಕ್ಕ ಯೋಗ್ಯತೆಯು ಅವರಿಗೆ ಮಾತ್ರ ಉಂಟು; ವಿರಕ್ತ ಅಥವಾ ಜಂಗಮರಿಗೆ ಭಕ್ತರಿಗಿರುವ ಭಾರವಾಗಲಿ ಪಟ್ಟಚರಾಧಿಪರಿಗಿರುವ ನೀರಾಗಲಿ ಇರುವದಿಲ್ಲ, ಆದ್ದರಿಂದ ಅವರು ಕೇವಲ ನಿರಾಭಾರಿಗಳು—ಎಂಬ ಸಂಕುಚಿತ ವಿಚಾರವು ಸಮಾಜದ ಕುರುಡ ದೃಷ್ಟಿಗೆ ತೋರಿದಾಗಲೆ ವರ್ಗಕಲಹಕ್ಕೆ ಬೀಜಾರೋಪಣವಾಯಿತೆನ್ನಬೇಕು. ಭಕ್ತ ಗುರು ಜಂಗಮ ಈ ವರ್ಗೀಕರಣವು ಜ್ಯೋತಿವಿಶಿಷ್ಟವಾದುದಲ್ಲ, ಕೇವಲ ಜಾತಿವಿಶಿಷ್ಟವಾಗಿಹುದು; ಆದುದರಿಂದ ಶಿವಶರಣರು ಏರ್ಪಡಿಸಿದ್ದ ಚತುರ್ವಿಧ ಸಾರಾಯ ಸಂಪತ್ತಿಯ ಗುರಿಯು ನಷ್ಟವಾಗಿ ಸಾಮಾಜಿಕ ವಿಶೇಷಾರ್ಥದಲ್ಲಿ ಅದು ಬಳಕೆಗೊಂಡು ಶಿವಶರಣರ ಸ್ಥಿರಗೊಳ್ಳಲೆಣಿಸಿದ್ದ ಲಿಂಗವಂತ ಸಮಾಜದ ಹ್ರಾಸಕ್ಕೆ ಅವಕಾಶವುಂಟಾಯಿತು. ಈ ವರ್ಗೀಕರಣವು ಅನುಭವಕ್ಕೆ ಕೇವಲ ಅಸಂಗತವಾದುದೂ ಅಶಾಸ್ತ್ರೀಯವಾದುದೂ ಎಂಬುದನ್ನು ಶಿವಶರಣರ ಐತಿಹ್ಯದಿಂದಲಾದರೂ ತಿಳಿಯಬೇಡವೇ? ಅನ್ಯರು ಮಾಡಿದರೆ ಭಕ್ತ ಗುರು ಜಂಗಮತನವು ಎಂದೂ ದೊರೆಯದು! ಅವನ್ನು ಹೊಂದುವ ಶಕ್ತಿಯು ತನ್ನಲ್ಲಿದೆ; ತಾನು ದುಡಿದು ಪಡೆದರೆ ಆ ನಿಲವು ನಿಲುಕುವದು. ಸ್ವಾರ್ಥದೃಷ್ಟಿಯಲ್ಲಿ ತಲೆದೋರಿದ, ಅನುಭವಕ್ಕೆ ಅಸಂಗತವಾದ ಮತ್ತು ಅಶಾಸ್ತ್ರೀಯವಾದ ಈ ವರ್ಗೀಕರಣದ ದೆಸೆಯಿಂದ ಸಮಾಜದಲ್ಲಿ ಶಿವಶರಣರ ತತ್ತ್ವಾನುಭವಗಳು ಹಬ್ಬುಗೆಗೊಳ್ಳುವದು ಒತ್ತಟ್ಟಿಗಿರಲಿ, ಆ ಇಡಿಯ ಸಮಾಜವೇ ಕೀಳ್ದೆಸೆಗೆ ಇಳಿಯುತ್ತ ಸಾಗಿರುವದು ಅತ್ಯಂತ ಶೋಚನೀಯವಾದುದು. ಸಮಾಜದ ಉನ್ನತಿಯನ್ನು ಬಯಸುವ ಘನವಂತರು, ಉನ್ನತವಾದ ತತ್ತ್ವ ಅನುಭಾವ ಅನುಭವಪರಂಪರೆ ಇವನ್ನೇ ಎದುರಿಟ್ಟುಕೊಂಡಿರುವ ಮಹಾಂತರು ಸಾಂಪ್ರದಾಯಶರಣರಾಗದೆ ಸತ್ಯಶರಣರಾಗಿ ಅನುಭವಕ್ಕೆ ಅಸಂಗತವಾದ ಮತ್ತು ಅಶಾಸ್ತ್ರೀಯವಾದ ಈ ವರ್ಗೀಕರಣವನ್ನು ನಿವಾರಿಸಿ ಶಿವಶರಣರ ಚತುರ್ವಿಧ ಸಾರಾಯ ಸಂಪತ್ತಿಯ ರಹಸ್ಯವು ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ವೇದ್ಯವಾಗುವ ಕುರಿತು ತಕ್ಕ ವ್ಯವಸ್ಥೆಗೊಳಿಸಬೇಕು; ಅಂದರೆ ಶಿವಶರಣರ ತತ್ತ್ವ ಮತ್ತು ಅನುಭಾವಗಳ ಪ್ರಸಾರವೂ ಪ್ರಚಾರವೂ ಸುಗಮವಾಗಿ ನೆರವೇರಲು ಅನುವುಂಟಾಗುವುದು.

# ಮೂರುತಿ

ಸಂಗ್ರಾಹಕರು: ಶ್ರೀ. ವೀರಭದ್ರಪ್ಪ ಕೊಪ್ಪಳ, ಎಂ. ಎ., ಬಿ. ಟಿ. ಧಾರವಾಡ.

[ಧಾರವಾಡದ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ಹುಬ್ಬಳ್ಳಿಯಲ್ಲಿ ಮಾಡಿದ ಭಾಷಣದ ಸಾರಾಂಶವಿದು.]



ಜೀವನದ ಹೋರಾಟವೆಲ್ಲ ಆಸೆ-ಅಂಜಿಕೆಗಳ ಆಧಾರದಲ್ಲಿ ಸಾಗಿದುದಾಗಿದೆ. ಜೀವನಕ್ಕೆ ಅವಶ್ಯವಿರಲಿ ಇಲ್ಲದಿರಲಿ, ಕಣ್ಣಿಗೆ ಕಾಂಬುದೆಲ್ಲ ಕೈಗೆ ನಿಲುಕಬೇಕೆಂಬ ಹಂಬಲವು ಮಾನವ ಸ್ವಭಾವಕ್ಕೆ ಸಹಜವಾದುದು. ಮತ್ತು ಕಣ್ಣಿಗೆ ಕಾಂಬುದು ಕರಗತವಾಗದಿರಲು ಮರುಕಗೊಳ್ಳುವದೂ ಕರಗತವಾದುದು ಕೈಜಾರಿ ಹೋದರೆ ಆದಕ್ಕಾಗಿ ಕೊರಗುವದೂ ಸಹ ಆ ಮಾನವ ಸ್ವಭಾವದ ಧರ್ಮವಾಗಿಹುದು. ಅದ ರಂತೆ ತನಗೆ ಕೈಸೆರೆಯಾದುದನ್ನು ಕಸಿದುಕೊಳ್ಳಬೇಕೆಂಬವರ ಮೇಲೆ ಕ್ರೋಧವೂ, ಕೈಸೆರೆಯಾದುದು ತನಗಾಗಿಯೇ ಇರಬೇಕೆಂಬ ಲೋಭವೂ, ಅದು ತನ್ನ ಬಿಟ್ಟು ಅಗಲಿರಲಾಗದೆಂಬ ಮೋಹವೂ, ತನ್ನಲ್ಲಿಯೇ ಇರುವುದೆಂಬ ಮದವೂ, ಆದಕ್ಕಿಂತ ಅಧಿಕವಾದುದು ಅನ್ಯರ ಬಳಿಯಲ್ಲಿರುವದ ಕಂಡು ಮತ್ಸರವೂ ಅ ಸ್ವಭಾವದಲ್ಲಿ ಮೂಡಿಹುದು. ಸ್ವಭಾವದಲ್ಲಿ ಹೀಗೆ ಅಲೆ ಅಲೆಯಾಗಿ ಕಂಗೊಳಿಸುವ ಈ ಧರ್ಮವು ಕಾಮದಲ್ಲಿ ಉಗಮಗೊಂಡು ಮಾತ್ಸರ್ಯದ (ಅಸೂಯೆಯ)ಲ್ಲಿ ಕೊನೆಗಾಣುವುದು. ಸತ್ವರಜಸ್ತಮೋಮಯಿಯಾದ ಪ್ರಕೃತಿಯ ಮತ್ತು ಅದರ ವಿಕಾರಗಳ ಒಡನಾಟ ವಿರುವವರೆಗೆ ಸ್ವಭಾವದ ಈ ಅಲೆಗಳು ಸ್ತಿಮಿತಕ್ಕೆ ಬರುವಂತಿಲ್ಲ, ವ್ಯಾಕುಲಕ್ಕೆ ವಿಶ್ರಾಂತಿಯಿಲ್ಲ, ಕಳವಳಕ್ಕೆ ಕೊನೆಯಿಲ್ಲ. ಆಸೆ-ಅಂಜಿಕೆಗಳ ಆಧಾರದಲ್ಲಿ ಬೆಳೆದು ಬಂದಿರುವ ಈ ಜೀವನದ ಹೋರಾಟಕ್ಕೆ ಹೇಸಿ, ಅದನ್ನು ಉತ್ತಮಗೊಳಿಸಬೇಕೆಂಬ ಹಸಿವೆ ಹುಟ್ಟಿದಾಗಲೇ ಜ್ಞಾನದ ಬೀಜಾರೋಪಣವಾಯಿತೆನ್ನಬೇಕು. ಅಸೂಯೆ ಯಲ್ಲಿ ಕೊನೆಗಾಣುವ ಕಾಮದ ಬಾಳುವೆಯು ಅನಸೂಯೆಯಲ್ಲಿ ಮಾರ್ಪಾಟಾಗ ಬೇಕಾದರೆ ಅದು ನಿಷ್ಕಾಮದಿಂದ ಮೊದಲುಗೊಳ್ಳಬೇಕು; ವಿಕಾರಕ್ಕೆಳಿಸುವ ತ್ರಿಗುಣ ಗಳ ಜಂಜಡವು ಕಡೆಗೊಳ್ಳಬೇಕು; ಅರ್ಥಾತ್ ಅತ್ರಿಯ ನಡೆಯು ಅಂಗವಿಸಬೇಕು. ಅನಸೂಯೆ-ಅತ್ರಿ ಋಷಿಗಳಿಂದ ದತ್ತಾತ್ರೇಯನು ಜನಿಸಿದನೆಂದು ಪುರಾಣದ ಕಥೆ ಇದೆಯಲ್ಲವೇ? ವೇದಾಂತಿಗಳ ಸತ್ತು-ಚಿತ್ತು-ಆನಂದಬ್ರಹ್ಮವೆಂದರೂ, ಯೋಗಿಗಳ ನಾದ-ಬಿಂದು-ಕಳಾತ್ರಯೀ ಎಂದರೂ ಆಗಮಕಾರರ ಇಷ್ಟ-ಪ್ರಾಣ-ಭಾವಲಿಂಗ ವೆಂದರೂ ಶಿವಶರಣರ ಗುರು-ಲಿಂಗ-ಜಂಗಮತ್ರಿವಿಧವೆಂದರೂ ಈ ದತ್ತಾತ್ರೇ ಯನೇ! ಅನಸೂಯೆ ಭಾವವಳವಟ್ಟು, ಸತ್ವ-ರಜ-ತಮಗಳನ್ನು ಮೀರಿರ್ಪ ಶರಣರ ಹಸ್ತವೇ ಗೊತ್ತಾಗಿರುವ ಈ ದತ್ತಾತ್ರೇಯನು ಅಧ್ಯಾತ್ಮ ಸಾಧಕರ ಇಷ್ಟ ಮೂರುತಿಯಾಗಿರುವುದೆಂಬುದು ಸ್ಪಷ್ಟವಾದುದು.

ವೇದಾಂತಿಗಳು ಜ್ಞಾನವೇ ಮೋಕ್ಷ ಸಾಧನವೆಂದುಸುರಿ ಜ್ಞಾನಕ್ಕೆ ಅತ್ಯುಚ್ಚ

ಸ್ಥಾನವನ್ನು ಕಲ್ಪಿಸಿಕೊಟ್ಟರು. ಸಿದ್ಧಾಂತಿಗಳಿಗೆ ಸಚ್ಚಿದಾನಂದವೇ ಪರಬ್ರಹ್ಮ ವೆಂದು ತಿಳಿಯುಂಟಾದರೂ ಕ್ರಿಯೆಯಿಲ್ಲದೆ ಬ್ರಹ್ಮಾನಂದದ ಅರಿವಿಲ್ಲವೆಂದು ಅವರು ಕ್ರಿಯೆಗೇ ಆಧಿಕ್ಯಸ್ಥಾನವನ್ನು ಕುರುಹಿಟ್ಟು ಕೊಟ್ಟರು. ಮಂತ್ರದೃಷ್ಟಾರರ ಜ್ಞಾನ ವಾಗಲಿ ತಾಂತ್ರಿಕರ ಕ್ರಿಯೆಯಾಗಲಿ ಸಾಮಾನ್ಯರಿಗೆ ನಿಲುಕದ ವಿಷಯವು; ಇದಲ್ಲದೆ ಜ್ಞಾನದ ಅತಿರೇಕದಲ್ಲಿ ಕ್ರಿಯೆಗೂ ಮತ್ತು ಕ್ರಿಯೆಯ ಅತಿರೇಕದಲ್ಲಿ ಜ್ಞಾನಕ್ಕೂ ಸಲ್ಲಬೇಕಾದ ಸ್ಥಾನವೂ ದೊರೆಯದೆ ಅನಾದರ ಉಂಟಾಗುವದೆಂಬುದು ಲೋಕದ ವ್ಯವಹಾರದಿಂದ ಮನವರಿಕೆಯಾಗಿರುವ ಮಾತು. ಜ್ಞಾನದ ಮಾತ ಬಳಸುವ ಹವ್ಯಾಸದಲ್ಲಿ ವಾಗಾದ್ವೈತದ ಅವಿಚಾರವೂ ಕ್ರಿಯೆಯ ರೀತಿಯ ಬೆಳಗಿಸುವ ಆತುರದಲ್ಲಿ ಇಷ್ಟಾನಿಷ್ಟ ಕೃತಿಗಳ ಆಲೋಚನೆಯಿಲ್ಲದ ಅನಾಚಾರವೂ ವೇದಾಂತ ಮಾರ್ಗದವರಿಗೂ ಮತ್ತು ಸಿದ್ಧಾಂತ ಮಾರ್ಗದವರಿಗೂ ವ್ಯೆಯುುಂಡುಬಿಟ್ಟ ಸಂಗತಿ ಯಾಗಿದೆ. ಈ ದೆಸೆಯಿಂದಲೇ 'ಗೊಡ್ಡು ವೇದಾಂತ, ಮಡ್ಡು ಸಿದ್ಧಾಂತ'ವೆಂಬ ನಾಣ್ಣುಡಿಯು ಕ್ರಿಯೆಯ ಕೊರತೆಯಿದ್ದ ವೇದಾಂತ ಮತ್ತು ಜ್ಞಾನದ ಅಭಾವ ವಿದ್ದ ಸಿದ್ಧಾಂತ ಇವುಗಳನ್ನುದ್ದೇಶಿಸಿ ಬಳಕೆಯಲ್ಲಿ ಬಂದಿರಬೇಕು. ಸಾಮಾನ್ಯ ವ್ಯವ ಹಾರದಲ್ಲಿಯೂ ಸಹ ಮಾತೀಕೆ ಕೃತಿಯಿರಲಿ, ಕೃತಿಯಲ್ಲಿ ಸೊಬಗಿರಲಿ ಎಂದು ಹೇಳುವದುಂಟು. ಮಾತಿಗೆ ಕೃತಿಯಮೇಳವೂ ಕೃತಿಗೆ ಸೊಬಗಿನ ಸಂಗಡಿಕೆಯೂ ಉಂಟಾಗಬೇಕಾದರೆ ಅಂಗವಿಸಿದ ಜ್ಞಾನವು ಅಂತಿಮವಲ್ಲ, ಅದಿನ್ನೂ ಅಪಾರ ವಾಗಿದೆ ಎಂಬ ಭಾವವೂ ಕಂಗೊಳಿಸುವ ಕ್ರಿಯೆಯು ಕೊನೆಯದಲ್ಲ, ಅದಿನ್ನೂ ಅಗ ಮ್ಯವಾಗಿದೆ ಎಂಬ ಭಾವವೂ ನೊಳೆಯಬೇಕು. ಅಪಾರವಾದ ಜ್ಞಾನ ಮತ್ತು ಅಗಮ್ಯವಾದ ಕ್ರಿಯೆ ಇವು ಕೈಗೆ ನಿಲುಕುವ ಬಗೆಯನ್ನು ಕುರಿತು ಭಾವಭರಿತವಾಗಿ ಆಲೋಚಿಸಿದಂತೆಲ್ಲ ಭಕ್ತಿಯ ಅಂಕುರ ಉಂಟಾಗಿ ಅದು ಪಲ್ಲವಿಸಿ ಪಸರಿಸತೊಡ ಗುವುದು. ಭಕ್ತಿಗೆ ಭಾವವೇ ಆಧಾರವಲ್ಲವೇ? ಇದನ್ನರಿತು ವೀರಶೈವ ಶಿವಶರಣರು ಕ್ರಿಯೆ ಮತ್ತು ಜ್ಞಾನ ಇವುಗಳಿಗೆ ಭಕ್ತಿಯ ಬೆಸುಗೆಯನ್ನುಂಟುಮಾಡಿ ಕ್ರಿಯೆ ಯನ್ನು ಸತ್ಕ್ರಿಯೆಯಲ್ಲಿಯೂ, ಜ್ಞಾನವನ್ನು ಸುಜ್ಞಾನದಲ್ಲಿಯೂ ಮಾರ್ಪಡಿಸಿ ದರು. ಕ್ರಿಯಾಜ್ಞಾನ ಸಾಮರಸ್ಯದ ರಹಸ್ಯವನ್ನರಿದರು ಮತ್ತು ಇದನ್ನರುಹಿದರು. ಸಾಧನೆಯ ಕ್ರಮದಲ್ಲಿ ಶಿವಶರಣರು ಇದನ್ನು ಹೇಗೆ ಬಳಸಿಕೊಂಡರೆಂಬುದನ್ನು ವಿಚಾರಿಸುವುದು ಸಾಧಕರ ದೃಷ್ಟಿಯಿಂದ ಅತ್ಯಂತ ಮಹತ್ವದ ಸಂಗತಿಯಾಗಿದೆ.

'ಮಾತೆ ಜ್ಯೋತಿರ್ಲಿಂಗ'ವೆಂಬುದೊಂದು ಅಲ್ಲಮಪ್ರಭುವಿನ ಅನುಭವೋ ಕ್ತಿಯು. ಹಿತವಾಗಿ ಮಿತವಾಗಿ ಬಳಸುವ ಅನುಭವದ ಮಾತು ಪ್ರೌಢಿಮೆಯಿಂದ ಕೂಡಿ ಮಂತ್ರವಾಗುವಷ್ಟು ಪಿರಿದಾಗಿಹುದು; ಅದೇಕೆ ಮಂತ್ರವೇ ಆಗಿಹುದು. ಮನನ ಮಾಡಿಕೊಳ್ಳುವುದರಿಂದ ಅಂಥ ಮಾತು ರಕ್ಷಣೆಗೆ ಕಾರಣವಾಗುವ ಮೂಲಕ ಅದು ಮಂತ್ರವೇ ಸರಿ (ಮನನಾತ್ ತ್ರಾಯತೆ ಇತಿ). ಮಂತ್ರವೆನಿಸಿದ ಮಾತಿಗೆ ಜ್ಯೋತಿರ್ಲಿಂಗವೆಂದು ಹೆಸರು. ಮಾತು ಮಂತ್ರವಾಗುವಂತೆ ದುಡಿದು

ಕೊಳ್ಳಬೇಕಾದರೆ ಸುಳ್ಳು ಠಕ್ಕು ಚಾಡಿ ಕುಹಕ ಮೊದಲಾದವುಗಳನ್ನಾಡದೆ ಒಳಿತನ್ನೇ ಬಳಸಬೇಕು. ಮಾತಿಗೆ ಮಾತು ಮಥಿಸಿ ವಿಧಿ ಬಂದು ಆತುಕೊಳ್ಳದಂತೆ ಎಚ್ಚರಗೊಂಡು ನುಡಿಯುಬೇಕು. 'ನುಡಿದರೆ ಮುತ್ತಿನ ಹಾರದಂತಿರಬೇಕು!'

ಜ್ಞಾನೇಂದ್ರಿಯಗಳಲ್ಲಿ ನಾಲಗೆಯ ಕಾರ್ಯವು ಇತ್ತೆರನಾಗಿದೆ. ಭಾವವನ್ನು ವ್ಯಕ್ತಗೊಳಿಸುವ ರೀತಿಯಲ್ಲಿ ಒಂದು ಸಾಧನವಾದ ಮಾತಿಗೆ ನಾಲಗೆಯ ಅವಶ್ಯಕತೆ ಇರುವಂತೆ ಭೌತ ಶರೀರದ ಪೋಷಣೆಗೆ ಅವಶ್ಯವಿರುವ ಅನ್ನದ ರುಚಿ ನೋಡಲು ಸಹ ಅದು ಅವಶ್ಯವಾದುದು. ಬ್ರಹ್ಮಾನುಸಂಧಾನವನ್ನು ಸಾಧಿಸುವವರು ರಸನೇಂದ್ರಿಯವನ್ನು ಬಿಗಿಹಿಡಿಯುುವರಲ್ಲವೇ? ಈ ಸಾಧನೆಯಲ್ಲಿ ಮಾತು ಮೌನವಾಗಬೇಕು; ರುಚಿ ಶುಚಿತನದಲ್ಲಡಗಬೇಕು ಎಂಬ ಗೂಢವಿದೆ. ಜ್ಞಾನೇಂದ್ರಿಯಗಳಲ್ಲಿ ದ್ವಿವಿಧ ವ್ಯವಹಾರವುಳ್ಳ ನಾಲಗೆಯ ದೆಸೆಯಿಂದ ಮಾನವನು ಅದೆಷ್ಟು ಬಡಿದಾಡುತ್ತಿರುವನೆಂಬುದನ್ನು ವರ್ಣಿಸಿ ತೀರದು. ದುರ್ವಿನಿಯೋಗದಿಂದ ಇದು ತನ್ನನ್ನು ಕಷ್ಟಕ್ಕೆ ಗುರಿಮಾಡುವುದಲ್ಲದೆ ಅನ್ಯರನ್ನು ಸಹ ತೊಂದರೆಗೀಡುಮಾಡುವುದು. ಅದೇ ಸದ್ವಿನಿಯೋಗಕ್ಕೆ ತೊಡಕಿಸಿದ ಈ ನಾಲಗೆಯು ಸ್ವಪರ ಶ್ರೇಯಸ್ಸಾಧನೆಗೆ ಕಾರಣೀಭೂತವಾಗುವುದು.

ಮಾತಿನೊಳಗಣ ಮಾತು ಜ್ಞಾನಿಯ ಮಾತೆ ಮಾಣಿಕವೆನಿಪುದು।
ಮಾತ ಪರರೊಳ್ ಬಿಚ್ಚುವಜ್ಞರ ಮಾತು ತೂತೆಂದೆನಿಪುದು॥
ಮಾತು ಹೃದಯಗೊಳಡಗಲಾತ್ಮ ಜ್ಯೋತಿ ತನ್ನೊಳು ಪೊಳೆವುದು॥
ಮಾತ ಗುರು ಮುಖದಿಂದ ತಿಳಿಯೆ ಖ್ಯಾತಿ ಮುಕ್ತಿಯು ಲಭಿಪುದು॥ ೧

ಆದರೆ ನಾಲಗೆಯೊಂದನ್ನು ಸ್ವಾಧೀನಪಲ್ಲಿಟ್ಟುಕೊಂಡ ಮಾತ್ರದಿಂದ ತೀರಲಿಲ್ಲ. ಇನ್ನುಳಿದ ನಾಲ್ಕು ಇಂದ್ರಿಯಗಳು ಬೇಡವೆಂದರೂ ವಿಷಯಗಳಿಂದ ಎಡೆಬಿಡದೆ ತೃಪ್ತಿಗೊಳ್ಳುತ್ತಲೆ ಇರುವವು. ಮತ್ತು ಇಂದ್ರಿಯಗಳ ಒಡನಾಡದಿಂದ ವಿಷಯಗಳಿಗೂ ಸೂತಕವು ತೊಡಗುತ್ತಲೇ ಇರುವುದು. ಹೀಗೆ ಇಂದ್ರಿಯಂಗಳಿಂದ ವಿಷಯಗಳೂ, ವಿಷಯಂಗಳಿಂದ ಇಂದ್ರಿಯಗಳೂ ಪರಸ್ಪರ ದೂಷಿತವಾಗುತ್ತಲೇ ಇರುವವು ಎಂಬದನ್ನು ಅಲ್ಲಮಪ್ರಭುದೇವರು ಬಹು ಸರಸವಾಗಿ ಬಣ್ಣಿಸಿರುವರು.

ಶಬ್ದವೆಂಬೆನೆ? ಶ್ರೋತ್ರದೆಂಜಲು. ಸ್ಪರ್ಶವೆಂಬೆನೆ? ತ್ವಕ್ಕಿನೆಂಜಲು.
ರೂಪೆಂಬೆನೆ? ನೇತ್ರದೆಂಜಲು. ರುಚಿಯೆಂಬೆನೆ? ಜಿಹ್ವೆಯೆಂಜಲು.
ಪರಿಮಳವೆಂಬೆನೆ? ಘ್ರಾಣದೆಂಜಲು. ನಾನೆಂಬೆನೆ? ಅರಿವಿನೆಂಜಲು.
ಎಂಜಲೆಂಬ ಬಿನ್ನವಳಿದ ಬೆಳಗಿನೊಗಣ ಬೆಳಗು ಗುಹೇಶ್ವರ ಲಿಂಗವು.೨

ಬಹ್ಮಚಿಂತನೆಗೆಯ್ಯುವವರು ದೋಷದ ಸೆರಗು ತಾಕದಂತೆ ಇಂದ್ರಿಯ ಭೋಗವನ್ನೆಲ್ಲ ಲಿಂಗಭೋಗೋಪಭೋಗಗೊಳಿಸಿದಾಗ ಬ್ರಹ್ಮಸಾಧನೆಯಾಗುವುದು ಎಂಬುದನ್ನರಿತಿರಬೇಕು.

---

೧ ಕೈವಲ್ಯನವನೀತ ೩-೮,
೨ ಪ್ರ. ವ. ೨೫೪ ಪುಟ ೨೬೮.

ಇದರಂತೆ ಅಸದ್ವರ್ತನೆಗೆ ಕೈದುಡುಕುವದಕ್ಕಿಂತ ಸ್ವಪರ ಹಿತ ಸಾಧನೆಗೆ ಕೈನೀಡಬೇಕೆಂದು ಸಾಮಾನ್ಯರಿಗೂ ತಿಳಿಯುವ ಮಾತು. ಮಾಡುವ ಕಾರ್ಯಗಳ ಕರ್ಮ ಫಲವು ಒಲ್ಲೆನೆಂದರೂ ಬಿಡದು. ಒಳಿತಾಗಲಿ ಹೀನವಾಗಲಿ ಬಂದುದನ್ನು ಭೋಗಿಸಿಯೇ ತೀರಬೇಕು. ಅದನ್ನು ತನಗಾಗಿ ಅನ್ಯರು ಭೋಗಿಸಲಿ ಎಂದು ಹೇಳಿದರೆ ಆಗದು. ತನಗೆ ಹಿತವಾಗಲಿ ಎಂಬ ಉದ್ದೇಶದಿಂದಲೇ ನೀತಿ ವಚನವು ಕಳವು ಹಿಂಸೆ ಕೊಲೆಗಳನ್ನು ಮಾಡಬೇಡ ಹಸ್ತದಿಂದ ಎಂದು ಬೋಧಿಸುತ್ತದೆ. ಹಿತಾಹಿತಗಳ ಕಡೆಗೆ ಲಕ್ಷವಿಡದೆ ಕರ್ತನ ಕೈಗಲ್ಲಾಗಿ ಕಾರ್ಯಗೈಯ್ಯುತ್ತಿರುವುದಾದರೆ ಕಾರ್ಯಫಲವು ತನ್ನ ಹೊದ್ದದು. ಕರ್ತನಲ್ಲಿಯ ಈ ಪೂಜ್ಯಭಾವದಿಂದ ಮಾಡಿದು ದೆಲ್ಲ ಪೂಜೆಯಲ್ಲಿ ಪರಿಣಾಮಗೊಳ್ಳುವುದು. ಹಿತಾಹಿತ ಫಲದ ಕಡೆಗೆ ದೃಷ್ಟಿಯಿಡದೆ ಪೂಜ್ಯಭಾವವನ್ನುಂಟುಮಾಡಿಕೊಳ್ಳುವುದಕ್ಕೋಸುಗ ಪೂಜಾದಿ ಕಾರ್ಯಗಳು ಬಳಕೆ ಯಲ್ಲಿ ಬಂದಿರಲು ಸಾಕು. ಆದರೆ ಗುಡಿ-ಗುಂಡಾರ ಮಠ-ಮಾನ್ಯಗಳಲ್ಲಿಯ ಸ್ಥಾವರ ಪೂಜೆ, ಲಿಂಗವಂತರ ಅಂಗದ ಮೇಲಣ ಲಿಂಗಪೂಜೆ ಇವುಗಳಲ್ಲಿ ಫಲದ ದೃಷ್ಟಿ ಯಿಂದ ಅತ್ಯಂತ ನಿಕರವಾದ ಆಭ್ಯಂತರವಿರುತ್ತದೆ ಎಂಬುದನ್ನು ಲಕ್ಷಿಸಬೇಕು. ತೋರಿಕೆಗೆ ಸ್ಥಾವರವೆನಿಸಿದರು ಸಹ ಲಿಂಗದೇವನು ನಮ್ಮೀ ತೋರವಾದ ಒಡಲಿ ನಿಂದ ಎಂದೆಂದೂ ಅಗಲದಿರಲಿ ಎಂಬ ಗಾಢವಾದ ಅನುರಾಗದ ಅಬ್ಬರವು ಲಿಂಗ ವಂತರಲ್ಲಿ ಅಂಗವಿಸಿದುದರಿಂದ ಅಲ್ಲಿ ಸ್ಥಾವರದ ಕಲ್ಪನೆಗೆ ಅವಕಾಶವಿಲ್ಲ. ಅಲ್ಲದೆ ಪಾತಿವ್ರತ್ಯದ ದೃಷ್ಟಿಯಿಂದಲೂ ಅಂಗದ ಮೇಲಣ ಲಿಂಗಕ್ಕೆ ಆಧಿಕ್ಯತೆಯುಂಟು. ಇಂಥ ಲಿಂಗಕ್ಕೆ ಅಂಗೈಯೇ ಪೀಠವು. ಪೀಠವಾಗುವಷ್ಟು ಪವಿತ್ರತೆಯು ಕೈಯಿಂದ ಮಾಡುವ ಕ್ರಿಯೆಗಳಿಂದುಂಟಾಗಬೇಕು. 'ಲಿಂಗವ ಮುಟ್ಟಿದ ಕೈ ಮಿಸಲು' ಎಂದು ಹೇಳುವ ಮಾತಿನ ರಹಸ್ಯವಾದರೂ ಹಸ್ತಶುದ್ಧಿಯನ್ನೇ ವ್ಯಕ್ತಗೊಳಿಸುವುದು.

ಅರುಹಿನಾಚರಣೆಯು ಕುರುಹಿನಂಗವ ವಾಮ
ಕರ ಸಿಂಹಾಸನ ದಿಷ್ಟಲಿಂಗದಂಘ್ರಿಗಳೆನ್ನ ಸಲಹಲಿ ತಾನೆ! ೩

ಎಂಬ ಮೈಲಾರ ಬಸವಲಿಂಗ ಶರಣರ ವಾಣಿಯಲ್ಲಿ ಅರುಹುವಿಡಿದು —ತಾನು ಕರ್ತನ ಉಪಕರಣವೆಂಬ ಅರುಹುವಿಡಿದು —ಕ್ರಿಯೆಗಳನ್ನೆಸಗಬೇಕು, ಅಂದರೆ ಇಷ್ಟ ಲಿಂಗಕ್ಕೆ ಕರವೇ ಸಿಂಹಾಸನವಾಗುವುದು ಎಂಬ ಉಪದೇಶವಿದೆ.

ಜ್ಞಾನೇಂದ್ರಿಯಗಳಲ್ಲಿ ರಸನೆಗೆ ಇತ್ತೆರನಾದ ಕಾರ್ಯಧರ್ಮವಿರುವಂತೆ ಕರ್ಮೇಂದ್ರಿ ಯಗಳಲ್ಲಿ ಜನನೇಂದ್ರಿಯಕ್ಕೆ ಸಹ ಇತ್ತೆರನಾದ ಕಾರ್ಯಧರ್ಮ ವಿರುವುದು. ಇವುಗಳಲ್ಲಿ ಒಂದು ಸೃಷ್ಟಿಯ ಧರ್ಮವು; ಇನ್ನೊಂದು ಮನಸ್ಸಿನ ಧರ್ಮವು. ಮನಸ್ಸಿನ ಧರ್ಮವನ್ನು ತಡೆಯುವದು ಸಾಧ್ಯವಿದ್ದಂತೆ ಸೃಷ್ಟಿಯ ಧರ್ಮವನ್ನು ತಡೆಯುವದು ಸಾಧ್ಯವಿಲ್ಲ. ಮೌನಿಗಳಿಗೆ ಮಾತನಾಡುವದನ್ನುಳಿದು ನಾಲಗೆಯ ಒಂದೇ ಕಾರ್ಯ ವನ್ನು ಸಾಗಿಸಲು ಶಕ್ಯವಿರುವಂತೆ ಹೆದ್ದಾರಿಯನ್ನು ತುಳಿದ ಬ್ರಹ್ಮಚಾರಿಗಳಿಗೆ

೩ ಶಿವಾನುಭವದರ್ಪಣ ೧೬.

(ಬೃಹತೀ ಚರ್ಯಾ ಯಸ್ಯ ಸಃ) ಮನಸ್ಸಿನ ಧರ್ಮವನ್ನು ತಡೆದು ಸೃಷ್ಟಿಯ ಧರ್ಮ ವೊಂದನ್ನೇ ಪಾಲಿಸಲು ಸಾಮರ್ಥ್ಯವಿದೆ. ಸರ್ವಜ್ಞನು ಹೇಳಿದಂತೆ

ಇಂದ್ರಿಯವು ಮೂತ್ರವುಂ। ಒಂದೆ ನಾಳದಿ ಬಕ್ಕು।
ಒಂದ ಬಿಟ್ಟೊಂದ ತಡೆದರೆ ಪರಬೊಮ್ಮ। ವಂದು ತಾನಕ್ಕು....೪

ಆದರೆ ಜೀವನದ ಬಹು ಭಾಗವೆಲ್ಲ ರಸನೆಯ ತೃಪ್ತಿಗಾಗಿ ಹೋರಾಟಗೊಳ್ಳುತ್ತಿರು ವಂತೆ ಇತ್ತೀಚನಾದ ಕಾರ್ಯಪ್ರವೃತ್ತಿಯುಳ್ಳ ಈ ಜನನೇಂದ್ರಿಯದ ತೃಪ್ತಿಗಾಗಿ ಸಹ ಜೀವನದ ಹೋರಾಟವು ಹುಂಕೊಳ್ಳುತ್ತಿರುವುದು ಮಾನವನ ಸ್ವಾನುಭವಕ್ಕೆ ನಿಲು ಕಿದ ಸಂಗತಿಯು. ಬಾಳಬೇಕು, ರಸನೇಂದ್ರಿಯ ಜನನೇಂದ್ರಿಯಗಳಿಂದ ಬಹಳ ಭೋಗವ ಕೊಳ್ಳಬೇಕು ಎಂಬ ಮಾನವನ ಈ ತಿಳಿಯು ಅವನ ಸಂಕುಚಿತ ದೃಷ್ಟಿಗೆ ಸೇರಿದುದು. ರಸನೇಂದ್ರಿಯದ ಸದ್ವಿನಿಯೋಗದಿಂದ ಆತ್ಮಜ್ಯೋತಿಯು ತನ್ನೊಳು ಪ್ರೊಳೆವಂತೆ ಜನನೇಂದ್ರಿಯದ ಸರಿಯಾದ ಬಳಕೆಯಿಂದ ಪರಂಜ್ಯೋತಿಯು ಸಹ ತನ್ನೊಳು ಬೆಳಗುವುದು. ಹೀಗೆ ಪರಂಜ್ಯೋತಿಯು ಬೆಳಗುವಂತೆ ಯತ್ನಿಸುವದು ಸಾಮಾನ್ಯರಿಗೆ ಶಕ್ಯವಿಲ್ಲವೆಂಬುದು ನಿಜ. ಯಾಕೆಂದರೆ ಇದೊಂದು ಬಹಳ ಭೀಕರ ವಾದ ಹೆದ್ದಾರಿ. ಈ ಪೆರ್ಬಟ್ಟೆಯಲ್ಲಿ ಗಮಿಸುವುದು ಎದೆಗಾರರಿಗೆ ಮಾತ್ರ ಶಕ್ಯ ವಾದುದು.

....ಅಘಟಿತ ಘಟಿತರು ವಿಪರೀತ ಚರಿತ್ರರು
ಕೂಡಲ ಸಂಗನ ಶರಣರು ಹೋದ ದಾರಿ ಭಯಂಕಾಣಿರಣ್ಣಾ.೫

ಈ ಮಾತುಗಳನ್ನು ಬಸವಣ್ಣನವರು ಅರ್ಥವಿಲ್ಲದೆ ಹೇಳಿಲ್ಲ.

ನೀತಿ ಪಾಠವನ್ನು ಕಲಿಸಲು ಅನೇಕರು ಅನೇಕ ತೆರನಾಗಿ ಹಾಡಿಕೊಂಡಿರು ವರು. ಅವರ ಮಾತುಗಳೆಲ್ಲ ಇಂದ್ರಿಯಗಳಿಗೆ ಶಿಕ್ಷಣವನ್ನು ಕೊಡುವದಕ್ಕಾಗಿಯೇ ಇರುತ್ತವೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯ ಬೇಡ,
ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲ
ಸಂಗನನೊಲಿಸುವ ಪರಿ.೬

ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಚೆಗೆ, ಒಲ್ಲೆನಯ್ಯಾ ಪರಸತಿ
ಯರ ಸಂಗವ, ಬಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ. ಬಳ್ಳದ ಬಾಯಂತೆ
ಒಂದೇ ಮನವ ಮಾಡಿ ನಿಲ್ಲೆಂದು ನಿಲಿಸಯ್ಯಾ ಕೂಡಲ ಸಂಗಮದೇವಾ.೭

ಅಡಗ ತಿಂಬರು ಕಣಕದ ಅಡಿಗೆ ಇರಲ್ಕೆ, ಸುರೆಯ ಕುಡಿವರು ಹಾಲಿರಲ್ಕೆ, ಮುಕ್ಕು
ವರು ಭಂಗಿಯ ಸಕ್ಕರೆ ಇರಲ್ಕೆ, ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗೆ ಅಳುಪುವರು.
ಸತ್ತ ನಾಯ ಭಕ್ಷಿಸುವ ಹಡಕಿಗರನೇನೆಂಬೆನಯ್ಯಾ ರಾಮನಾಥಾ.೮

೪ ಸ. ವ. ೪೬೭. ೫ ಬ. ವ. ೩೪ ಪು. ೨೨. ೬ ಬ. ವ. ೧೨೧ ಪು. ೩೫
೭ ಬ. ವ. ೧ ಪು. ೧೧೪ ೮ ವ. ಶಾ. ಸಾ. ವ. ೨ ಪು. ೧೪೭

ತಪವೆತ್ತ ? ಹೆರರ ಕೇಡಿಂಗೆ ಬಗೆವುದೆತ್ತ ? ಜಪವೆತ್ತ ಶರಣರಮೇಲೆ ಅನೃತವ ನುಡಿವುದೆತ್ತ ? ಪಂಚಾಚಾರವೆತ್ತ ? ಪಾತಕಕ್ಕೆ ಮನ ಬಗೆವುದೆತ್ತ ? ಇಂತೀ ಹೊರ ಬಳಕೆಯ ಲೋಕರಂಜನೆಯಲ್ಲಿಪ್ಪವರಿಗೆ ನಾನಂಜುವೆ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನೀನು ಅಂಜಿ ದೂರದಲ್ಲಿ ಓಡುವೆ.೯

ಆಶೆಯಿಂದ ಬಿಟ್ಟು ಕಿರಿಯರಿಲ್ಲ, ನಿರಾಶೆಯಿಂದ ಬಿಟ್ಟು ಹಿರಿಯರಿಲ್ಲ, ದಯೆಯಿಂದ ಬಿಟ್ಟು ಧರ್ಮವಿಲ್ಲ, ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ, ಸಧ್ಭಾಚಾರಕ್ಕೆ ಸಕಳೇಶ್ವರ ದೇವರಿಂದ ಬಿಟ್ಟು ದೇವರಿಲ್ಲ.೧೦

ಶಿವನೇ ದೈವ, ಕೊಲ್ಲದಿಪ್ಪುದೇ ಧರ್ಮ, ಅಧರ್ಮದಿಂದ ಬಂದುದನೊಲ್ಲದಿಪ್ಪುದೇ ನೇಮ, ಆಶೆ ಇಲ್ಲದಿಪ್ಪುದೆ ತಪ, ರೋಷವಿಲ್ಲದಿಪ್ಪುದೇ ಜಪ, ವಂಚನೆ ಇಲ್ಲದಿಪ್ಪದೇ ಭಕ್ತಿ, ಹೆಚ್ಚುಕುಂದಿಲ್ಲದಿಪ್ಪುದೇ ಸಮಯಾಚಾರ, ಇದು ಸತ್ಯ, ಶಿವಬಲ್ಲ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ. ೧೧

ಶಮೆ ದಮೆ ವಿವೇಕ ವೈರಾಗ್ಯ ಪರಿಪೂರ್ಣ ಭಾವ ಶಾಂತಿ ಕಾರುಣ್ಯ ಶ್ರದ್ಧೆ ಸತ್ಯ ಸದ್ಭಕ್ತಿ ಶಿವಜ್ಞಾನ ಶಿವಾನಂದ ಉದಯವಾದ ಮಹಾ ಭಕ್ತನ ಹೃದಯದಲ್ಲಿ ಶಿವನಿಪ್ಪ. ಆತನ ದರ್ಶನ ಸ್ಪರ್ಶನ ಸಂಭಾಷಣೆಯಿಂದ ಕೇವಲ ಮುಕ್ತಿಯಪ್ಪುದು ತಪ್ಪದಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.೧೨

ಪರದೈವಕೆ ಪರವನಿತೆಗೆ
ಪರಹಿಂಸೆಗೆ ಪರಧನಕ್ಕೆ ಪರನಿಂದೆಗೆ ನಾಂ
ಪರರ ತುತಿಗೈಯ್ಯ ದೈನ್ಯ
ಕ್ಕೆರವಣಿಸದ ತೆರನ ಮಾಡು ಪರಮ ಪ್ರಭುವೆ ?

ಕಚ್ಚೆ ಕೈ ಬಾಯ್ಗಳು ಇಚ್ಚೆಯಲಿ ಇದ್ದಿಹರೆ ।
ಅಚ್ಚುತನು ಅಪ್ಪ—ಅಜನಪ್ಪ ಲೋಕದಲಿ । ನಿಶ್ಚಿಂತನಪ್ಪ ಸರ್ವಜ್ಞ ॥೧೩

ಪಾಣಿ ವಾಣಿ ಮಾಣಿ ಮೂರ ಕಟ್ಟಿದವರು ಶ್ರೇಷ್ಠರಹರು
ಪಾಣಿ ವಾಣಿ ಮಾಣಿ ಮೂರ ಬಿಚ್ಚಿದವರು ಭ್ರಷ್ಟರಹರು॥ ೧೪

ಇವೇ ಮೊದಲಾದ ವಚನಗಳಲ್ಲಿ ಇಂದ್ರಿಯಗಳ ಕಾವಳವನ್ನು ಕಳೆದು ಅವುಗಳನ್ನು ಪವಿತ್ರಗೊಳಿಸುವ ರೀತಿಯು ಹುದುಗಿದೆ. ಆದುದರಿಂದಲೇ ಸಾಧಕರ ಧರ್ಮಕ್ಕೆ ನೀತಿಯೇ ನೆಲೆಗಟ್ಟಾಗಿದೆ. ನೀತಿಯ ನಡೆಯಿಂದ ಶುದ್ಧವಾದ ಇಂದ್ರಿಯಗಳಿಂದ ವ್ಯವಹರಿಸಿದುದೆಲ್ಲ ಸತ್ಕ್ರಿಯೆಯೆನಿಸಿಹುದು. ಕಾಯದಲ್ಲಿ ಕರ್ತೃತ್ವಶಕ್ತಿಯುಂಟಾಗುವುದು ಈ ನೀತಿಯ ನಡೆಯಿಂದಲೇ. ಇಂತಪ್ಪ ಕರ್ತೃತ್ವ ಶಕ್ತಿಯ ಸಂಪಾದಕನಲ್ಲಿ ಗುರುತ್ವವು ಶಕ್ತಿಯ ಕೆರಗತಿಗನುಗುಣವಾಗಿ ಒಡೆದು ಕಾಣುವುದು. ನೀತಿ ಬದ್ಧವಾದ ನಡೆಯು ಇಷ್ಟಮಯವಾದುದು; ಅದು ಅನಿಷ್ಟವನ್ನು ನಿವಾರಿಸುವುದರಿಂದ ಇಷ್ಟಲಿಂಗವೆನಿಸಿಹುದು. ಸತ್ಕ್ರಿಯೆಗೆ ಶಿವಶರಣರ ಪಾರಿಭಾಷಿಕ

---

೯ ವ. ಶಾ. ಸಾ. ವ. ೧೧ ಪು. ೧೮೩; ೧೦ ವ. ಶಾ. ಸಾ. ವ. ೧೨ ಪು ೧೮೩
೧೧ ವ. ಶಾ. ಸಾ. ವ. ೯ ಪು. ೧೮೩. ೧೨ ವ. ಶಾ. ಸಾ. ವ. ೬೫ ಪು. ೧೯೪.
೧೩ ಸ. ವ. ೨೫೭. ೧೪ ಕೈವಲ್ಯ ನವನೀತ ೨-೫.

ಶಬ್ದದಲ್ಲಿ ಮಾಟವೆಂದು ಹೆಸರು. ಮಾಟದ ಬಲದಿಂದ ಕಿವಿಯಲ್ಲಿ ನಾದವು ಕೇಳಿಬರುವುದು. ತೆರಹಿಲ್ಲದ ನಾದಾನುಸಂಧಾನಕ್ಕೆ ಬರಿಯ ಪ್ರಾಣಾಯಾಮವಷ್ಟೇ ಮುಖ್ಯವಲ್ಲ; ಈ ಮಾಟವೂ ಮುಖ್ಯವಾಗಿರುವುದು.

ರೂಪವ ಬಯಲಗೊಳಿಸುವದು ಜ್ಞಾನ ಮಾರ್ಗದ ಲಕ್ಷಣವು. 'ನೇತಿ' ಮಂತ್ರವೇ ಇದಕ್ಕೆ ಲಕ್ಷ್ಯವಾಗಿಹುದು. ಬಯಲ ರೂಪುಗೊಳಿಸುವದು ಶಕ್ತಿ (ಕ್ರಿಯಾ) ಮಾರ್ಗದ ಲಕ್ಷಣವು. ಇದಕ್ಕೆ 'ಇತಿ' ಮಂತ್ರವು ಲಕ್ಷ್ಯವಾಗಿಹುದು. ವೀರಶೈವರು ಜ್ಞಾನ ಮತ್ತು ಕ್ರಿಯೆ ಇವುಗಳನ್ನು ಬೆರಸಿ ಯೋಗಮಾರ್ಗವನ್ನು ಕಂಡರು. ಬಹಿರ್ಮುಖ ಪ್ರವೃತ್ತಿಯುಳ್ಳವರು ರಸನೇಂದ್ರಿಯ ಜನನೇಂದ್ರಿಯಗಳ ಬಿಗುವಿನಿಂದ ಕರ್ತೃತ್ವಶಕ್ತಿಯ ಹೊಂದುವಂತೆ ಅಂತರ್ಮುಖಿಗಳಾದ ವೀರಶೈವ ಶಿವಯೋಗಿಗಳು ಸಹ 'ನ'ಕಾರ 'ಸ'ಕಾರ ಮಂತ್ರಾನುಸಂಧಾನದಿಂದ ಕರ್ತೃತ್ವ ಶಕ್ತಿಯ ಪಡೆವರು. ಶಿವಶರಣರಲ್ಲಿ ಕೆಲವರ ವಚನಗಳಲ್ಲಿ ನೀತಿಯ ಆಧಿಕ್ಯತೆ ಇರುವದಕ್ಕೂ ಇನ್ನು ಕೆಲವರ ವಚನಗಳಲ್ಲಿ ಯೋಗ ದೃಷ್ಟಿಯ ಪಡಿನೆಳಲಿರುವುದಕ್ಕೂ ಅವರವರ ಬಹಿರ್ಮುಖ ಅಂತರ್ಮುಖ ಪ್ರವೃತ್ತಿಗಳೇ ಕಾರಣವು. ಅವರು ಪಡೆದುಕೊಂಡಿದ್ದ ಕರ್ತೃತ್ವ ಶಕ್ತಿಯ ದೆಸೆಯಿಂದ ಇಬ್ಬರ ಸ್ಥಾನಮಾನವು ಸಹ ಒಂದೇ ತರಹದ್ದಾಗಿದೆ.

ಜ್ಞಾನಿಗಳ ನುಡಿಗಡಣದಲ್ಲಿ ಜ್ಯೋತಿ ಇರುತ್ತದಷ್ಟೇ! ಅದರಂತೆ ಯೋಗಿಗಳ ಮನದೊಳಗೂ ಈ ಜ್ಯೋತಿಯು ಅಡಗಿಹುದು. ಅನುಸಂಧಾನವು ಬಲಿತ ಯೋಗಿಯಲ್ಲಿ ಇದು ಕಣ್ಣುಗಳ ದ್ವಾರಾ ಹೊರಹೊಮ್ಮಿ ತೋರುವುದು. ಯೋಗಿಯು ತನ್ನ ಪ್ರಾಣವ್ಯಾಪಾರವನ್ನೆಲ್ಲ ಸುಸ್ಥಿರಗೊಳಿಸಿ ಅದು ಲಿಂಗದ ಕಿರಣವಾಗುವಂತೆ ಮಾಡಿಕೊಂಡಿರುವುದರಿಂದ ಅವನು ಪ್ರಾಣಲಿಂಗಿಯು. ಅಷ್ಟೇಕೆ ಅವನ ಪ್ರಾಣವೇ ಲಿಂಗವೆನಿಸಿಹುದು. ಶಿವಶರಣರು ಪ್ರಾಣಲಿಂಗದ ಈ ಪ್ರಕಾಶವನ್ನು ಕುರಿತು 'ಬಚ್ಚಬರಿಯ ಬೆಳಕು' ಎಂದು ವರ್ಣಿಸಿರುವರು. ಯೋಗಸಾಧನೆಯ ಕ್ರಮದಲ್ಲಿ ಯೋಗಿಯು ಪಡೆವ ಈ ತೇಜವನ್ನು—ಈ ತಾರಕ ತೇಜವನ್ನು ಯೋಗಿಗಳು

ಎಳೆ ಮುತ್ತಿನಂತೆ ದೀಪದುರಿಯಂತೆ
ಸೆಳೆಮಿಂಚಿನಂತೆ ರತ್ನದಂತೆ
ಹೊಳಪ ವಿದ್ರುಮದ ಬಳ್ಳಿಯಂತೆ
ಥಳಥಳಿಪ ಶಶಿಸೂರ್ಯರ ಕೋಟಿಯಂತೆ
ಒಳಗಿರ್ಪ ಪ್ರಾಣಲಿಂಗವದು ತಾನೆ
ಪಳುಕುಗೊಡದೊಳದೀಪದ ತೆರದಿ
ಹೊಳೆವ ನೇತ್ರದ್ವಾರದಿಂದ ಹೊರಹೊಮ್ಮಿ
ಬೆಳಗಿ ಗುರು ಸಿದ್ಧ ತಾನೆಯಾಗಿ ೧೫

೧೫ ಕೈವಲ್ಯಕಲ್ಪವಲ್ಲರಿ ೪-೧೭

ಎಂದು ಬಗೆಬಗೆಯಾಗಿ ಬಣ್ಣಿಸಿರುವರು. ಇಂಥ ಪರಂಜ್ಯೋತಿಯಲ್ಲಿ ಲಕ್ಷವಿಟ್ಟು ತಲ್ಲೀನಗೊಳ್ಳುವದೇ ಪ್ರಾಣಲಿಂಗಾನುಸಂಧಾನವು. ಈ ಅವಸ್ಥೆಯಲ್ಲಿ ಯೋಗಿಗೆ ದೂರದೃಷ್ಟಿ ದೂರ ಶ್ರವಣಗಳು ದೊರೆಕೊಳ್ಳುವವು. ಅವನು ಅನೇಕ ತರದ ದೃಶ್ಯಗಳನ್ನೂ ಧ್ವನಿಗಳನ್ನೂ ಅನುಭವಿಸುವನು. ಇವುಗಳಲ್ಲಿ ಮನವಿರಿಸಿ ಇವೇ ಘನವೆಂದು ಇವುಗಳಲ್ಲಿಯೇ ಲೋಲನಾಗ ಬಯಸಿದರೆ ಯೋಗಿಯ ಆತ್ಯಂತಿಕ ಧ್ಯೇಯವು ಕೊನೆಗಂಡಂತಾಗಲಿಲ್ಲ. ಪ್ರಗತಿಪರದೃಷ್ಟಿಯ ಯೋಗಿಗೆ ಹೀಗೆ ತಿಳಿಯುಂಟಾಗುವುದು ಒಂದು ತರಹದ ತಮಸ್ಸೇ ಸರಿ. ಈ ಮಬ್ಬು ಹರಿದಲ್ಲದೆ ಮುಂದಿನ ಮೆಟ್ಟು ತಿಳಿಯದು. 'ಬೆಳಗನುಟ್ಟು ಬಯಲಾಗಬೇಕು' ಎಂದು ಬಸವಣ್ಣನವರು ಹೇಳುವ ಮಾತಿನಲ್ಲಿ ಪ್ರಾಣಲಿಂಗಾನುಸಂಧಾನಿಯಾದರೆ ತೀರಲಿಲ್ಲ; ಆ ಅವಸ್ಥೆಯಲ್ಲಿಯೂ ಸಹ ಯೋಗಿಗೆ ಆವರಿಸುವ ಕಾವಳವನ್ನು ಪರಿಹರಿಸಬೇಕು; ತನಗೆ ಅಂಥ ಸಿದ್ಧಿಯು ದೊರಕಿದೆ ಎಂಬ ಅರಿವೂ ನಷ್ಟವಾಗಬೇಕು ಎಂಬ ಭಾವವಿದೆ. ಪಾತಂಜಲರು ಯೋಗಿಯ ನಾಲ್ಕು ಅವಸ್ಥೆಗಳಲ್ಲಿ ಇದಕ್ಕೆ 'ಮಧುಮತಿ'ಎಂದು ಕರೆಯುತ್ತಾರೆ. ಭೃಂಗಕ್ಕೆ ಪರಿಮಳದಲ್ಲಿ, ಮದಿರಾಸಕ್ತನಿಗೆ ಮದ್ಯದಲ್ಲಿ ಆವ ಆನಂದವೋ ಅಂಥ ಆನಂದವು ಯೋಗಿಯ ಅನುಭವಕ್ಕೆ ನಿಲುಕಿದರೂ ಅದರಲ್ಲಿಯೇ ಉಳಿದುದಾದರೆ ಭೃಂಗದ ಇಲ್ಲವೆ ಮದಿರಾಸಕ್ತನ ಅಂತಿಮ ಅವಸ್ಥೆಯು ಯೋಗಿಗಾದರೂ ಒದಗಬಹುದೆಂಬುದನ್ನು ಸೂಚಿಸಿ ಅವನು 'ಅತಿ ಕ್ರಾಂತಭಾವನೀಯ'ನಾಗಬೇಕೆಂದು ಪಾತಂಜಲರು ತಿಳಿಸಿರುವರು. ಭಾವನಾಸಾಮ್ರಾಜ್ಯದರಿವು ನಷ್ಟವಾಗಿ ಅವನು ಅದನ್ನು ಮೀರಿದವನಾಗಬೇಕೆನ್ನುವದೇ ಪಾತಂಜಲರು ಹೇಳುವ ಈ ಕೊನೆಯ ಅವಸ್ಥೆಯ ಉದ್ದೇಶವು. ಇದರಿಂದ ನೀತಿಯಿಂದ ನಡೆದು ಜ್ಯೋತಿಯನ್ನು ಪಡೆದರೂ, ಅನುಭವ ಜ್ಯೋತಿಗೆ ನೀತಿಯನ್ನು ಜೋಡಿಸಿದರೂ ತೀರಲಿಲ್ಲ; ನೀತಿ-ಜ್ಯೋತಿಗಳ ಅನುಭವದ ಆಚೆಗಿನ ಅನುಭವವೊಂದಿದೆ; ಅದನ್ನು ಹೊಂದುವುದೇ ಪ್ರಗತಿಪರದೃಷ್ಟಿಯ ಯೋಗಿಯ ಗುರಿಯಾಗಬೇಕು ಎಂದು ಸ್ಪಷ್ಟವಾದುದು. ಹಾಗಾದರೆ ಆ ಅನುಭವವು ಆವುದು? ಅದನ್ನು ಪಡೆಯುವ ಬಗೆಯು ಆವುದು?

ಶಿವಯೋಗಿಯ ಅನುಭವದೊಳಗೆ ವಿಶ್ವವೆಲ್ಲ ಉಸಿರಿನಂತೆ. ಉಸಿರಿನಷ್ಟು ಸಹಜವಾಗಿ ಅವನದನ್ನು ಅಲ್ಲಗಳೆದೂ ಬಿಡುವನು. ಆದರೆ ಪ್ರಾಣಲಿಂಗದ ಪ್ರಕಾಶದಲ್ಲಿ, ಬಚ್ಚಬರಿಯ ಬೆಳಕಿನಲ್ಲಿ, ಇಲ್ಲವೆ 'ಮಧುಮತಿ'ಯ ಅವಸ್ಥೆಯಲ್ಲಿ ದೊರೆಯುವ ಆನಂದವನ್ನು ಹೆಚ್ಚಿನ ಅನುಭವಕ್ಕಾಗಿ ಮರೆತು ಬಿಡುವ ಮತಿಯಿಲ್ಲದ ಯೋಗಿಯು ವಿಶ್ವದ ಒಡನಾಟದರಿವಿನಿಂದ ದೂರಾಗಿಹನೆಂದು ಹೇಳಲಿಕ್ಕೆ ಬಾರದು. ವಿಶ್ವದೊಡನಿಹ ತನ್ನ ಸಂಬಂಧದ ದೆಸೆಯಿಂದ ಅವನ ಅನುಭವವು ಅವನಿಗೆ ಕಾಲ್ತೊಡಕಿನಂತಿಹುದು. ಮುಂದಿನ ಅವಸ್ಥೆಯ ಅನುಭವವು ತಪ್ಪಿದರೂ ಈಗಿದ್ದುದು ಘನವೆಂದು ಬಗೆದರೂ ಅದು ತಮಸ್ಸಿನ ತರಗತಿಯಲ್ಲಿಯೇ ಬರುವುದು.

ತಮಸ್ಸು ಇರುವವರೆಗೆ ಭೀತಿಯು ತಪ್ಪುವುದಲ್ಲ. ಭೀತಿಯು ಮರಣದ ಮುಂಗುರುತು. ಪ್ರಗತಿಪರ ದೃಷ್ಟಿಯಿಲ್ಲದಿರೆ ಅದುವೆ ಮರಣವಲ್ಲವೇ ಯೋಗಿಯಾದವನಿಗೆ? ಆದುದರಿಂದ ಅವನಲ್ಲಿ ಈ ಭೀತಿಯು ಸಂಪೂರ್ಣವಾಗಿ ಅಳಿದಿರಬೇಕು. ಭೀತಿಯಳಿದ ಅಂಥ ನಿರ್ಭೀತನಿಗೆ ಮಾತ್ರ ವಿಶ್ವವು ಉಸಿರಿನಂತಾಗಿಹುದು.

I cannot die though for ever death
Weave back and fro in the warp of me.
I was never born yet my births of breath
Are as many as waves on the sleepless sea.

ಎಂದು ಹೇಳುವ ಶ್ರೀರಾಮತೀರ್ಥರ ವಚನಗಳು ನಿರ್ಭಯನಾದ ಯೋಗಿಗೇ ಒಪ್ಪುವವಾಗಿವೆ. ಭೀತಿಬೀಜವು ಉಳಿದರೆ ಭವವು ಹಿಂಗದೆಂದು ಶಿವಯೋಗಿಯ ದಿವ್ಯಾನುಭವಕ್ಕೆ ನಿಲುಕಿರುವುದು. ಆದುದರಿಂದಲೇ ಅವನದು ನಿರ್ಭೀತವೃತ್ತಿಯು. ಭೀತಿಗೆ ಆಶ್ರಯವಾದ ಭಾವವ ಸುಟ್ಟು ನಿರ್ಭಾವಗೊಳಿಸಿದರೆ ನಿರಂಜನ ತತ್ವವು ನಿಲುಕುವುದೆಂಬುದೂ ಅದುವೆ ಭಾವಲಿಂಗಾನುಸಂಧಾನವೆಂಬುದೂ ಸಹ ಅವನ ಅನುಭವಕ್ಕೆ ನಿಲುಕಿರುವುದು. ತಾನು ತನ್ನನು ಮರೆದು ಧ್ಯಾನಗಾನವಿ ಜೆರೆದ, ಭೀತಿಬೀಜವ ಹುರಿದು ಭವದ ಬೇರನು ಕೊರೆದ ಇಂಥ ಯೋಗಿಯು ಅಚ್ಚ ಶರಣನು. ಶಿವಯೋಗಿಯಲ್ಲಿ ಪ್ರಾಣಕ್ಕಾವರಿಸಿದ ರಜಸ್ಸು ಅಳಿದಿರುವದರಿಂದ ಅವನಲ್ಲಿ ಓಜಸ್ಸು ಎಡೆತಡೆಯಿಲ್ಲದೆ ಹೊರಹೊಮ್ಮುತ್ತಿರುವುದು. ಪ್ರಣವನಾದವು ಧ್ವನಿಗುಡುವುದು. ಆದುದರಿಂದಲೇ ಅವನು ಪ್ರಣವಸ್ವರೂಪಿಯು.

ಸತ್ತ, ಗಾಢನಿದ್ರೆ ಹತ್ತಿದ ಮತ್ತು ಶಿವಯೋಗ ಸಮಾಧಿಯನ್ನು ಹೊಂದಿದ ವ್ಯಕ್ತಿಗಳ ಅವಸ್ಥೆಯನ್ನು ಕುರಿತು ವಿಮರ್ಶಿಸಿದರೆ, ಸತ್ತವನಲ್ಲಿ ಪ್ರಾಣವ್ಯಾಪಾರವೇ ಇರುವದಿಲ್ಲ; ಗಾಢನಿದ್ರೆ ಹತ್ತಿದವನಲ್ಲಿ ಅದು ಇದ್ದರೂ ತಮೋವಿಶಿಷ್ಟವಾಗಿರುವ ಮೂಲಕ ತನ್ನರಿವು ತನಗಿಲ್ಲದಂತೆ ಅವನಲ್ಲಿ ಅದು ಇರುತ್ತದೆ; ಗಾಢನಿದ್ರೆಯಲ್ಲಿರುವಾಗಿನ ಅರಿವು ನಿದ್ರೆಯೋದವನಿಗಿರುವದಿಲ್ಲ. ಯೋಗಿಯು ಮಾತ್ರ ಯೋಗಸಮಾಧಿಯಿಂದ ಇಳಿದು ಹೊರಗೆ ಬಂದ ಕೂಡಲೆ ಆ ಕಾಲದಲ್ಲಿ ನಡೆದ ವೃತ್ತಾಂತದ ವರ್ಣನೆಯನ್ನು ಇದ್ದಕ್ಕಿದ್ದಂತೆ ಮಾಡಬಲ್ಲನು. ನಿದ್ರೆ ತಿಳಿದ ಬಳಿಕ ಗಾಢನಿದ್ರೆ ಹತ್ತಿದವನ ಇಂದ್ರಿಯ ಪ್ರಾಣಗಳು ಗರಿ ಮುಕ್ಕಾಗದ ತೆರದಲ್ಲಿ ಕಂಡುಬರುವವು. ಈ ವಿಶ್ವದಲ್ಲಿ ನಾವೀನ್ಯತೆಯಾದರೂ ಅವನಿಗೆ ತೋರದು. ಆದರೆ ಶಿವಯೋಗಿಯ ಅರಿವಿಗೆ ವಿಶ್ವವೆಲ್ಲ ಹೊಸದಾಗಿ ಕಾಣುವುದು. ಅವನು ಇಂದ್ರಿಯ ಪ್ರಾಣಗಳ ಒಡನಾಟದಿಂದ ಅರಿವುಗೊಳ್ಳುವ ಅವಸ್ಥೆಯನ್ನು ಮೀರಿದುದರಿಂದ ವಸ್ತುಜ್ಞಾನಕ್ಕೆ ಅವುಗಳ ಅವಶ್ಯಕತೆ ಅವನಿಗಿರುವದಿಲ್ಲ. ಆ ವಸ್ತುಗಳತ್ತ ಅವನ ಕರಿಗೊಂಡ ಅರಿವೇ ಗಮಿಸಿ ಅದನ್ನು ಯಥಾರ್ಥವಾಗಿ ವರ್ಣಿಸಬಲ್ಲುದು. ನಿರ್ಭೀತನಾಗಿ ಅವನು ಸಂಪಾದಿಸಿಕೊಂಡ ಆ ಅರಿವು ಅಷ್ಟು ಸ್ಫುಟವಾದುದು; ಸ್ಫುರಣಾತ್ಮಕವಾದುದು.

ಈ ಅರಿವಿಗೆ ಹಿಂದು-ಇಂದು-ಮುಂದುಗಳೆಂಬ ವಿಂಗಡಿಕೆಯಿಲ್ಲ. ಅದಕ್ಕೆ ಕಾಲದ ಕಲ್ಪನೆಯಿಲ್ಲ ಒಂದೇ ಬಗೆಯದಿರುವದು. ಶೆಲೆ ಮಹಾ ಕವಿಯು ಹೇಳುವಂತೆ,

We look before and after
And pine for what is not

ಹಿಂದಿನ ಮುಂದಿನ ಸಂಗತಿಗಳನ್ನು ಚಿಂತಿಸಿ ಇಂದು ಅವು ಇಲ್ಲದಿದ್ದರೆ ಕೊರಗುವ ಬಾಳುವೆಯು ಮಾನವಕೋಟಿಗೆ ಅದರ ಹುಟ್ಟಿನೊಂದಿಗೆ ಬಂದುದು. ಶಿವಯೋಗಿಯ ದೃಷ್ಟಿಗೆ ಹಿಂದು-ಮುಂದುಗಳ ಸಂದಳಿದು ಇಂದು ಒಂದೇ ಎದುರಾಗಿರುವುದು (All time is now) ದೇಹವೆ ನಾನೆಂಬ ಮೋಹಪಾಶಬದ್ಧರ ದೃಷ್ಟಿಯಲ್ಲಿ ಯೋಗಿಗಳ ಈ ತರಹದ ಅರಿವು ಅಳತೆಗೆ ನಿಲ್ಲದು. ಅದುದರಿಂದಲೇ ಯೋಗಿಗಳು ಅವರಿಗೆ ತ್ರಿಕಾಲ ಜ್ಞಾನಿಗಳಾಗಿ ತೋರುವರು. ಶಿವಯೋಗಿಯ ಹಿಂದು-ಇಂದು-ಮುಂದುಗಳ ಅರಿವು ಒಂದೇ ಆಗುವಷ್ಟು ತ್ವರಿತಗತಿಯುಳ್ಳುದರಿಂದ ಅದಕ್ಕೆ ಜಂಗಮವೆಂತಲೂ ಹೆಸರು. ಪರಿಪೂರ್ಣ ಜ್ಞಾನಿಯು ನಿರ್ಭೀತನು. ಇಂಥ ನಿರ್ಭೀತ ವೃತ್ತಿಯ ದೆಸೆಯಿಂದಲೆ ಅವನಲ್ಲಿ ಶಾಂತಿಕಳೆಯು-ಚಿತ್ತಪ್ರಭೆಯು-ಒಳಹೊರಗೂ ಜಾಜ್ವಲ್ಯಮಾನವಾಗಿ ಬೆಳಗುವುದು. ಇಂಥ ಕಳಾಸಂಪನ್ನನಾಗುವುದೇ, ಇಂಥ ಭಾವಲಿಂಗಸಮರಸಿಯಾಗುವುದೇ ಶಿವಯೋಗಿಯ—ಶಿವಶರಣನ ಯೋಗದ ಹೆಗ್ಗುರಿ.

ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ, ಇದಾವಂಗಳವಡುವುದಯ್ಯಾ... ನಿರಾಶೆ ನಿರ್ಭಯ... ನೀನೊಲಿದ ಶರಣಂಗಲ್ಲದಿಲ್ಲ. ೧೬.

ಎಂದು ಹಾಡಿದ ಬಸವಣ್ಣನ ವಚನದ ರಹಸ್ಯವು ಈಗ ಸ್ಪಷ್ಟವಾದುದು ಈ ನಿರಾಶೆ ನಿರ್ಭಯ ವೃತ್ತಿಯನ್ನು ಸಾಧಿಸುವದೇ ಶಿವಶರಣರ ಜೀವನದ ಗುಟ್ಟು, ಶಿವಪ್ರಪಂಚದ ಸಕೀಲ; ಅನುಸೂಯೆ ಅತ್ರಿಗಳ ತಾತ್ವಿಕ ನಿಲುವು. ನೀತಿಯಿಂದ ಜ್ಯೋತಿಯ ಪಡೆದು ಭೀತಿಯ ಕಳೆದು ಮೂರುತಿಗಳೆನಿಸಿದ ಆ ಶಿವಶರಣರ ಬಾಳುವೆಯ ಬೆಡಗು ಲೋಕಕ್ಕೆ ಇಷ್ಟವಾದುದು. ಆದುದರಿಂದ ಅವರು ಲೋಕಕ್ಕೆ ಇಷ್ಟಮೂರುತಿಗಳು.

★

# ಶಿವಶರಣರ ವಚನ ಮುದ್ರಿಕೆಗಳ ಇಂಗಿತವೇನು?

ಸಂಗ್ರಾಹಕರು: ವೀರಭದ್ರಪ್ಪ ಕೊಪ್ಪಳ, ಎಂ. ಎ., ಬಿ. ಟಿ., ಧಾರವಾಡ.

( ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು, ಬಿ. ಎ. ಅವರು ಹುಬ್ಬಳ್ಳಿಯಲ್ಲಿ ತಾ. ೨೫-೮-೧೯೪೩ನೆಯ ದಿವಸ ಮಾಡಿದ ವ್ಯಾಖ್ಯಾನದ ಸಾರಾಂಶವಿದು. )

ವಚನವಾಙ್ಮಯದ ವೈಭವವಿಸ್ತಾರವು ವೇದ್ಯವಾಗಹತ್ತಿದಂತೆ ಅದರಲ್ಲಿ ಕಾಣಲಾಗುವ ಸಾಹಿತ್ಯ, ಸಾಮಾಜಿಕ-ನೈತಿಕ-ಐತಿಹಾಸಿಕ ಹಿನ್ನೆಲೆ ಇವುಗಳಿಗಾಗಿ ಇತ್ತೀಚೆಗೆ ಅನೇಕ ವಿಧವಾದ ಅಭ್ಯಾಸವು ನಡೆಯಹತ್ತಿರುವುದಷ್ಟೆ! ಆದರೆ ಶಿವಶರಣರು ಮೂಲತಃ ಸ್ವಾನುಭಾವದೃಷ್ಟಿಯವರು; ಆದುದರಿಂದ ಅವರ ಅನುಭವದ ಅಮರವಾಣಿಯನ್ನು ಸ್ವಾನುಭಾವ ದೃಷ್ಟಿಯಿಂದಲೆ ಬಗೆಯುವದು ಹೆಚ್ಚು ಪ್ರಶಸ್ತ್ಯವಾದುದು ಮತ್ತು ಪ್ರಾಮುಖ್ಯವಾದುದು. ಹೀಗೆ ಸ್ವಾನುಭಾವದೃಷ್ಟಿಯಿಂದ ವಚನಶಾಸ್ತ್ರವನ್ನು ಅಭ್ಯಾಸಿಸುವಾಗ ಒಂದು ಸಂಗತಿಯು ಮಾತ್ರ ವಿಶೇಷವಾಗಿ ಒಡೆದು ತೋರುವುದು. ವಚನಗಳನ್ನು ಹಾಡಿದ ಶಿವಶರಣರು ವಚನಗಳ ಕೊನೆಗೆ ಮುದ್ರಿಕೆಗಳನ್ನಿಟ್ಟುಕೊಂಡಿರುವರಲ್ಲ— ಅವುಗಳ ಇಂಗಿತವೇನು? ಅವುಗಳಲ್ಲಿ ಅಡಕವಾಗಿರುವ ಅನುಭವದ ಬಗೆ ಯಾವುದು? ಆ ಅಂಕಿತಗಳು ಸ್ಥಾವರಲಿಂಗಪರವಾಗಿರುವವಲ್ಲವೆ? ಸ್ಥಾವರಲಿಂಗಭಕ್ತಿ ಪೂಜಾ ಅರ್ಚನೆಗಳನ್ನು ಕಟುವಾಗಿ ಖಂಡಿಸಿದ ಶಿವಶರಣರ ಅನುಭವಜೀವನಕ್ಕೆ ಇಂತಹ ಮುದ್ರಿಕೆಗಳನ್ನಿರಿಸಿಕೊಂಡುದು ಹೇಗೆ ಸಂಗತವಾಗುವುದು? ಶಿವಶರಣರು ತಮ್ಮ ಪೂರ್ವಾಶ್ರಯದಲ್ಲಿ ಸ್ಥಾವರಲಿಂಗಪೂಜಕರಾಗಿದ್ದರೆಂಬ ಅಂಶವನ್ನು ಈ ಮುದ್ರಿಕೆಗಳು ಸೂಚಿಸುತ್ತವೆಯೇ? ಹೀಗಿದ್ದರೆ ಪೂರ್ವಾಶ್ರಯವನ್ನು ಸಂಪೂರ್ಣವಾಗಿ ಕಿತ್ತು ಒಗೆದ ಆ ಶಿವಶರಣರಿಗೆ ಈ ಸ್ಥಾವರಲಿಂಗಗಳ ಹಂಗಾದರೂ ಏಕೆ? —ಎಂಬವು ಬಲು ತೊಡಕಿನ ಸಮಸ್ಯೆಗಳಾಗುವವು. ಆದರೆ ಅಂತರ್ಮುಖಿಗಳಾದ ಅವರು ಇರಿಸಿಕೊಂಡಿದ್ದ ಮತ್ತು ಸಾಧನೆಗೆ ಲಕ್ಷ್ಯವಾಗಿದ್ದ ಈ ಕುರುಹುಗಳಲ್ಲಿ ಅವರ ಅಂತರಂಗದ ಆಳವಾದ ಆಧ್ಯಾತ್ಮಿಕ ಅನುಭವಜೀವನವೇ ಅಡಗಿದೆ ಎಂಬುದನ್ನು ನೆನೆಸಿದರೆ ಈ ಸಮಸ್ಯೆಗಳಿಗೆ ಪರಿಹಾರವು ದೊರೆಯುವುದು. ಸಧ್ಯದಲ್ಲಿ ಉಪಲಬ್ಧವಿರುವ ಸುಮಾರು ೩೦೦ ಶಿವಶರಣರ ವಚನಗಳಲ್ಲಿ ಒಬ್ಬರ ವಚನ ಮುದ್ರಿಕೆಯಂತೆ ಇನ್ನೊಬ್ಬರ ವಚನ ಮುದ್ರಿಕೆಯಿಲ್ಲ; ಒಬ್ಬರ ಅನುಭವದಂತೆ ಇನ್ನೊಬ್ಬರ ಅನುಭವವು ಇಲ್ಲದಿರುವುದೇ ಇದಕ್ಕೆ ಕಾರಣವು. ಈ ಮುದ್ರಿಕೆಗಳನ್ನೆಲ್ಲ ಆಯ್ದುಕೊಂಡು ಅನುಭವದೃಷ್ಟಿಯಿಂದ ವಿವೇಚಿಸುವುದು ಆಗದಿದ್ದರೂ ಪ್ರಮುಖರೆನಿಸಿಹ ಮತ್ತು ವಿಶಿಷ್ಟವಾದ ಅನುಭವಸಂಪಾದಕರಾಗಿಹ ಬಸವಣ್ಣ ಅಲ್ಲಮಪ್ರಭು-

ಮತ್ತು ಅಕ್ಕಮಹಾದೇವಿ ಇವರ ವಚನ ಮುದ್ರಿಕೆಗಳಲ್ಲಡಗಿದ ಅನುಭವದ ರಹಸ್ಯವನ್ನರಿತರೆ ಸಾಕು. ಆಯಾ ಶಿವಶರಣರ ಅನುಭವಜೀವನದ ಆಳವನ್ನರಿಯಲು ಅನುಕೂಲವಾಗುವುದು.

ಬಸವಣ್ಣನ ವಚನಗಳಿಗೆ 'ಕೂಡಲಸಂಗಮ' ಎಂಬ ಮುದ್ರಿಕೆಯುಂಟು. 'ಕೂಡಲಸಂಗಮ' ಪದದ ಕೂಡಲ ಮತ್ತು ಸಂಗಮ ಈ ಶಬ್ದಗಳಲ್ಲಿ ಪೂರ್ವಪದವು ಕನ್ನಡ ಭಾಷೆಗೂ ಪರಪದವು ಸಂಸ್ಕೃತ ಭಾಷೆಗೂ ಸೇರಿರುವವು; ಮತ್ತು ಇವೆರಡೂ ಶಬ್ದಗಳಿಗೆ 'ಬೆರೆ' ಎಂಬ ಸಮಾನಾರ್ಥವಿರುವುದು. ಹೀಗಿರುವಲ್ಲಿ ಈ ಪದವು ವ್ಯಾಕರಣಶಾಸ್ತ್ರ ಮತ್ತು ಭಾಷಾಶಾಸ್ತ್ರ ಇವುಗಳ ದೃಷ್ಟಿಯಿಂದ ಸಾಧುವಾಗಿದೆಯೇ? ಎಂಬ ಮಾತು ಮುಂಬರುವುದು. ಬೇರೆಬೇರೆ ಭಾಷೆಗಳ ಶಬ್ದಗಳೆರಡು ಬೆರೆತು ಅರಿಸಮಾಸವೆಂದು ಬಳಕೆಯಲ್ಲಿರುವದು ಕನ್ನಡ ಭಾಷೆಗೆ ಅರಿದಾದ ಸಂಗತಿಯಲ್ಲ. ತರುಮರ, ತವನಿಧಿ, ಕೂರಸಿ, ಮಾರ್ಬಲ ಇವೇ ಮೊದಲಾದ ಕೂಡುನುಡಿಗಳ ಪ್ರಯೋಗದಂತೆಯೇ 'ಕೂಡಲಸಂಗಮ' ಪದದ ಪ್ರಯೋಗವೂ ವ್ಯಾಕರಣಶಾಸ್ತ್ರ ದೃಷ್ಟಿಯಲ್ಲಿ ನಿಷಿದ್ಧವಲ್ಲ. ಭಿನ್ನಭಿನ್ನ ಸಂಸ್ಕೃತಿ ಮತ್ತು ಭಾಷೆ ಇವು ಬೆರಕೆ ಹೊಂದುವ ಕಾಲಕ್ಕೆ ಇಂತಹ ಪದಗಳು ಪ್ರಪಂಚದಲ್ಲಿ ರೂಢವಾಗುವದು ಸ್ವಾಭಾವಿಕವಾಗಿರುವುದು. ಹೊತ್ತುವೇಳೆ, ಕಲ್ಲಪಾಷಾಣ, ನಡುಮಧ್ಯ, ಛಪ್ಪನ್ನೈವತ್ತಾರು ಇತ್ಯಾದಿಯಾದ ಪದಗಳಲ್ಲಿ ದೇಶ್ಯ ಮತ್ತು ಅನ್ಯದೇಶ್ಯ (ಸಂಸ್ಕೃತ) ಶಬ್ದಗಳು ಬೆರೆತು ಪ್ರಯೋಗದಲ್ಲಿರುವುದನ್ನು ಕಾಣಬಹುದು. ಇವುಗಳಿಗೆ ಸಾಮಾನ್ಯವಾಗಿ ಜೋಡುನುಡಿಗಳೆಂದು ಕರೆಯಬಹುದು. ಸಂಸ್ಕೃತಿಭಾಷೆಗಳ ಸಮ್ಮಿಶ್ರಣವು ಹೀಗೆ ಶಬ್ದಸಂಪತ್ತಿಗೆ ಅನುವಿತ್ತಿರುವುದನ್ನು ನೆನೆಸಿದರೆ ಭಾಷಾಶಾಸ್ತ್ರವು 'ಕೂಡಲಸಂಗಮ' ಪದರಚನೆಯನ್ನು ಒಪ್ಪುವುದೆನ್ನಬೇಕಾಗುವುದು.

'ಕೂಡಲಸಂಗಮ' ಪದದ ವೈಶಿಷ್ಟ್ಯವು ವ್ಯಾಕರಣ– ಭಾಷಾಶಾಸ್ತ್ರಗಳಲ್ಲಿ ಕಾಣುವುದಕ್ಕಿಂತ ಭಕುತಿಯ ಅಡಿಗಲ್ಲನ್ನು ಆಶ್ರಯಿಸಿರುವ ಬಸವಣ್ಣನ ಅರಿವಿನ ವಿಕಾಸದ ವೈಖರಿಯಲ್ಲಿ ಸ್ಫುಟವಾಗಿ ಹೊರಹೊಮ್ಮಿರುವುದನ್ನು ಮನಗಾಣಬಹುದು. ಬಸವಣ್ಣನು ಭಕ್ತಿಜೀವಿಯು. ಅವನ ಜೀವನದಲ್ಲಿ ಈ ಭಕ್ತಿರಸ ಸ್ಪಂದನದ ಛಂದೋಗತಿಯು ಚೆಲ್ಲವರಿದು ಸೂಸುತಿರುವುದು. ಅದಕ್ಕೆ 'ಕೂಡಲಸಂಗಮ' ಪದವೆ ನಿದರ್ಶನವು. ಯಾಕೆಂದರೆ ಇದರಲ್ಲಿ ಭಕ್ತಿರಸ ಸ್ಪಂದನದ ಆ ಛಂದೋಗತಿಯನ್ನು ಅರಿಯಬಹುದಾಗಿದೆ. 'ಭಕ್ತಿ'ಯು ಪರಸ್ಪರ ಆಕರ್ಷಣ, ಎಳೆತ ಎಂಬುವದನ್ನು ಗರ್ಭೀಕರಿಸಿಕೊಂಡಿದೆ. ಸಚೇತನ ಅಚೇತನ ಒಡವೆಗಳಲ್ಲಿ ಪರಸ್ಪರ ಎಳೆತವಿದೆ. ತಾಯಿ–ತಂದೆ–ಮಕ್ಕಳಲ್ಲಿ, ಸತಿ–ಪತಿಗಳಲ್ಲಿ, ಗೆಳೆಯ–ಗೆಳೆಯರಲ್ಲಿ ಪರಸ್ಪರ ಎಳೆತವಿದೆ. ಸೂರ್ಯ ಮತ್ತು ಸೂರ್ಯನನ್ನು ಬಳಸಿರುವ ಗ್ರಹಮಾಲೆ ಇವುಗಳಲ್ಲಿ ಅದು

ಏಕೆ, ಅನಂತವಾದ ಅಪಾರವಾದ ಈ ವಿಶ್ವದಲ್ಲಿ ಸ್ಥಾನಮಾನವನ್ನು ಪಡೆದ ಗೋಲ ಗೋಲಗಳಲ್ಲಿ ಸಹ ಈ ಪರಸ್ಪರ ಎಳೆತವಿದೆ. ಆದರೆ ಈ ಎಳೆತವು ಭಕ್ತಿಯಲ್ಲ. ಭಕ್ತಿಯ ಅಂಶವನ್ನು ಸಹ ಇಲ್ಲಿ ಕಾಣಲಾಗುವದಿಲ್ಲ. ಯಾಕಂದರೆ ಆಕರ್ಷಣ (Attraction) ಅದಕ್ಕೆ ಪ್ರತಿಯಾಗಿ ವಿಕರ್ಷಣ (Repulsion) ಇವು ಈ ವಿಶ್ವದ ಅನಂತದಲ್ಲಿ ಸಹಜವಾಗಿ ತೋರಿಬರುವ ಸಂಗತಿಗಳು ಮತ್ತು ಕೇವಲ ಜಾಡ್ಯತೆಗೆ ಸಂಬಂಧಪಟ್ಟವುಗಳು. ಜಡವಸ್ತುವೊಂದು ಬೇರೊಂದು ಜಡವಸ್ತುವಿನ ಬಳಿ ಸಾರುವುದಾಗಲಿ ಇಲ್ಲವೆ ಅದರಿಂದ ದೂರ ಸರಿಯುವದಾಗಲಿ ಒಲಿದಾಟ ಅಲೆದಾಟ ಗಳನ್ನು ಸೂಚಿಸುತ್ತ ಇರುವುದಾದರೂ ಈ ವ್ಯವಹಾರದಲ್ಲಿ ಚೈತನ್ಯ ವಸ್ತುಗಳ ನಡುವಿನ ಸ್ನೇಹ-ಸಮರಸಗಳ ಸೊಬಗು ಇರುವದಿಲ್ಲ. ಅದರಂತೆಯೇ ಜಡ-ಅಜಡ ವಸ್ತುಗಳ ನಡುವಿನ ಬಿಡುಗಡೆಯ ಬೆಡಗೂ ಅಲ್ಲಿ ಇರುವದಿಲ್ಲ. ಭಕ್ತಿಯ ಮೂಲ ವಾದ 'ಭಜ್' ಧಾತುವಿನಲ್ಲಿ 'ಬಿಡುಗಡೆಯ ಬೆಡಗೂ' 'ಸ್ನೇಹದ ಸೊಬಗೂ' ಹುದುಗಿರುವುದರಿಂದ ಅವರೋಹಣದಲ್ಲಿ ತೊಡಕಿಕೊಂಡಿರುವ ಮರವೆಯ ಬಿಡು ಗಡೆಯ ಬೆಡಗೂ ಆರೋಹಣದಲ್ಲಿ ಅಂಗವಿಸುವ ಅರುವಿನ ಸಮರಸದ ಸೊಬಗೂ ಆ ಭಕ್ತಿ ಜೀವನದಲ್ಲಿ ಏಕಕಾಲದಲ್ಲಿ ಒಡಮೂಡುವವು. ಶಿವ-ಜೀವ-ಜಗತ್ತುಗಳಿಂದ ವಿವರಣೆಗೊಂಡ ಈ ವಿಶ್ವದಲ್ಲಿ ಜೀವನಿಗಿರುವ ಮಧ್ಯಸ್ಥಿಕೆಯ ಸ್ಥಾನಕ್ಕೋಸುಗ ಜಾಡ್ಯದ ಜಂಜಡದ ಬೆಸುಗೆಗೆ ಇಂಬೀಯುವ ಜೀವಪ್ರಪಂಚದಿಂದ ಬಿಡುಗಡೆಯೂ ಮತ್ತು ಅದರ ಹಸುಗೆಗೆ ಹದವೀಯುವ ಶಿವಪ್ರಪಂಚದೊಡನೆ ಸಮರಸವೂ ಆ ಜೀವನ ಭಕ್ತಿಜೀವನದಲ್ಲಿ ಒಡಮೂಡುವವು. ಭಕ್ತಿಯ ದೆಸೆಯಿಂದ ಕುರುಹಿನ ನಿಲ ವಾಗಿಹ ಜಗದ ಸಾರ್ಥಕತೆಯೂ ಅರುಹಿನ ನಲಿವಾಗಿಹ ದೇವನ ಶಕ್ಯತೆಯೂ ಜೀವನ ನಲುಮೆಯ ಇರುವಿನಲ್ಲಿ ಸಮನಿಪುವು. ಅಧೋದೃಷ್ಟಿಗಿಂತ ಊರ್ಧ್ವದೃಷ್ಟಿಯೇ ಭಕ್ತಿಯ ಲಕ್ಷಣವಾಗಿರುವುದರಿಂದ ಸೃಷ್ಟಿಯನ್ನು ಅಲ್ಲಗಳೆಯದೆ ಸೃಷ್ಟಿಕರ್ತನತ್ತ ಹೊರಳಿರುವುದದು. ಶಿವನೂ (ಲಿಂಗವೂ) ಸಹ ತನ್ನ ಸೃಷ್ಟಿಯ ಸೊಬಗು ಜೀವನ ಹಂಬಲು ಹರಿದಾಟಗಳಿಂದ ಹದಗೆಟ್ಟು ಹೋಗಕೂಡದೆಂಬ ಬಲವಾದ ಬಯಕೆಯಲ್ಲಿ ಆ ಜೀವನ (ಅಂಗನ) ಅಂಗವನ್ನೇ ಲೀಲಾಭೂಮಿಯನ್ನು ಮಾಡಿಕೊಂಡು ಆ ಅಂಗನನ್ನೇ ತನ್ನ ಲೀಲೆಗೆ ತಕ್ಕ ಉಪಕರಣವನ್ನು ಮಾಡಿಕೊಂಡು ಲೀಲಾಮೂರ್ತಿ ಯಹನು. ದೇವನಿಗಾಗಿ ಜೀವನು ಅಲೆಯುವ ಮತ್ತು ಜೀವನಿಗಾಗಿ ದೇವನು ಒಲಿಯುವ ಈ ಗೂಢದಲ್ಲಿ ಭಕ್ತಿ ಜೀವನದ ಸೊಬಗು ಅಡಗಿರುವುದು. ಆದುದರಿಂದ ಜಡ-ಜಡಗಳಲ್ಲಿ ಅಲ್ಲ, ಜಡ-ಜೀವಗಳಲ್ಲಿ ಅಲ್ಲ, ಜೀವ-ಜೀವಗಳಲ್ಲಿಯೂ ಅಲ್ಲ, ಜೀವ-ದೇವರಲ್ಲಿರುವ ಪರಸ್ಪರ ಆಕರ್ಷಣ—ಪರಸ್ಪರ ಎಳೆತ, ಇದಕ್ಕೆ ಮಾತ್ರ 'ಭಕ್ತಿ' ಎಂದು ಕರೆಯಬೇಕು. ಅರಿವಿನ ವಿಕಾಸದಲ್ಲಿ ವೈಶಿಷ್ಟ್ಯವನ್ನು ಪಡೆದ ಬಸವಣ್ಣನ ಭಕ್ತಿಯ ಬಗೆಯು ಇಂತಿಹುದು.

ಜೀವನೆಂದುಸುರುವಲ್ಲಿ ಮರವೆಯು ಮೂಡಿಹುದು. ಆದರೆ ಮಾನವನ 'ಇತಿ ನೇತಿ' ಎಂಬ ವಿಚಾರಗಳಿಂದ ಅವನ ಭಾವದಲ್ಲಿ ಅದೃಷ್ಟವಾದ ಅವ್ಯಕ್ತವಾದ ಅನಂತವಾದ ಅರಿವೂ ಅಡಗಿರುವುದೆಂಬುದು ಸ್ಪಷ್ಟವು. ಸಾಧನೆ ಹಿಡಿದು ಸಾಗುವಾಗ ಜೀವನ ಮರವೆಯಳಿದು ಮಾನವನ ಕುರುಹಿನ ಕಾಯದಲ್ಲಿ ಅರಿವಿನ ಬಗೆಯು ಕಾಣಬರುವುದು. ಅರಿವು ಅರಳಿದಂತೆ ದೇವನ ದಿವ್ಯ ಪ್ರಕಾಶವು ಅವನ ಕುರುಹಿನ ಕಾಯದಲ್ಲಿ ಬೆಳಗುವುದು; ಅಂದರೆ ಸೃಷ್ಟಿಯಂತೆ ಮಾನವ ದೇಹವೂ ಸಾಧನೆಗೆ ಸಾಧನವಾಗುವುದು. ಬಸವಣ್ಣ ನಿರಿಸಿಕೊಂಡಿದ್ದ ಅರಿವಿನ ವಿಕಾಸದ ಸಾಧನೆಯ ಕ್ರಮದಲ್ಲಿ ಈ ಕುರುಹಿನ ಸೃಷ್ಟಿಯೂ ಮತ್ತು ಈ ಕುರುಹಿನ ಕಾಯವೂ ಘನತೆಯನ್ನು ಪಡೆದಿರುವವು.

ಮನುಷ್ಯನ ಇಂದ್ರಿಯ ವ್ಯವಹಾರ ಶಕ್ತಿಯೆಲ್ಲ ದೇಹದ ವಿಶಿಷ್ಟವಾದ ಸ್ಥಾನಗಳಲ್ಲಿ ಕೇಂದ್ರೀಕೃತವಾಗಿರುವುದು. ಕರ್ಮೇಂದ್ರಿಯಗಳ ಕೇಂದ್ರೀಕೃತ ಶಕ್ತಿಯು ನಾಭಿಸ್ಥಾನದಲ್ಲಿ ವ್ಯಕ್ತವಾಗಿರುವಂತೆ ಅವನ ಜ್ಞಾನೇಂದ್ರಿಯಗಳ ಕೇಂದ್ರೀಕೃತ ಶಕ್ತಿಯು ಭ್ರೂಮಧ್ಯ ಸ್ಥಾನದಲ್ಲಿ ವ್ಯಕ್ತಗೊಂಡಿರುವುದು. ಅದರಂತೆ ಅವನ ಅಂತರಿಂದ್ರಿಯಗಳೆನಿಸಿದ ಅಂತಃಕರಣಗಳ ಕೇಂದ್ರೀಕೃತ ಶಕ್ತಿಯು ಹೃದಯಸ್ಥಾನದಲ್ಲಿ ವ್ಯಕ್ತಗೊಂಡಿರುವುದು. ನಾಭಿಯಿಂದ ಕೆಳಗೆ ಜೀವನು ಅಧೋಮುಖಿಯಾಗಿ ವರ್ತಿಸಿ ಕರ್ಮೇಂದ್ರಿಯಗಳ ತೃಪ್ತಿಗಾಗಿ ಹಂಬಲಿಸುವನು. ಕಂಠದಿಂದ ಮೇಲೆ ಅವನು ಊರ್ಧ್ವಮುಖಿಯಾಗಿ ಜ್ಞಾನೇಂದ್ರಿಯಗಳ ತೃಪ್ತಿಗಾಗಿ ಹಂಬಲಿಸುವನು. ಅಧೋಮುಖಿಯಾಗಿ ವರ್ತಿಸಲಿ, ಊರ್ಧ್ವಮುಖಿಯಾಗಿ ವರ್ತಿಸಲಿ ಅವನ ಈ ವ್ಯವಹಾರವೆಲ್ಲ ಜಾಡ್ಯದಿಂದ ಬಿಡುಗಡೆಯನ್ನು ಪಡೆದಿಲ್ಲ. ಕರ್ಮೇಂದ್ರಿಯಂಗಳ ವ್ಯವಹಾರವು ಉಚ್ಚತಮವಾದ ನೀತಿಯಲ್ಲಿ ಅಂದರೆ ಅದು ಸತ್‌ಕ್ರಿಯೆಯಲ್ಲಿ ಪರಿವರ್ತನೆಯನ್ನು ಪಡೆದಂತೆ, ಅದರಂತೆಯೇ ಜ್ಞಾನೇಂದ್ರಿಯಂಗಳ ವ್ಯವಹಾರವು ಉಚ್ಚತಮವಾದ ಜ್ಯೋತಿಯಲ್ಲಿ ಅಂದರೆ ಅದು ಸುಜ್ಞಾನದಲ್ಲಿ ಪರಿವರ್ತನೆಯನ್ನು ಪಡೆದಂತೆ ಜಾಡ್ಯವು ತೊಲಗಿ ಆ ಇಂದ್ರಿಯಂಗಳು ಪಾರದರ್ಶಕವಾಗುವವು; ನಿರ್ಭೀತವೃತ್ತಿಯು ಅಂದಿಗೆ ಅಂಗವಿಸುವುದು. ಅಂದಿಗೆ ಮಾನವನು ಧರ್ಮವಂತನೆನಿಸಿಕೊಳ್ಳಲು ತಕ್ಕವನಾಗುವನು. ಹೀಗೆ ಕರ್ಮಜ್ಞಾನೇಂದ್ರಿಯಂಗಳ ಪರುಷವೆನಿಸದ ಪ್ರವೃತ್ತಿಯನ್ನು ಪಲ್ಲಟಿಸಲು ಸತ್‌ಕ್ರಿಯೆ ಸುಜ್ಞಾನಗಳ ನೂಲ ಹಿಡಿದು ಜೀವನು ಸಾಗಬೇಕು. ಆಗ ಅವನ ಅಂತಃಕರಣಗಳು ಶುದ್ಧವಾಗಿ ಅವು ದೇವನ ಆವಾಸಕ್ಕೆ ಅನುಕೂಲಿಸುವವು. ಜೀವನಲ್ಲಿ ಅಲೆದಾಟ ಹುಟ್ಟಿದಷ್ಟು ಮಟ್ಟಿಗೆ ದೇವನಲ್ಲಿ ಒಲಿದಾಟವಿಹುದು. ಜೀವನು ಇಂದ್ರಿಯಂಗಳ ಜಾಡ್ಯತೆಯನ್ನು ಪರಿಹರಿಸಿಕೊಳ್ಳಬಹುದಂತೆ ಅಂದರೆ ಪಲ್ಲಟಗೊಂಡ ಇಂದ್ರಿಯ ಶಕ್ತಿಯ ಸಹಾಯದಿಂದ ಅನುಭವದ ಗತಿಯಲ್ಲಿ ಮೇಲೆ ಗಮನಗೊಂಡಂತೆ ದೇವನ ಚೈತನ್ಯವು ಕೆಳಗಿಳಿದು

ಅವನ ಅಂಗಪ್ರತ್ಯಂಗಗಳಲ್ಲಿ ವ್ಯಾಪಿಸುವುದು. ಮೇಲೇರುವ ಜೀವನ ಅನುಭವ ಶಕ್ತಿಯೆನಿಸಿಹ ಭಕ್ತಿ ಮತ್ತು ಕೆಳಗಿಳಿಯುವ ದೇವನ ಅನುಗ್ರಹ ಶಕ್ತಿ ಯಾವ ಹೃದಯ ಸ್ಥಾನದಲ್ಲಿ ಸೇರುವವೋ ಅದುವೆ ಮುಕ್ತಿ, ಅದುವೆ ' ಕೂಡಲಸಂಗಮ 'ನ ಅನುಭವ ಹೃದಯ. ಇಂತಹ ಮುಕ್ತಿಯ ಲಾಭವ ಪಡೆದ ಮುಕ್ತಾತ್ಮನಿಗೆ:

ಹೃದಯಕಮಲದಲ್ಲಿ ಲಕ್ಷವಿಟ್ಟು ನೋಡುವ ದೇವರು ದೇವರಲ್ಲ.
ಭ್ರೂಮಧ್ಯದಲ್ಲಿ ಲಕ್ಷವಿಟ್ಟು ನೋಡುವ ದೇವರು ದೇವರಲ್ಲ.
ನಾಸಿಕಾಗ್ರದಲ್ಲಿ ಲಕ್ಷವಿಟ್ಟು ನೋಡುವ ದೇವರು ದೇವರಲ್ಲ
ಅಖಂಡಗೋಳಕಾಕಾರವಾಗಿಹ ಲಿಂಗವು ತಾನೆಂದರಿದಡೆ
ತಾನೆ ದೇವ ಅಪ್ರಮಾಣ ಕೂಡಲ ಸಂಗಮದೇವಾ[1]

ಎಂಬ ಅನುಭವದ ಅರಿವುಂಟಾಗಿ ಜೀವದೇವರ ಅಲೆದಾಟ ಒಲಿದಾಟದಲ್ಲಿಹ ನಲುಮೆಯು ನೋಟಕೂಟವು ಕರಸ್ಥಲದ ಮಾಟದಲ್ಲಿ ಪ್ರಕಟಗೊಳ್ಳುವುದು. ಅಲ್ಲಮಪ್ರಭುವು ಸಹ :

ಅರಿವಿನ ಹೃದಯ ಕಣ್ದೆರೆಯಬೇಕೆಂದು
ಗುರುವೆಂದು ಸಂಕಲ್ಪಿಸಿಕೊಂಡನಲ್ಲದೆ
ಗುರುವಿಂಗೆ ಶಿಷ್ಯನೆಂದುಂಟೆ ? ಶಿಷ್ಯಂಗೆ ಗುರುವೆಂದುಂಟೆ ?
ಗಮನಾಗಮನ ನಾಸ್ತಿಯಾದ ಲಿಂಗಕ್ಕೆ ಲಿಂಗವೆಲ್ಲಿಯದೋ ಗುಹೇಶ್ವರಾ[2]

ಎಂದು ತಿಳಿಸುವ ಪ್ರಸನ್ನ ಪರಿಣಾಮವಾಣಿಯಲ್ಲಿ ಹೃದಯಸ್ಥಾನದ ಹಿರಿಮೆಯನ್ನು ಬೀರಿ ಅಲ್ಲಿ ಮೇಳೈಸುವ ಈ ಅರಿವಿನ ಬೆಳಕನ್ನೇ ಕುರುಪಿಟ್ಟು ನಿರೂಪಿಸಿರುವನು.

ಭಕ್ತಿಜೀವಿಗಳಿಗೆ ಮುಕ್ತಿಯ ಲಾಭವು ಮುಖ್ಯವಾದುದಲ್ಲ. ಭಕ್ತಿಯು ಅರಳಿದಷ್ಟು ಪ್ರಭುಶಕ್ತಿಯು ಅಂಗದಲ್ಲಿಳಿಯುವದೆಂಬುದು ಅವರ ತುಂಬಿದ ನಂಬುಗೆ. ಆದುದರಿಂದ ಅವರು ಕೋರಿದುದು ಕೇವಲ ಭಕ್ತಿಯೊಂದನ್ನೇ ! ಪ್ರಭುವಿನ ಅನುಗ್ರಹ ಶಕ್ತಿಗೂ ಅವರು ಕೈಯೊಡ್ಡಿದವರಲ್ಲ. ' ನೀನೊಲಿದರೆ ಒಲಿ, ಒಲಿಯದಿದ್ದರೆ ಮಾಣು, ನಾ ನಿಮ್ಮ ಪೂಜಿಸಿದಲ್ಲದೆ ಸೈರಿಸಲಾರೆನು ' ಎಂಬ ಭಕ್ತರ ನುಡಿಯಲ್ಲಿ ಪ್ರಭುವಿನ ಪ್ರಸಾದದ ಹಂಗೂ ಅವರಿಗಿಲ್ಲವೆಂಬುದು ಸ್ಪಷ್ಟವು. ಪ್ರಭುವಿನ ಕಾರುಣ್ಯವನ್ನೇ ಕೋರದ ಅವರು ಮುಕ್ತಿಯ ಮಾತನ್ನು ಎತ್ತರೆಂಬುದೂ ಸ್ಪಷ್ಟವು. ಆದರೆ ಭಕ್ತಿಜೀವನದ ಅಲೆದಾಟ ಪ್ರಭುಶಕ್ತಿಯ ಒಲಿದಾಟಗಳಲ್ಲಿ ಸಹಜವಾಗಿ ಸಂಗಳಿಸುವ ಒಂದು ಅವಸ್ಥೆಯಾಗಿಹುದು ಆ ಮುಕ್ತಿಯೆಂಬುದು.

---

೧ ವ. ಶಾ. ಸಾರ ಭಾಗ ೧ ಪೂರ್ವಾರ್ಧ ವಚನ ೧೨ ಪುಟ ೫೬

೨ ಅದೇ ಗ್ರಂಥ ವಚನ ೧ ಪುಟ ೬೭

ಕೃಷ್ಣಾ ಮಲಪ್ರಭಾ ನದಿಗಳ ಸಂಗಮದಲ್ಲಿ ಕೂಡಲಸಂಗಮವುಂಟಷ್ಟೇ ಉತ್ತರವಾಹಿನಿಯಾದ ಕೃಷ್ಣೆಯು ಸುಜ್ಞಾನಪ್ರಕಾಶವನ್ನೂ ದಕ್ಷಿಣವಾಹಿನಿಯಾದ ಮಲಪ್ರಭೆಯು ಸತ್‌ಕ್ರಿಯಾವಿಮರ್ಶೆಯನ್ನೂ ವ್ಯಕ್ತಗೊಳಿಸುವವು. ಜ್ಞಾನಪ್ರಕಾಶದಿಂದ ಜ್ಞಾನೇಂದ್ರಿಯಗಳ ಪರಿಶುದ್ಧತೆಯೂ ಕ್ರಿಯಾವಿಮರ್ಶೆಯಿಂದ ಕರ್ಮೇಂದ್ರಿಯಗಳ ಪಾವಿತ್ರತೆಯೂ ದೊರೆಕೊಂಡು ಭಕ್ತಿಜೀವನದ ಬೆಳವಣಿಗೆಗೆ ಕಳೆಯನ್ನು ತುಳುಕಿಸುವವು.

ಅಂತರಂಗ ಬಹಿರಂಗ ಆತ್ಮಸಂಗ ಒಂದೇ ಅಯ್ಯ
ನಾದ ಬಿಂದು ಕಲಾತೀತ ಆದಿಯಾಧಾರ ನೀನೇ ಅಯ್ಯ
ಆರೂಢದ ಕೂಟದ ಸುಖವ ಕೂಡಲ ಸಂಗಯ್ಯ ತಾನೆ ಬಲ್ಲ[೧]

ಎಂದು ಹಾಡಿದ ಬಸವಣ್ಣನ ವಚನದಲ್ಲಿ ಅಂತರಂಗವು ಈ ಜ್ಞಾನಪ್ರಕಾಶವನ್ನೂ ಬಹಿರಂಗವು ಈ ಕ್ರಿಯಾವಿಮರ್ಶೆಯನ್ನೂ ಕುರುಪಿಟ್ಟಹುದು. ಭಕ್ತಿ-ಪ್ರಸಾದದಲ್ಲಿ ಪ್ರಕಾಶವಿಮರ್ಶೆಗಳ ಬೆಸುಗೆಯಾಗಿ ಆತ್ಮಸಂಗವು ಕರತಲಾಮಲಕವಾಗುವದೆಂಬುದನ್ನು ಮುಂದಿನ ಮಾತು ಸಿದ್ಧಗೊಳಿಸುವುದು. 'ಕೂಡಲಸಂಗಮ' ಮುದ್ರಿಕೆಯ ಮರೆಯಲ್ಲಿರುವುದು ಇಂತಹ ಅನುಭವವು.

ಅಲ್ಲಮಪ್ರಭುವಿನ ವಚನಗಳಲ್ಲಿ 'ಗುಹೇಶ್ವರ' ಎಂಬ ಅಂಕಿತವುಂಟು. ಬಸವಣ್ಣನು ಭಕ್ತಿಯ ಭಾಂಡಾರಿಯಾಗಿದ್ದಂತೆ ಅಲ್ಲಮಪ್ರಭುವು ಜ್ಞಾನದ ಪುತ್ಥಳಿಯಾಗಿದ್ದನು. ಅವನು ವೈರಾಗ್ಯದ ಮೂರ್ತಿಯೂ ಅಹುದು. ಆತನಿಗೆ ನಿಲುಕಿದ್ದ ಜ್ಞಾನವು ಪುಸ್ತಕಜ್ಞಾನವಲ್ಲ. ಅದು ಅನುಭವಜ್ಞಾನವು. ಶಿವಯೋಗಜ್ಞಾನವೆಂದೂ ಅದಕ್ಕೆ ಹೆಸರು. 'ಗುಹೇಶ್ವರ' ಎಂಬ ಅಂಕಿತದಲ್ಲಿ ಅಲ್ಲಮಪ್ರಭುವಿಗೆ ನಿಲುಕಿದ್ದ ಈ ಶಿವಯೋಗಜ್ಞಾನವು ತುಂಬಿದೆ.

ಗುಹಾ+ಈಶ್ವರ ಪದಗಳಲ್ಲಿ 'ಗುಹಾ' ಶಬ್ದಕ್ಕೆ ಮೂಲವಾದ 'ಗುಹ್' ಧಾತುವಿಗೆ 'ತುಂಬು, ಹಬ್ಬು, ವ್ಯಾಪಿಸು' ಎಂಬ ಅರ್ಥವುಂಟು. ಆಕಾಶವು ಎಲ್ಲವನ್ನೂ ತುಂಬಿರುವುದರಿಂದ ಅದಕ್ಕೆ ಗುಹೆ ಎಂಬ ಸಂಜ್ಞೆಯುಂಟು. ಆದರೆ ಅದು ಕೇವಲ ಜಡವಾದುದು. ಅದಕ್ಕೆ ತನ್ನರಿವು ತನಗಿಲ್ಲ. ಆದುದರಿಂದ ಬರಿಯ ಗುಹಾ ಪದವೊಂದೆ ಅಂಕಿತದಲ್ಲಿಲ್ಲ. ಈ ಜಡತ್ವದ ತೊಡಕು ಬರಬಾರದೆಂದು 'ಈಶ್ವರ' ಪದದ ಮೇಳವು ಅದಕ್ಕುಂಟು. 'ಈಶ್' ಧಾತುವಿನಿಂದ ಜನಿಸಿದ ಈಶ್ವರ ಪದದಿಂದ 'ಒಡೆಯ, ನಿಯಾಮಕ' ಎಂಬ ಅರ್ಥಬೋಧವಿದೆ. ಜಡವಾದ ಬರಿಯ ಬಯಲು ಎಲ್ಲವನ್ನೂ ತುಂಬಿದ್ದರೂ ಅದು ಪರಶಿವನಲ್ಲ; ಪರಬ್ರಹ್ಮವಲ್ಲ. ಯಾಕೆಂದರೆ ಅದರಲ್ಲಿ ಸರ್ವನಿಯಾಮಕ ಗುಣವಿಲ್ಲ. ಈಶ್ವರ ಪದದ ಮೇಳವಿಲ್ಲದಿದ್ದರೆ ನಿಯಾಮಕತ್ವವಿಲ್ಲದ

೧. ಬಸವ—ಐಕ್ಯನ ಶರಣ ವಚನ ೧೦.

ವ್ಯಾಪಕತ್ವವು ಸೂಚಿತವಾಗುವಂತೆ ಅಂಕಿತದಲ್ಲಿ ಈಶ್ವರ ಪದವೊಂದೆ ಇದ್ದು ಜೊತೆಗೆ ಗುಹಾ ಪದವು ಇಲ್ಲದಿದ್ದರೆ ವ್ಯಾಪಕತ್ವವಿಲ್ಲದ ನಿಯಾಮಕತ್ವವೂ ಸೂಚಿತ ವಾಗುತ್ತಿತ್ತು. ಆದುದರಿಂದ ಗುಹಾ ಮತ್ತು ಈಶ್ವರ ಈ ಪದಗಳ ಜೋಡಣೆಯಿಂದ 'ಗುಹೇಶ್ವರ' ಅಂಕಿತಕ್ಕೆ ಸರ್ವವ್ಯಾಪಕ, ಸರ್ವನಿಯಾಮಕ ಎಂಬ ಅರ್ಥಸಂಭವ ವಾಗುವುದು. ಪರಶಿವನು ಸರ್ವವ್ಯಾಪಕನೂ ಸರ್ವನಿಯಾಮಕನೂ ಆಗಿರುವುದರಿಂದ 'ಗುಹೇಶ್ವರ' ಪದವು ಪರಶಿವ ವಾಚಕವಾಗಿರುವುದು.

ಗುಹೇಶ್ವರ ಪದದಿಂದ ಧ್ವನಿತವಾಗುವ ವ್ಯಾಪಕತ್ವ ಮತ್ತು ನಿಯಾಮಕತ್ವ ಇವುಗಳ ಬೆಸುಗೆಯ ಸೊಬಗನ್ನು ಅಲ್ಲಮಪ್ರಭುವು ಕಂಡಿರುವುದು– ಆ ಪರಶಿವನ ನಿಲವನ್ನು ಅವನು ನೋಡಿರುವುದು ಎಲ್ಲಿ?-ಎಂಬುದೊಂದು ಕುತೂಹಲದ ಪ್ರಶ್ನೆಯು ಮೊಳೆದೋರುವುದು. ಆದರೆ ಅವನಿಗೆ ಆಳವಟ್ಟಿದ್ದ ಅನುಭವದ ಬಗೆಯನ್ನರಿತರೆ ಆ ಪರಶಿವನನ್ನು ಅವನು ತನ್ನ ಅಂತರಂಗದಲ್ಲಿಯೇ ಕಂಡನು; ಆ ಪರಶಿವನೇ ತಾನೆಂಬ ಅರಿವನ್ನು ಅವನು ತನ್ನಲ್ಲಿಯೆ ಅಂಗವಿಸಿಕೊಂಡನು ಎಂಬುದು ಸ್ಪಷ್ಟವಾಗುವುದು.

ಸಪ್ತನದಿಯ ಸಂಗಮವ ದಾಂಟಿ
ಗುಪ್ತ ಕದಳಿಯ ಬನದೊಳ್ ಸುಳಿದ
ಲ್ಲಿಪ್ಪ ಗುಹೆಯೊಳಗೊಬ್ಬನೆ ಹೊಕ್ಕೆನು[೪]

ಎಂದು ತಿಳಿಸುವ ಸರ್ಪಭೂಷಣ ಶಿವಯೋಗಿಗಳ ಮಾತಿನಲ್ಲಿ, ಅದರಂತೆಯೇ ಉಪನಿಷತ್ತುಗಳಲ್ಲಿ ಗುಹಾ ಶಬ್ದದ ಪ್ರಯೋಗವುಂಟು[೫] ಇಲ್ಲಿ ಬರುವ ಈ 'ಗುಹಾ' ಪದಕ್ಕೆಲ್ಲ ಸಾಮಾನ್ಯವಾಗಿ ಒಂದೇ ಅರ್ಥ. ಅದು ಕೇವಲ ಯೋಗಪರವಾದುದು. ಆದುದರಿಂದೆ ಯೋಗಪರವಾಗಿಯೇ ಗುಹೇಶ್ವರ ಪದದಲ್ಲಿಯ ಅನುಭವದ ನಿಲವನ್ನರಿಯಬೇಕು.

ಶ್ರೀಶೈಲ ಕ್ಷೇತ್ರದ ವರ್ಣನೆಯಲ್ಲಿ ಬರುವ ಸಪ್ತನದಿಗಳಾಗಲಿ ಅವುಗಳ ಸಂಗಮ ವಾಗಲಿ ಸ್ಥೂಲಪರವಾಗಿರುವುದಿಲ್ಲ. ಇವು ಯೋಗಿಗಳ ದಿವ್ಯದೃಷ್ಟಿಯು ಕಂಡಿರುವ ಭೌತಶರೀರದಲ್ಲಿಯ ಏಳು ಜಾಗ್ರತ ಸ್ಥಾನಗಳನ್ನು ಉದ್ದೇಶಿಸಿ ಇರುವವು. ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞಾ ಬ್ರಹ್ಮರಂಧ್ರ (ಸಹಸ್ರಾರ) ಎಂಬ ಏಳು ಚಕ್ರಗಳನ್ನು ಯೋಗಶಾಸ್ತ್ರವು ಹೇಳುವುದಾದರೂ ಈ ಜಾಗ್ರತ ಸ್ಥಾನ ಗಳನ್ನು ಉದ್ದೇಶಿಸಿಯೇ. ಇಲ್ಲಿ ಚೇತನಾಶಕ್ತಿಯ ಕೇಂದ್ರಗಳುಂಟು. ನಿಜವಾಗಿ

---

೪ ಕೈವಲ್ಯ ಕಲ್ಪವಲ್ಲರಿ ೪–೧೧

೫ ತೈತ್ತಿರಿಯ ೨।೧. ಕಠ ೧।೧೪ ೨।೧೨ ೨।೨೦ ೩।೧ ೪।೬-೭. ಮುಂಡಕ ೨।೧।೮ ೨।೨।೧ ೩।೧।೭ ೩।೨।೯. ಶ್ವೇತಾಶ್ವೇತರ ೨।೧೧ ೩।೨೦. ಮೈತ್ರಿ ೨।೬ ೬।೪ ಮಹಾನಾರಾಯಣ ೨।೪ ೧೦।೫ ೧೫।೬. ಕೈವಲ್ಯ ೩. ಸನ್ಯಾಸ ೨. ರುದ್ರಹೃದಯ ೩೬. ಬಾಷ್ಕಲಮಂತ್ರ ೧೮.

ಇವು ಕಶೇರುಕಾ ರಜ್ಜುವಿನ ಚೈತನ್ಯಶಕ್ತಿಯ ಆವಿಷ್ಕಾರಗಳು (Projections). ಆಧಾರದಿಂದ ಸಹಸ್ರಾರದ ವರೆಗಿನ ಈ ಏಳು ಸ್ಥಾನದಿಂದ ಆತ್ಮನ ಅರಿವಿನ ವಿಕಾಸವಾಗುತ್ತ ಅದು ಪಶ್ಚಿಮ ಸ್ಥಾನವೆಂಬಲ್ಲಿ ನಿಲುಕಡೆಯನ್ನು ಹೊಂದಬೇಕು ಎಂಬ ಸೂಚನೆಯು ಈ ಸಪ್ತನದಿ ಮತ್ತು ಇವುಗಳ ಸಂಗಮ ವಿಚಾರಗಳಿಂದ ಹೊರಡುತ್ತದೆ.[೬] ಹಠಯೋಗಿಗಳ ಮತ್ತು ನಾಥಪಂಥೀಯರ ಮಾಲಿಕೆಯಲ್ಲಿ ಅಲ್ಲಮಪ್ರಭುವಿನ ಹೆಸರು ಬರುವುದರಿಂದ[೭], ಅವರಲ್ಲಿ ಒಬ್ಬದನಾಗಿ ತನ್ನ ವಜ್ರಕಾಯ ಸಿದ್ಧಿಯಿಂದ ತನ್ನೊಡನೆ ಸಂಘಟಿಸಿದ ಅನೇಕ ನಾಥಸಿದ್ಧರನ್ನು ವಾದದಲ್ಲಿ ಅವನು ಸೋಲಿಸಿದನೆಂದು ತಿಳಿದು ಬರುವುದರಿಂದ[೮] ಮತ್ತು ತನ್ನದೇ ಆದ ಒಂದು ಪರಮಯೋಗದ ರಹಸ್ಯವನ್ನು ಅವರಿಗೆ ಬೋಧಿಸಿದನೆಂದು ಪರಂಪರಾಗತ ನಂಬುಗೆಯೊಂದಿರುವುದರಿಂದ[೯] ಅಲ್ಲಮಪ್ರಭುವು ಯೋಗ ವಿದ್ಯಾಪಾರಂಗತನಾಗಿ ಒಬ್ಬ ಮಹಾಯೋಗಿಯಾಗಿದ್ದನೆಂದು ಸಿದ್ಧವಾಗುತ್ತಿದೆ. ಶರೀರವನ್ನು ಕೊರೆದು ನೋಡಿ ಆಯಾ ಸ್ಥಾನಗಳಲ್ಲಿ ಈ ಸಪ್ತ ಚಕ್ರಗಳನ್ನು ಕಾಣಬಹುದೆಂದು ಸಾಮಾನ್ಯವಾಗಿ ಯಾರಾದರೂ ಊಹಿಸಿದರೆ ಅದು ಶುದ್ಧ ತಪ್ಪು. ಯಾಕಂದರೆ ಯೋಗಶಾಸ್ತ್ರದಲ್ಲಿ ವರ್ಣಿತವಾಗಿರುವಂತೆ ವಿಶಿಷ್ಟ ದಳಸಂಖ್ಯೆಯಿಂದ ಕೂಡಿಕೊಂಡು ಅಲ್ಲಿ ಚಕ್ರಗಳಿಲ್ಲ. ಅಲ್ಲಿ ಇರುವುದು ಕೇವಲ ನರನಾಡಿಗಳ ಗುಂಪು. ಮಾನವಶರೀರಶಾಸ್ತ್ರಜ್ಞರು ಆಯಾ ಸ್ಥಳಗಳಲ್ಲಿ ನರನಾಡಿಗಳ ಗ್ರಂಥಿಗಳು (Ganglia) ಇರುವವೆಂದು ಒಪ್ಪುತ್ತಾರೆ. ಇಂತಿಷ್ಟು ನಾಡಿಗಳೇ ಅಲ್ಲಿರುವವೆಂದು ಮಾತ್ರ ನಿರ್ದಿಷ್ಟಪಡಿಸಲಾಗಿಲ್ಲ. ದೇವಜ್ಞಾನಿಗಳು (Theosophist) ಪಡೆದುಕೊಂಡಿರುವ ದೃಷ್ಟಿಯೊಂದರ (Clairvoiyance) ಸಹಾಯದಿಂದ ಕಂಡಿರುವ ಚಿತ್ರಗಳನ್ನು ವಿಕಾಸಗೊಳಿಸಿದಾಗ, ಬೆಳಸಿದಾಗ ಅವುಗಳಲ್ಲಿ ಯೋಗಶಾಸ್ತ್ರದಲ್ಲಿ ಹೇಳುವ ದಳಗಳು ಕಾಣುತ್ತಿವೆ. ಬ್ರಹ್ಮರಂಧ್ರದಲ್ಲಿ ಸಹಸ್ರದಳಗಳಿವೆಯೆಂದು ಹೇಳುವದು ಅತಿಶಯೋಕ್ತಿಯಲ್ಲ. ಯಾಕಂದರೆ ಸುಪ್ರಸಿದ್ಧ ದೇವಜ್ಞಾನಿಯಾದ ಸಿ. ಡಬ್ಲ್ಯು. ಲೀಡಬೀಟರನು ತಾನು ಈ ಚಕ್ರದಲ್ಲಿ ೯೬೦+೧೨=೯೭೨ ದಳಗಳನ್ನು ಕಂಡಿರುವುದಾಗಿ ತಿಳಿಸುತ್ತಾನೆ.[೧೦] ಚಕ್ರಗಳ ಬಗೆ ಸರಿಯಾಗಿ ತಿಳಿವಳಿಕೆಯಾಗಬೇಕಾದರೆ ಚೈತನ್ಯಾತ್ಮಕ ಶರೀರವನ್ನು (Etheric Double) ನೆನಿಸಿಕೊಳ್ಳಬೇಕು. ಕಾರಣ ಶರೀರವೆಂದು ಯಾವುದನ್ನು ಯೋಗಶಾಸ್ತ್ರವು ವರ್ಣಿಸಿರುವುದೋ ಅದರ ವ್ಯವಹಾರವು ಒಂದು ಬೆಳಕಿನ ನೆರವಿನಿಂ

---

೬ ಲಿಂಗಸೂತ್ರ ನಿರ್ಣಯ ಪು. ೨೯

೭ ಹಠಯೋಗಪ್ರದೀಪಿಕಾ ೧—೮

೮ ಲಿಂ. ವಿ. ಸ. ತ್ರೈಮಾಸಿಕ II-೧ ಪುಟ ೮೫—೯೨

೯ ಪ್ರಭುಲಿಂಗಲೀಲೆ. ಶೂನ್ಯ ಸಂಪಾದನೆ ಇತ್ಯಾದಿ ಗ್ರಂಥಗಳಲ್ಲಿ

10 The Chakras P 20

ಸಾಗಬೇಕಷ್ಟೇ! ಆ ದಿವ್ಯ ಬೆಳಕಿಗೆ ಚಿತ್‌ಪ್ರಭೆಯೆಂದು (Astral Light) ಹೆಸರಿಸಲಾಗುವುದು. ಯೋಗಿಗಳು ಕಂಡಿರುವ ಆ ಸಪ್ತಸ್ಥಾನಗಳಲ್ಲಿ ಈ ದಿವ್ಯ ಬೆಳಕಿನ ಕಿರಣಗಳು (Divine Radiation) ಒಂದುಗೂಡಿರುವುದರಿಂದ ಇಂತಹ ಕಿರಣಗಳ ಪುಂಜಕ್ಕೆ ಚಕ್ರ ಎಂದು ಕರೆಯಲಾಗಿದೆ. ಷಟ್‌ಸ್ಥಲದ ಪ್ರಾಣಲಿಂಗ ಸ್ಥಲದಲ್ಲಿ ಆಗಾಗ್ಗೆ ಬರುವ ದಳ ಕುಳ ಸ್ಥಳ ಎಂಬ ಪದಗಳು ಈ ಚೈತನ್ಯಾತ್ಮಕ ಶರೀರದ ದಿವ್ಯಪ್ರಭಾಪುಂಜವನ್ನು ನಿರೂಪಿಸುವ ಈ ಚಕ್ರಗಳ ಪರವಾಗಿರುವವು.

ಸಹಸ್ರಾರಕ್ಕೆ ಕದಳಿ, ಕದಳಿಯ ಬನ ಎಂಬ ಹೆಸರುಂಟು. ಅದರಾಚೆಗೆ ಏನೂ ಇಲ್ಲದ ಬಚ್ಚಬರಿಯ ಬಯಲೊಂದುಂಟು. ಅದುವೆ ನಿರ್ಬಯಲು; ಅದುವೆ ಅರುಹಿನ ಪಿಂಡದ ಮೂಲವು. ಆ ಪೊಳ್ಳು ಪ್ರದೇಶವು ( Cavity ) ಗುಹೆ ಎಂದು ಹೆಸರುಗೊಂಡಿದೆ. ಅಚ್ಚಳಿಯದ ನಿಚ್ಚಳವಾದ ಅರಿವು ಜಾಗ್ರತಗೊಳ್ಳುತ್ತ ಎಲ್ಲ ಅಂಗ ಪ್ರತ್ಯಂಗಗಳಲ್ಲಿ ತಾನೆ ತಾನಾಗಿ ತೊಳಗಿ ಬೆಳಗುತ್ತ ಗುಹಾ ಪ್ರವೇಶವಾದಾಗ, ಅದುವೆ ಅನಿರ್ವಚನೀಯವಾದ ಅರಿವು ಎಂದು ನಿಲುಕಡೆಗೊಂಡಾಗ ಅರಿಯಬೇಕು ಅದರಲ್ಲಿಯ ಪ್ರಕಾಶಪುಂಜದ ಬಗೆಯನ್ನು! ಸಹಸ್ರಕೋಟಿ ಸೂರ್ಯರ ಬೆಳಕನ್ನು ಮೀರಿಸುವ ಬೆಳಕದು ಎಂದು ಶಿವಶರಣರು ಶಿವಯೋಗಿಗಳು ವರ್ಣಿಸಿರುವದನ್ನು. ಸಪ್ತವರ್ಣದ ಲಿಂಗದ ನೆಲೆಯೂ ಅದೇ! ಭಾರತೀಯ ಯೋಗಶಾಸ್ತ್ರವು ಚಕ್ರಗಳಲ್ಲಿ, ದೇವಜ್ಞಾನವು ಪ್ರಾಣಶಕ್ತಿಯಲ್ಲಿ, ವಿಜ್ಞಾನವು ಸೂರ್ಯಪ್ರಕಾಶದಲ್ಲಿ ಬಗೆಬಗೆಯ ಬಣ್ಣಗಳನ್ನು ಕಂಡಿರುವುದಾದರೆ ಅದೆಲ್ಲ ನಿಜವೇ! ಏಳು ಬಣ್ಣಗಳು ಬೆರೆತು ಬಿಳಿಯ ಬಣ್ಣವಾಗುವಂತೆ ಯೋಗಿಗಳು ಕಾಣುವ ವಿವಿಧ ಬಣ್ಣಗಳ ಆಚೆಗಿರುವ ಆ ಬಚ್ಚ ಬರಿಯ ಬೆಳಗು ಆಯಾ ದುಡಿಮೆಯ ಕ್ರಮವನ್ನು ಸೂಚಿಸುವುದು; ಆಯಾ ಅರಿವಿನ ಜಾಗ್ರತಿಯ ಮಟ್ಟವನ್ನು ತೋರಿಸುವುದು. ಯೋಗಿಗಳು ಕಾಣುವ ಈ ಸ್ವಚ್ಛವಾದ ಸೊಬಗಿನ ಪ್ರಕಾಶವು ಕೇವಲ ಜ್ಞಾನದ್ಯೋತಕವಾಗಿಹುದು. ಚಿತ್‌ಪ್ರಕಾಶ ಪರಮಪ್ರಕಾಶ ಚಿಜ್‌ಜ್ಯೋತಿ ಪರಂಜ್ಯೋತಿ ಜ್ಯೋತಿರ್ಲಿಂಗ ಓಂಕಾರಪ್ರಭೆ ಇತ್ಯಾದಿಯಾಗಿ ವರ್ಣಿತವಾಗಿರುವುದೆಲ್ಲ ಈ ಕೇವಲಜ್ಞಾನವನ್ನು ಕುರಿತೇ ಇದೆ. ಈ ಪ್ರಕಾಶಕ್ಕೆ ಪ್ರಾಣಲಿಂಗವೆಂದೂ ಹೆಸರು. ಅನಿಮಿಷದೃಷ್ಟಿಯಿಂದ' 'ಕುರುಹಳಿದ ಕರಸ್ಥಲದ ನಿಬ್ಬೆರಗಿನ (ಅರೆ ತೆರೆದ) ನೋಟ' ದಿಂದ ಪ್ರಾಣಲಿಂಗ ಸಿದ್ಧಿಯು ದೊರಕೊಳ್ಳುವುದು. ಇಂತಹ ಪ್ರಾಣಲಿಂಗಿಯು ತಾನೇ ಭಕ್ತನು, ತಾನೇ ಮುಕ್ತನು, ತಾನೇ ಸಕಲ ಯುಕ್ತನು. ಅಲ್ಲಮಪ್ರಭುವು ಅನಿಮಿಷದೃಷ್ಟಿಯಿಂದಲೇ ಈ ಪ್ರಕಾಶ ಪುಂಜವನ್ನು ಕಂಡಿರುವುದರಿಂದ ಅನಿಮಿಷಯ್ಯನೆ ಅಲ್ಲಮ ಪ್ರಭುವಿಗೆ ಗುರುವೆಂದು ಹೇಳಿರುವರು.[೧೧] ಇದು ರಾಜಯೋಗದ ಮುಂದಿನ ಯೋಗದ—ಶಿವಯೋಗದ

೧೧ ಶೂನ್ಯ ಸಂಪಾದನೆ—ಸಂಪಾದನೆ ೮ ವಚನ ೬೦-೬೧, ಪುಟ ೬೬

ನಿಲವು. ಶಿವಯೋಗದಾಚರಣೆಯಲ್ಲಿ ಆರುಚಕ್ರದ ಅರವಿನ ಪ್ರಭೆಯನ್ನು ಬೆರಸಿ ಏಳನೆಯ ಚಕ್ರದಲ್ಲಿ ತುಳುಕುವ ಈ ಪ್ರಣವ ಪ್ರಭೆಯು— ಈ ಓಂಕಾರ ಪ್ರಭೆಯು ಸಾಮಾನ್ಯವಾಗಿ ನಿರೂಪಿತವಾಗಿರುವ ಇಷ್ಟ-ಪ್ರಾಣ-ಭಾವಲಿಂಗ ಪ್ರಭೆಗಿಂತ ಭಿನ್ನವಾದುದು, ಅದನ್ನು ಇಲ್ಲಿ ಬೆರಸಲಾಗದು.

ಇಂತಹ ಶಿವಯೋಗಿಯ ಅರಿವಿಗೆ ನಿಲುಕವ ಪದವಿದು[೧೨].

ಕೂಡಿದೆ ಗುರುಪದವ ನಾ । ನೀಗಾಡಿದೆನೀ ಭವವ
ಮಾಡಿದೆ ಮನಸಿಗೆ ಪರಮನೊಳೈಕ್ಯವ । ಕೂಡಿದಜನ ಸುಖವ ॥ ಪಲ್ಲ ॥
ಚಿತ್ತವನೊಳಸೆಳೆದು ಸುಖಮಯ । ಚಿತ್‌ಪ್ರಭೆಯೊಳು ಸುಳಿದು
ಚಿತ್ತಿನ ಪರಿಪೂರ್ಣತ್ವವ ತಳೆದು । ಸುರೋತ್ತಮನಾಗುಳಿದು ॥ ೧ ॥
ಹೊರವೃತ್ತಿಯ ಬಿಟ್ಟು ಹೃದಯಾಂ । ತರದೊಳಗದನಿಟ್ಟು
ಪರಮನ ಪ್ರಭೆಯೊಳ್ ಬೆಳಗುವ ದೃಶ್ಯವ । ಪರನೆಂಬುದ ಸುಟ್ಟು ॥ ೨ ॥
ನಾನೇ ಜಗವಾಗಿ ಜಗದೊಳು । ನಾನೇ ನಿಜವಾಗಿ
ನಾನೇ ನನ್ನನು ನೋಡುತ ಕೂಡುತ । ನೀನೆಂಬುದ ನೀಗಿ ॥ ೩ ॥
ಬೆಳಕಿಗೆ ಬೆಳಕಾಗಿ ಮನಸಿನ । ಕಳವಳಗಳು ಪೋಗಿ
ಒಳಹೊರಗೆಂಬುವ ಭಾವಗಳಿಲ್ಲದೆ । ಥಳಥಳಿಸುವನಾಗಿ ॥ ೪ ॥
ಮರಣವು ನನಗಿಲ್ಲ ಮುಂದುಪ । ಕರಣವು ಬೇಕಿಲ್ಲ
ಕರಣವು ಗುರುಶಂಕರನೊಳಗಡಗಲು । ಎರಡೆಂಬುವದಿಲ್ಲ ॥ ೫ ॥

ಈ ಅವಸ್ಥೆಯಲ್ಲಿ ಅನುಭಾವಿಗೆ ವಿಶ್ವದ ಅರಿವು ಲಯವಾಗಿ ಬೆಳಕಿನಲ್ಲಿ ಬಯಲಾಗುವುದರಲ್ಲಿ ಪುರುಷಾರ್ಥವೇನು? ಮುಂದೆ ಈ ವಿಶ್ವದಲ್ಲಿಯ ಬಳಗದ ಗತಿಯೇನು? ಎಂದು ಪ್ರಶ್ನೆಗಳುದ್ಭವಿಸುವವು. ಇದು ಸಾಮಾನ್ಯವಾಗಿ ಪಾಶ್ಚಿಮಾತ್ಯರಿಗೊದಗುವ ತೊಡಕು. ಇಲ್ಲಿ ಬೆಳಕು ತೋರುವುದಲ್ಲದೆ ಜ್ಞಾನವೂ ದೊರೆಕೊಳ್ಳುವುದೆಂಬುದನ್ನರಿತಿರಬೇಕು. ಹಿಂದು-ಇಂದು-ಮುಂದುಗಳೆಲ್ಲ ಒಂದಾಗಿಹ ಭಾವಜ್ಞಾನ ಸ್ಥಿತಿಯು (The Eternal Now) ಉಂಟಾಗುವುದಿಲ್ಲಿ. ಈ ಬಗೆಗೆ ಅಲ್ಲಮಪ್ರಭುವಿನ ಪ್ರಸಾದ ವಾಣಿಯಿದು.

ಸತ್ಯವನೊಳಕೊಂಡ ಮಿಥ್ಯಕ್ಕೆ ಭಂಗ
ಮಿಥ್ಯವನೊಳಕೊಂಡ ಸತ್ಯಕ್ಕೆ ಭಂಗ
ಮನವನೊಳಕೊಂಡ ಜ್ಞಾನಕ್ಕೆ ಭಂಗ
ಜ್ಞಾನವನೊಳಕೊಂಡ ನಿಜಕ್ಕೆ ಭಂಗವುಂಟೇ ಗುಹೇಶ್ವರಾ?[೧೩]

೧೨ ಶಂಕರಾನಂದ ಪದ್ಧತಿ ಪದ ೫೭ ೧೩ ಪ್ರ. ದೇ. ವಚನ ೮೧ ಪುಟ ೩೨೯.

ಇಲ್ಲ! ಜ್ಞಾನವನೊಳಕೊಂಡ ನಿಜಕ್ಕೆ ಭಂಗವಿಲ್ಲ! ನಿಜವಾದ ಪ್ರಪಂಚ-ನಿಜವಾದ ವಿಶ್ವ ಇವುಗಳ ಅರಿವು ಜ್ಞಾನವನೊಳಕೊಂಡ ನಿಜವೇ ಆಗಿಹುದು. ಅಲ್ಲಿ ಭಂಗವಿಲ್ಲ. ಸರ್ವ ವಿಶ್ವವ್ಯಾಪಕವೂ ಸರ್ವ ವಿಶ್ವನಿಯಾಮಕವೂ ಆಗಿರುವ ಇಂತಹ ಅರಿವಿನ ಆಳತೆಗೆ ನಿಲುಕದುದಿಲ್ಲ. ಅಲ್ಲಮಪ್ರಭುವು ಲಕ್ಷ್ಯವಾಗಿರಿಸಿಕೊಂಡು ಅಂಗವಿಸಿಕೊಂಡ ಅರುಹಿನ ಬಗೆಯಿದು. ಗುಹೇಶ್ವರ ಪದದಲ್ಲಿ ಅಡಗಿದ ಗೂಢವಿದು.

ಅಕ್ಕಮಹಾದೇವಿಯ ವಚನಗಳಿಗಿರುವುದು 'ಚೆನ್ನಮಲ್ಲಿಕಾರ್ಜುನ' ಮುದ್ರಿಕೆಯು. 'ಚೆನ್ನ' ಪದವನ್ನು ಒಂದಿಷ್ಟು ಬದಿಗಿರಿಸಿ ಮಲ್ಲಿಕಾ+ಅರ್ಜುನ ಪದಗಳಿಗಿರುವ ಅರ್ಥವನ್ನು ಮನದಂದರೆ ಅನೇಕ ವಿಧವಾಗಿ ಅದರ ಸೊಬಗನ್ನು ಸವಿಯಬಹುದು, ಸ್ವಾರಸ್ಯವನ್ನು ಸವಿಯಬಹುದು. ಮಲ್ಲಿಕಾ ಲತೆಯು ಅರ್ಜುನ ವೃಕ್ಷವನ್ನು ಆಶ್ರಯಿಸುವ ವಿಚಾರವು ಕಾವ್ಯದೃಷ್ಟಿಯಿಂದ ರಮಣೀಯವಾಗಿರುವುದು. ಮತ್ತು ಮಲ್ಲಿಗೆ ಬಳ್ಳಿಯು ಆಧೇಯವಾಗಿ ಅರ್ಜುನ ಮರವು ಆಧಾರವಾಗಿ ಇರುವವೆಂಬ ಸ್ಥೂಲವಾದ ಅರ್ಥವು ಸಹ ಅಷ್ಟೇ ಸೊಗಸಾಗಿರುವುದು. (ಮಲ್ಲಿಕಾ) ಲತೆಯು ಸ್ತ್ರೀ ವಾಚಕವು, ಆದುದರಿಂದ ಅದು ಶಕ್ತಿಪರವಾಗಿಯೂ (ಅರ್ಜುನ) ವೃಕ್ಷವು ಪುರುಷ ವಾಚಕವು, ಆದುದರಿಂದ ಅದು ಶಿವಪರವಾಗಿಯೂ ಅಭಿಧೇಯುವನ್ನು ಪಡೆದಾಗ 'ಮಲ್ಲಿಕಾರ್ಜುನ' ಪದದಿಂದ ಶಿವಶಕ್ತಿಯರ ಅವಿನಾಭಾವಸಂಬಂಧವು ಸೂಚಿತ ವಾಗುವದು[೧೪] ಮಾಘಮಾಸಕ್ಕೆ ಮಲ್ಲಿಕಾ ಎಂದು ಹೆಸರುಂಟು. ಬೆಳೆಗಳು ಮಾಗುವದು, ಮಾಗಿ ಬಾಗುವದು ಸಾಮಾನ್ಯವಾಗಿ ಈ ಕಾಲದಲ್ಲಿಯೇ. ಮಾಗುವ ಬಾಗುವ ಗುಣವು ಭಕ್ತಿಗೆ ಸೇರಿಕೊಂಡುದುದು. ಆದುದರಿಂದ ಮಲ್ಲಿಕಾ ಪದದಿಂದ ಹಣ್ಣಾದ ಹಣ್ಣಾಗಿ ಹೆಣ್ಣಾದ ಭಕುತಿಭಾವವು ಸಂಜ್ಞೆಗೊಳ್ಳುವುದು. ಮಲ್ಲಿಗೆಯ ನರುಗಂಪು ಸದ್ಭಕ್ತಿಯ ತನಿಗಂಪಿನ ನೆನಹನ್ನುಂಟುಮಾಡುವುದಿಲ್ಲವೇ?

ಬಳ್ಳಿಯಾಗಲಿ ಬಳ್ಳಿಗೆ ಬಿಟ್ಟ ಹೂವಾಗಲಿ ನಯವಿನಯಗಳ, ಮಾಧುರ್ಯ ಕೋಮಲತೆಗಳ ಪ್ರತೀಕವು. ಇದು ಭಾವಸುಕುಮಾರತೆಯನ್ನು ಸೂಚಿಸುವುದು. ಮರಕ್ಕೆ ಕಾಠಿಣ್ಯ ಕೆಚ್ಚು ಸ್ಥಿರ ಸ್ಥಾಣು ಎಂಬ ಪರ್ಯಾಯವಾದ ಅರ್ಥನಿರೂಪಣೆಯುಂಟು. ಇದರಿಂದ ಬುದ್ಧಿಗಾಂಭೀರ್ಯ, ಬುದ್ಧಿಸ್ಥೈರ್ಯ ಬುದ್ಧಿಪೌರುಷಗಳು ವಿದಿತವಾಗುವವು. ಭಾವಸುಕುಮಾರತೆಯಿಂದ ಭಕ್ತಿಯ ಬಳವಿಗೆಯೂ ಬುದ್ಧಿ ಪೌರುಷದಿಂದ ಜ್ಞಾನದ ಕೆಚ್ಚೂ ಧ್ವನಿತವಾಗುವವು.

ಮಲ್ಲಿಗೆಯು ಭಾವಸುಕುಮಾರತೆಯ ಸೂಚಕವಾಗಿದ್ದರೂ ಅರ್ಜುನಪದದಿಂದ ಬುದ್ಧಿಪೌರುಷವು ಅದು ಹೇಗೆ ಸೂಚಿತವಾಗುವುದು? ಎಂಬ ಶಂಕೆಯು ಮೊಳೆದೋರಬಹುದು. ಆದರೆ 'ಅರ್ಜುನ' ಪದ ವಾಚಕವಾದ ಬೇರೆ ಬೇರೆ ಶಬ್ದಗಳಿಗಿ

---

೧೪ ಪ್ರ. ಲಿಂ. ಲೀಲೆ ಗತಿ ೨ ಪದ್ಯ ೧೬-೧೪

ರುವ ಅರ್ಥಮಾಧುರ್ಯವನ್ನು ಪರ್ಯಾಲೋಚಿಸಿದರೆ ಇದು ಸ್ಪಷ್ಟವಾಗುವುದು. ಅರ್ಜುನ ಪದಕ್ಕೆ ಮೂಲವಾದ 'ಅರ್ಜ್' ಧಾತುವಿಗೆ 'ಗಳಿಸು, ಹೊಂದು, ಮುಟ್ಟು' ಎಂಬ ಅರ್ಥವುಂಟು. ಗಳಿಸುವುದೇನನ್ನು ? ದುಡ್ಡನಲ್ಲ—ಅನುಭಾವವನ್ನು, ಜ್ಞಾನವನ್ನು ! ಮಹಾಭಾರತಕಾರನ ಮತದಂತೆ ಶುದ್ಧನಾಗಿದ್ದ ಮೂಲಕ ಶುದ್ಧಾಚರಣೆಯಿಂದಿದ್ದ ಮೂಲಕ ಅರ್ಜುನನಿಗೆ ಆ ಹೆಸರು ಬಂತು.೧೫ ಇದರಿಂದ ಅನುಭವದ ಬಟ್ಟೆಯಲ್ಲಿ ಶುದ್ಧಚರಿತೆ ಶುದ್ಧಾಚರಣೆಗಳಿಗೆ ಬುದ್ಧಿಪೌರುಷದ ನೆರವು ಅತ್ಯವಶ್ಯವೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಅರ್ಜುನನಿಗೆ 'ಧನಂಜಯಃ' ಎಂಬುದೂ ಒಂದು ಹೆಸರು. ನಾಡಿಗರನ್ನು ಈಡಾಡಿ ಧನವನ್ನು ಸೂರೆಗೊಂಡು ಅದರ ನಡುವೆ ನಿಲ್ಲು ವುದಕ್ಕೂ ಬುದ್ಧಿಪೌರುಷ ಬೇಕು.೧೬ ಆತ್ಮಧನವನ್ನು ಪಡೆಯಲಿಕ್ಕಂತೂ ಬಲವಾದ ಬುದ್ಧಿಪೌರುಷಬೇಕೆಂಬುದು ನಿರ್ವಿವಾದವು. 'ಪಾರ್ಥೋ ಧನುರ್ಧರಃ'೧೭ ಎಂಬುದು ಅರ್ಜುನನಿಗೆ ಇನ್ನೊಂದು ಹೆಸರು. 'ಧನುರ್ಧರ'ನೆಂದರೆ ಬಿಲ್ಲುಗಾರ. ಬಿಲ್ಲುಗಾರನು ಬಲ್ಪಳ್ಳ ಎದೆಗಾರನಿರಬೇಕೆಂಬುದನ್ನು ಹೇಳಬೇಕೇ ? ಓಂಕಾರವೇ ಬಿಲ್ಲು, ಆತ್ಮನೇ ಬಾಣ, ಬ್ರಹ್ಮನೇ ಗುರಿಯಾಗಿರುವ ಆ ಕಲಿಯ ಬುದ್ಧಿಯನ್ನು ಪೌರುಷವನ್ನು ವರ್ಣಿಸುವುದೇನು ?೧೮ 'ಗುಡಾಕೇಶಃ' ಎಂದು ಆ ಅರ್ಜುನನಿಗೆ ಮತ್ತೊಂದು ಹೆಸರು. 'ಗುಡಾಕಾ' ಎಂದರೆ ಗಾಢನಿದ್ರೆ. ಗುಡಾಕೇಶನು ಗಾಢನಿದ್ರೆಗೆ ಒಡೆಯನು. ವೇದಾಂತಿಗಳ ಪರಿವಿಡಿಯಲ್ಲಿ ಗಾಢನಿದ್ರೆಯೆನಿಸಿದ ಸುಷುಪ್ತ್ಯಾವಸ್ಥೆ (ಗುಡಾಕಾ) ಯಲ್ಲಿ ವಿಶ್ವ-ತೈಜಸ-ಪ್ರಾಜ್ಞ ಎಂಬ ತ್ರಿವಿಧ ಸ್ವರೂಪಗಳಿಂದ ತೋರುವ ಆತ್ಮನು ಪ್ರಾಜ್ಞನಾಗಿ ವ್ಯವಹರಿಸುತ್ತಾನೆ. ಪ್ರಾಜ್ಞನು ಅರುಹಿನ ಮೂರುತಿಯು. ಪ್ರಜ್ಞೆಗೆ ಬುದ್ಧಿಯೆಂದು ಗೀತೆಯ ಮತ.೧೯ ಆದುದರಿಂದ ಗುಡಾಕೇಶ ಪದದಿಂದಲೂ ಬುದ್ಧಿಪೌರುಷವುಳ್ಳವ, ಅರುಹಿನ ಮಹಂತ, ಜ್ಞಾನದ ಪುತ್ಥಳಿ ಎಂಬ ಅರ್ಥಧ್ವನಿಯುಂಟಾಗುವುದು.

ಹೀಗೆ 'ಮಲ್ಲಿಕಾ' ಪದದಿಂದ ಭಕ್ತಿಭಾವಸುಕುಮಾರತೆ, 'ಅರ್ಜುನ' ಪದದಿಂದ ಬುದ್ಧಿಪೌರುಷಯುತ ಜ್ಞಾನವೀರತೆ ಎಂಬ ಅರ್ಥನಿರೂಪಣೆಯಾಗಿ

೧೫. पृथिव्यां चतुरंतायां वर्णो मे दुर्लभः समः ।
करोमि कर्म शुक्लं च तेन मामर्जुनं विदुः ॥
(ಆಪ್ಟೆ ಅವರ ಸಂಸ್ಕೃತ ಕೋಶದಿಂದ)

೧೬. सर्वान् जनपदान् जित्वा वित्तमादाय केवलम् ।
मध्ये धनस्य तिष्ठामि तेनाहुर्मां धनंजयम् ॥
(ಆಪ್ಟೆ ಅವರ ಸಂಸ್ಕೃತ ಕೋಶದಿಂದ)

೧೭. ಭ. ಗೀತೆ. ೧೮–೭೮. ೧೮. ಮುಂಡಕ ೧.೪

೧೯. ಭ. ಗೀತೆ. ೨—೫೪-೫೫ ಮತ್ತು ೫೭-೫೮.

'ಮಲ್ಲಿಕಾರ್ಜನ' ಪದದಲ್ಲಿ ಭಕ್ತಿಜ್ಞಾನಗಳ ಅಚ್ಚಳಿಯದ ಬೆಸುಗೆಯು ವ್ಯಕ್ತವಾಗುವುದು. ಆದರಲ್ಲಿ ಬಸವಣ್ಣನ ಭಕ್ತಿ, ಅಲ್ಲಮಪ್ರಭುವಿನ ಜ್ಞಾನ ಇವು ಒಡಮೂಡಿರುವವು. ತಾಮಸದ ತಿಳಿವುಗೊಂಡಂತಿರುವ ಮಲ್ಲಿಗೆಯ ಅರಳು ಬಳ್ಳಿಯ ಸೂರೆಯಾಗಿರುವಂತೆ, ಸತ್ತ್ವವು ಸೊಬಗುಗೊಂಡಂತಿರುವ ಅರ್ಜನದ ತಿರುಳು ಮರದ ಸಾರವಾಗಿರುವುದು. ಅರಳೂ ತಿರುಳೂ ಬಣ್ಣದಲ್ಲಿ ಬೆಳ್ಪನವನ್ನು ಪಡೆದಿರುವುದರಿಂದ 'ಮಲ್ಲಿಕಾರ್ಜುನ'ವು ಸದ್ಭಕ್ತಿ-ಸುಜ್ಞಾನಗಳ ಸೇರುವೆಯನ್ನು ಬೀರಿ ದೇಸಿವಡೆಯಲಿಕ್ಕಿಲ್ಲವೇ?

ಇನ್ನು 'ಚೆನ್ನ' ಪದದ ಸ್ವಾರಸ್ಯವೇನು? ಚೆನ್ನ! ಚೆನ್ನ! ಏನು ಚೆನ್ನ? ಭಕ್ತಿಜ್ಞಾನಗಳ ಬೆಸುಗೆ ಚೆನ್ನ! ಭಕ್ತಿಯಿಲ್ಲದ ಜ್ಞಾನ, ಜ್ಞಾನವಿಲ್ಲದ ಭಕ್ತಿ ಚೆನ್ನವಲ್ಲವು. ಒಂದಿಲ್ಲದ ಇನ್ನೊಂದು ಎಂದೂ ತಾರಕವಾಗದು. ಆದುದರಿಂದ ಭಕ್ತಿಜ್ಞಾನಗಳ ಬೆಸುಗೆ ಚೆನ್ನ!— ಎಂದು ಪೇಳಲು 'ಚೆನ್ನ-ಮಲ್ಲಿಕಾ-ಅರ್ಜುನ' ಪದಗಳ ಜೋಡಣೆಯುಂಟು ಅಕ್ಕನ ವಚನ ಮುದ್ರಿಕೆಯಲ್ಲಿ.

ಇಂತಹ ಅನುಭವದ ಸವಿಸುಖವನ್ನು ಅಕ್ಕನು ಅಂಗವಿಸಿಕೊಂಡ ಬಗೆಯೂ ಚೆನ್ನ! ಭಕ್ತಿಯಲ್ಲಿ 'ನೀ ನೀ' ಎಂಬುದು ಪ್ರಮುಖವಾಗಿದ್ದರೆ ಜ್ಞಾನದಲ್ಲಿ 'ನಾ ನಾ' ಎಂಬುದು ಪ್ರಾಧಾನ್ಯವಿರುವುದು. ಅಣ್ಣ ಬಸವಣ್ಣನ ಭಕ್ತಿಯ ಬೆಡಗಿನ ನುಡಿಗಳಲ್ಲಿ 'ನೀನು ನೀನು' ಎಂಬುದೇ ಬೀಜಮಂತ್ರವು. ಅಪ್ಪ ಪ್ರಭುರಾಯನು ಭಕ್ತಿಯ ನಿಲವನ್ನು ಮೀರಿದ ಜ್ಞಾನವೀರನು; ಆದುದರಿಂದ ಅವನ ಜ್ಞಾನದ ವೀರವಾಣಿಯಲ್ಲಿ 'ನಾನು ನಾನು' ಎಂಬ ಸುಳುಹು ಪ್ರವೇಶಗೊಂಡಿರುವುದು. ಅಕ್ಕ ಮಹಾದೇವಿಯು ನಾಮ ರೂಪಿನಲ್ಲಿ ಹೆಂಗೂಸಾದರೇನು? ಕ್ರಿಯೆಯಲ್ಲಿ ಕಲಿ, ಭಾವದಲ್ಲಿ ಗಂಡಸು; ಆದುದರಿಂದ ಅವಳ ಇನಿವಾತುಗಳಲ್ಲಿ ವಿನಯ ವೀರತೆಗಳು ಏಕಕಾಲದಲ್ಲಿ ಬೆರಕೆಗೊಂಡು 'ನೀನು ನಾನು' ಎಂಬ ಉಸಿರಿನ ಮರೆಯ ಮನೋಜ್ಞತೆಯನ್ನು ಪಡೆದಿವೆ.

ಆಡುವುದು ಪಾಡುವುದು ಕೇಳುವುದು ಹೇಳುವುದು ನಡೆವುದು ನುಡಿವುದು
ಸರಸ ಸಮ್ಮೇಳವಾಗಿಪ್ಪುದಯ್ಯ ಶರಣರೊಡನೆ
ಚೆನ್ನಮಲ್ಲಿಕಾರ್ಜುನಯ್ಯ ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ
ಲಿಂಗಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು ೨೦

ನಾ ನಿನಗೊಲಿದೆ ನೀನು ಎನಗೊಲಿದೆ
ನೀನು ಎನ್ನನಗಲದಿಪ್ಪೆ ನಾ ನಿನ್ನನಗಲದಿಪ್ಪೆ
ನಿನಗೆ ಎನಗೆ ಬೇರೊಂದು ಠಾವುಂಟೇ?
ನೀನು ಕರುಣಿ ಎಂಬುದ ನಾನು ಬಲ್ಲೆನು

೨೦ ಮ. ದೇ. ಅಕ್ಕನ ವಚನ ೬ ಪುಟ ೨೨

ನೀನಿರಿಸಿದ ಗತಿಯೊಳಗೆ ಇಪ್ಪವಳಾನಯ್ಯ
ನೀನೆ ಬಲ್ಲೆ ಚೆನ್ನಮಲ್ಲಿಕಾರ್ಜುನಯ್ಯ ೨೧

ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ
ನಿನ್ನರಿಯದ ಮುಕ್ತಿಯೇ ನರಕ ಕಂಡೆಯಯ್ಯ
ನೀನೊಲ್ಲದ ಸುಖವೇ ದುಃಖ ಕಂಡೆಯಾ
ನೀನೊಲಿದ ದುಃಖವೇ ಪರಮ ಸುಖ ಕಂಡೆಯಾ
ಚೆನ್ನಮಲ್ಲಿಕಾರ್ಜುನಯ್ಯ
ನೀ ಕಟ್ಟಿ ಕೆಡಹಿದ ಬಂಧನವೆ ನಿರ್ಬಂಧನವೆಂದಿಪ್ಪೆನು ೨೨

ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ ?
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ
ಚೆನ್ನಮಲ್ಲಿಕಾರ್ಜುನ ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ ಮರದೆನಯ್ಯ ೨೩

ಅನುಭವಿಯ ಅರಿವು 'ನೀ ನಾ' ಎಂಬುದರಲ್ಲಿಯೇ ಉಳಿದರೆ ಅದು ಅಖಂಡದ ಲಕ್ಷಣವಲ್ಲ. 'ನೀ ನಾ' ಎಂಬ ಎರಡಳಿದು ತಾನು ತಾನಾಗಿ ಉಳಿಯಬೇಕು. ಖಂಡಿತ ವಳಿದು ಅಖಂಡದಲ್ಲುಳಿಯುವ ಗೂಢವನ್ನು ಅಕ್ಕನಿಗೆ ಬೋಧಿಸಿದವನು ಅಲ್ಲಮ ಪ್ರಭುವು. ಶ್ರೀಗಿರಿಯ ಮಲ್ಲಿಕಾರ್ಜುನನ ನಿಲವನ್ನು ಅಕ್ಕನಿಗೆ ಅರುಹಿಸಿಕೊಟ್ಟವನು ಅಲ್ಲಮಪ್ರಭುವು. ಕದಳಿಯ ಜ್ಯೋತಿರ್ಲಿಂಗದಲ್ಲಿ ಪರಮಪದವಿಯನು ಅಕ್ಕನಿಗೆ ಅನುಗ್ರಹಿಸಿದವನೂ ಅಲ್ಲಮಪ್ರಭುವು. ಆತನ ದಿವ್ಯ ಬೋಧೆಯಿದು:

ನೀನಾನೆಂಬುಭಯ ಸಂಗವಳಿದು ತಾನು ತಾನಾದ
ಶ್ರೀ ಕೂಟವೆಂಬ ಮಹಾಗಿರಿಯ ತುಟ್ಟತುದಿಯ ಮೆಟ್ಟಿನೋಡಲು
ಬಟ್ಟಬಯಲು ಕಾಣಬಹುದು ನೋಡಾ
ಆ ಬಯಲ ಬೆರೆಸುವರೆ
ತ್ರಿಕೂಟ ಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ
ಆ ಕದಳಿಯ ಕಳದಲ್ಲಿ ಒಳಹೊಕ್ಕು ನೋಡಲು
ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ
ನಡೆಯಲ್ಲಿಗೆ ತಾಯೆ !
ಗುಹೇಶ್ವರ ಲಿಂಗದಲ್ಲಿ ಪರಮಪದವಿ ನಿನಗೆ ಸ್ವಯವಹುದು ನೋಡಾ ೨೪

ಇಂತಿದು ವಚನ ಮುದ್ರಿಕೆಗಳಲ್ಲಡಗಿದ ಅನುಭವದ ಇಂಗಿತವು. ಇಂತಹ ಅನುಭವವು ಲಕ್ಷ್ಯವಾಗಿದ್ದಿತು ಶಿವಶರಣರಿಗೆ.

---

೨೧ ಮ. ದೇ. ಅಕ್ಕನ ವಚನ ೮ ಪುಟ ೩೯. ೨೨ ಅದೇ ಗ್ರಂಥ ವಚನ ೪ ಪುಟ ೪೪
೨೩ ಅದೇ ಗ್ರಂಥ ವಚನ ೧ ಪುಟ ೩೬. ೨೧ ಶೂನ್ಯ ಸಂ.–ಸಂಪಾದನೆ ೧೬ ವಚನ ೬೧

# ಮಾತುಗಾರಿಕೆಯು ಮೈಮೆ.

(ಸಂಗ್ರಾಹಕರು— ಶ್ರೀ. ವೀರಭದ್ರಪ್ಪ ಕೊಪ್ಪಳ ಎಂ. ಎ.; ಬಿ. ಟಿ. ಧಾರವಾಡ.)

(ಧಾರವಾಡ ನವಕಲ್ಯಾಣಮಠದ ಶ್ರೀಕುಮಾರಸ್ವಾಮಿಗಳು ಬಿ. ಏ. ಅವರು ತಾರೀಖು ೨೯-೭-೧೯೪೩ನೆಯು ದಿವಸ ಧಾರವಾಡದ ರಾಜಾ ಲಖಮಗೌಡಾ ಸರದೇಸಾಯಿ ಹಾಯಸ್ಕೂಲಿನ ವಕ್ತೃತ್ವಸಂಘದ ಪ್ರಾರಂಭೋತ್ಸವದ ಕಾಲಕ್ಕೆ ಮಾಡಿದ ಭಾಷಣದ ಸಾರಾಂಶವಿದು.)

ಮಾತನಾಡುವದು ಕಲೆ; ಆದರೆ ಮಾತಾಡುವದೆಲ್ಲ ಕಲೆಯಲ್ಲ. ಸಂತೆಯ ಸಪ್ಪಳವು ಸಂಗೀತವಲ್ಲ; ಅದರಂತೆ ಸೂರಿನ ಕಂಬಿಯನ್ನು (*Tuning fork*) ಬಾರಿಸುವುದರಿಂದ ಹೊರಡುವ ಧ್ವನಿಯೂ ಸಂಗೀತವಲ್ಲ. ಆದರೆ ಪಿಯಾನೊದಿಂದ ಹೊರಟ ಸುಸ್ವರ ಸಮ್ಮೇಳನವು ಸಂಗೀತವೆನಿಸಿಕೊಂಬುದು. ಸಂಗೀತವು ಮೂಲದಲ್ಲಿ ಸಪ್ಪಳವೇ ಆಗಿದ್ದರೂ ಅದು ತಾಳಮೇಳ. ಲಯನಯಗಳೊಂದಿಗೆ ಕೂಡಿದಲ್ಲದೆ ಸಂಗೀತವೆನಿಸದು. ಸಂಗೀತದಂತೆ ಮಾತನಾಡುವದೂ ಒಂದು ಕಲೆಯಾಗಿರುವುದರಿಂದ ರೀತಿನೀತಿಯರಿಯದ ಮಾತುಗಾರಿಕೆಯು ಕಲೆಯೆನಿಸದು. ಮಾತಿನ ರೀತಿಗೆ ಮತ್ತು ನೀತಿಗೆ ವೈಖರಿಯೆಂದು ಹೆಸರು. ವೈಖರಿಯಿಂದ ಬೆರೆತ ವಾಣಿಗೆ ವಕ್ತೃತ್ವ (*oratory*) ಎಂದು ಹೇಳಲಾಗುವದು. 'ಮಾತೆಂಬುದು ಜ್ಯೋತಿರ್ಲಿಂಗ' ವೆಂದು ಪ್ರಭುದೇವರು ಹೇಳಿರುವರು. ಇದರಿಂದ ಪ್ರಕಾಶಮಯನಾದ ಪರಶಿವನ ಅರಿವನ್ನು ಬೀರುವ ಸಾಮರ್ಥ್ಯವು ಮಾತಿನಲ್ಲಿ ಇದೆಯೆಂದು ವ್ಯಕ್ತವಾಗುವದು.

ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು, ಭಕ್ತದೇಹಿಕ ದೇವ ಅನಿಮಿಷನಾಗಿ. ಕೂಡಲಸಂಗಮದೇವ ಭಕ್ತನ ನುಡಿಯು ನಡುವೆ ರಾಶಿಯಾಗಿಪ್ಪನು.

ಕೆರೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪು ಕಾಣಬಹುದು. ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು. ನಮ್ಮ ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು.

ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿ

ದರೆ ಲಿಂಗವೊಚ್ಚಿ ಅಹುದಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯಾ.

ಬಸವಣ್ಣನ ಇವೆಲ್ಲ ಮಾತುಗಳಲ್ಲಿ ಮಾತಿನ ಮಹಿಮೆಯು ಒಡಮೂಡಿಹುದು. ಆದುದರಿಂದ ಈ ಮಹಿಮೆಮಯ ಮಾತಿನ ನೆಲೆಕಲೆಗಳನ್ನರಿಯುವದು ಅವಶ್ಯವಾದುದು.

ವಕ್ತೃತ್ವ ಕಲೆಯ ಉಗಮವನ್ನು ಕಾಣಬಯಸುವುದಾದರೆ ಕಲೆಗಳ ಮೂಲಸ್ಥಾನವನ್ನು ಕಂಡುಹಿಡಿಯಬೇಕು. ಕಲೆಯೆಂದರೇನೆಂಬ ಬಗೆಗೆ ಪಾಶ್ಚಿಮಾತ್ಯರು ಕೂಲಂಕಷವಾಗಿ ವಿವೇಚಿಸಿದ್ದಾರೆ. ದೇವನಿರ್ಮಿತ ಸೃಷ್ಟಿಯ ಸೊಬಗನ್ನು ಸವಿಯುವುದರಲ್ಲಿ ಮಾನವನಿಗುಂಟಾದ ಆನಂದದ ನಿರೂಪಣೆಯೇ ಕಲೆಯೆಂದು ರಸ್ಕಿನನು ಹೇಳಿರುತ್ತಾನೆ. (*All great art is the expression of man's delight in God's work, not his own*). ಸೃಷ್ಟಿಕರ್ತನ ಬಗೆಗೆ ಒಪ್ಪಿಕೊಳ್ಳಲಾರದ ಬುದ್ಧಿಗೆ ಸೃಷ್ಟಿಯೇ ಘನವಾಗಿ ಕಾಂಬುದು. ಅದೃಶ್ಯ ವ್ಯಕ್ತಿಗಿಂತ ದೃಶ್ಯಸೃಷ್ಟಿಯತ್ತ ಸಾಮಾನ್ಯವಾಗಿ ದೃಷ್ಟಿಯು ಹರಿಯಿರುವುದು. ಸೃಷ್ಟಿಯಲ್ಲಿ ಹುದುಗಿದ ಸೌಂದರ್ಯಾತಿಶಯವನ್ನರಿಯಲಿಕ್ಕೆ ಬೇಕಾಗುವ ಸಾಧನಸಾಮಗ್ರಿಗಳನ್ನು ಸೃಷ್ಟಿಯೇ ನಿರ್ಮಿಸಿದೆ. ಅವುಗಳ ನೆರವಿನಿಂದ ಇಂಥ ಸೃಷ್ಟಿಯನ್ನು ಇದ್ದಕ್ಕಿದ್ದಂತೆ ಬಣ್ಣಿಸುವದು ಕಲೆಯೆಂದೂ ಹೇಳುವರು. ಆದರೆ ಇಲ್ಲಿ ಸೃಷ್ಟಿಯ ಸೌಂದರ್ಯಾತಿಶಯವನರಿತು ಮನವಾರೆ ಆನಂದಗೊಂಡು ಅದನ್ನು ಈ ಬಣ್ಣನೆಯಿಂದ ವ್ಯಕ್ತಗೊಳಿಸುವುದೇ ಕಲೆಗೆ ಉದ್ದೇಶವೆನ್ನಬೇಕು. ಸೃಷ್ಟಿಯಲ್ಲಿಯ ಅನಂತವಾದ ಅದ್ಭುತ ಚಮತ್ಕಾರಗಳನ್ನು ಕಂಡು ಅಚ್ಚರಿಯೂ (*Admiration*) ಆದರಲ್ಲಿಯ ಭಯಪ್ರದವಾದ ದೃಶ್ಯಗಳನ್ನು ಕಂಡು ಅಂಜಿಕೆಯೂ (*Awe*) ಜೀವನದ ಸೌಕರ್ಯಕ್ಕೋಸುಗ ಅದರಲ್ಲಿ ತೋರಿದ ಒಡವೆಗಳಿಗಾಗಿ ಕೃತಜ್ಞತೆಯೂ (*Gratitude*) ತನಗೆ ನಿಲುಕಲಾರದ ಅದರ ಗೂಢದ ಗಹನತೆಗಾಗಿ ಅಲ್ಪಜ್ಞತೆಯೂ (*Negative self-feeling*) ಮಾನವನ ಆ ಬುದ್ಧಿಯಲ್ಲಿ ಮೂಡುವದು ಸಹಜವಾದುದು. ಮಾನವನು ಈ ವರೆಗೂ ಗಳಿಸಿಕೊಂಡ ಮತ್ತು ಅದರಿಂದ ಹೆಮ್ಮೆಪಟ್ಟುಕೊಳ್ಳಬಹುದಾದ ವಿಜ್ಞಾನವಿಸ್ತಾರದಿಂದ ಸೃಷ್ಟಿಯ ಅಳವು ತಿಳಿದಿಲ್ಲ; ವಿಶ್ವದ ಗತಿಯು ನಿಲುಕಿಲ್ಲ. ಮಾನವನಿಗೆ ಕೈಸೆರೆಯಾದ ಈ ಜ್ಞಾನದಿಂದ ವಿಶ್ವಗತಿಯು ಅವನಿಗೆ ಇನ್ನಷ್ಟು ಗೂಢವಾ

ಗಿಯೇ ಬಿಟ್ಟಿರುವದು. ಆದುದರಿಂದ ಅನಂತವಾದ ಅಖಂಡವಾದ ಶಕ್ತಿಗಳನ್ನು ಗರ್ಭೀಕರಿಸಿಕೊಂಡ ವಿಶ್ವದ ತೋರಿಕೆಗೆ ಅಚ್ಚರಿ ಅಂಜಿಕೆ ಕೃತಜ್ಞತೆ ಅಲ್ಪಜ್ಞತೆಗಳನ್ನು ತಾಳಿ ಅದಕ್ಕಾಗಿ ಬಾಗಿ ನಡೆಯುವ ವೃತ್ತಿಯು ಮಾನವನದಾಗುವದು. ಇದಕ್ಕೆ ಭಕ್ತಿ (*Religious consciousness*) ಎಂದು ಹೇಳಲಾಗುವದು. ಅದೃಶ್ಯ ವ್ಯಕ್ತಿಯಿರಲಿ ದೃಶ್ಯಸೃಷ್ಟಿಯಿರಲಿ ಅದಕ್ಕೋಸಂಗ ಹೀಗೆ ಬಾಗಿ ನಡೆಯುವುದರಲ್ಲಿಯೆ ಭಕ್ತಿರಸದ ಸೊನೆಯು ಸೂಸುವುದು. ಮತ್ತು ಈ ಭಕ್ತಿರಸದಲ್ಲಿಯೇ ಸಕಲ ಕಲೆಗಳ ಉಗಮವುಂಟು. (*The highest art is always the most religious and the greatest artist is always a devout man —Blaikie*) ಹೃದಯವೇ ಭಕ್ತಿರಸಕ್ಕೆ ಬೀಡು. ಭಕ್ತಿರಸಾನುಭವವನ್ನು ತಿಳಿಗೆ ಇಳಿಸಿ ರೂಪಕ್ಕೆ ನಿಲಿಸುವದೇ ಕಲೆಗೆ ಆತ್ಯಂತಿಕ ಗುರಿಯಾಗಿಹುದು. (*The object of art is to crystallize emotion into thought and then fix it in form —Delsarte*) ಕಲೆಯಲ್ಲಿ ಮೇಲಾದುದೆಲ್ಲ ಭಾವ ತುಂಬಿ ಹೊರಹೊಮ್ಮಿದುದು. ಮತ್ತು ಅಂಥ ಭಾವಕ್ಕೇ ಅದು ನೇರವಾಗಿ ಇಳಿಯುವದು. ಅದನ್ನು ವ್ಯಕ್ತಗೊಳಿಸುವ ಭಾವ ವೈಶಾಲ್ಯತೆಯ ಘನತೆಗನುಗುಣವಾಗಿ ಕಲೆಯ ಬೆಲೆಯು ತಿಳಿಯುವದು. (*All that is good in art is the expression of one soul talking to another, and is precious according to the greatness of the soul that utters it —Ruskin*). ಇದು ಕಾರಣ ಅರಿವಿನ ಬೆಳಕನ್ನು ಬೀರುವ ಭಕ್ತಿರಸತೈಲಕ್ಕೆ ಪ್ರಣತಿಯಂತಿಹ ಹೃದಯವೇ ಕಲೆಗಳಿಗೆ ಸೆಲೆಯಾಗಿಹುದು. ವಕ್ತೃತ್ವ ಕಲೆಗಾದರೂ ಈ ಹೃದಯವೇ ಸೆಲೆಯು.

ಹೃದಯದಿಂದ ಹೊರಹೊಮ್ಮುವ ವಾಣಿಯು ಸಬಲವಾಗಿ ಸರಲವಾಗಿ ಸುಲಲಿತವಾಗಿ ಸುಬೋಧವಾಗಿ ಸುರಮ್ಯವಾಗಿ ಇಹುದು. ಮಾತುಗಾರನ ಮಾತಿನಲ್ಲಿ ಜ್ಯೋತಿಯನ್ನು ಕಾಣಬೇಕಾದರೆ ಅದು ಹೃದಯದ ಆಳದಿಂದ ಬೆಳೆದಿರಬೇಕು. ಭಾಷಾಶಾಸ್ತ್ರವು ಇಲ್ಲವೆ ಅಲಂಕಾರಶಾಸ್ತ್ರವು ಅದನ್ನು ಕಲಿಸಲಾರದು. ಎದೆ ತುಂಬಿ ಅದು ಹೊರಹೊಮ್ಮಬೇಕಾದುದರಿಂದ ಅದರಷ್ಟು ಕಷ್ಟಸಾಧ್ಯವಾದುದು ಬೇರೊಂದಿಲ್ಲ.

ಮಾತಿನೊಳಗಣ ಮಾತು ಜ್ಞಾನಿಯ ಮಾತೆ ಮಾಣಿಕವೆನಿಸುದು
ಮಾತ ಪರರೊಳ್ ಬಿಚ್ಚುವಜ್ಞರ ಮಾತು ತೂತೆಂದೆನಿಸುದು
ಮಾತು ಹೃದಯದಿ ಹೊರಡಲಾತ್ಮ ಜ್ಯೋತಿ ತಾನೆ ಪೊಳೆವುದು

ಎಂದು ಹೇಳುವದು ಯಥಾರ್ಥವಾಗಿಯೇ ಇದೆ. ಹೃದಯದಿಂದ ಮೊಳೆವ ಮಾತು ಹೃದಯಕ್ಕೆ ನೇರವಾಗಿ ಇಳಿಯಬೇಕಾದುದರಿಂದ ಅದರ ಮೂಲವನ್ನು ಭಾವವ ಬಿಟ್ಟು ಬೇರೆಡೆಗೆ ಹುಡುಕಲಾಗದು. (*The language of the heart which comes from the heart and goes to the heart is always simple, graceful and full of power, but no art of rhetoric can teach it. It is at once the easiest and most difficult language—difficult, since it needs a heart to speak it; easy, because its periods though rounded and full of harmony are still unstudied-Bovee*). ನುಡಿಯುವ ಮಾತು ಪರಿಣಾಮಕಾರಿಯಾಗಬೇಕಾದರೆ ಕೇವಲ ಹಾವ ಭಾವಗಳು ಪ್ರಾಮುಖ್ಯವಲ್ಲ; ಆದರೆ ಅವು ಭಾವತುಂಬಿ ಹೊರಹೊಮ್ಮಬೇಕು. ಅಲ್ಲಿ ಬುದ್ಧಿಯ ಬೆಳಕು ಭಾವದ ತುಳುಕು ಬೆಳಗಬೇಕು, ತೊಳಗಬೇಕು. ಆದುದರಿಂದ ಭಾವದಿಂದ ವಿಷಯವನ್ನು ಕಲಿಯಬೇಕು; ಭಾವದಿಂದ ವಿಚಾರವನ್ನು ಗ್ರಹಿಸಬೇಕು; ಭಾವದಿಂದ ವಿಚಾರವು ಹೊರಹೊಮ್ಮುತ್ತಿರಬೇಕು. ಶ್ರೀ ಅರವಿಂದರು ಹೇಳುವಂತೆ ಬಂಗಾಲಿಯು ಮನಮುಗ್ನವಾಗಿ ಭಾವತುಂಬಿ ಕಲಿಯುತ್ತಾನೆ. ಅದು ಕಾರಣ ಅವನ ಜೀವನದಲ್ಲಿ ಭಕ್ತಿರಸವು ಹೊರಸೂಸುತ್ತಿದೆ. ಅಂತೆಯೇ ಅವನು ಎಂದೆಂದಿಗೂ ಮುಂದಾಳುವಾಗಿದ್ದಾನೆ, ಇಂದಿಗೂ ಮುಂದಾಳುವಾಗಿದ್ದಾನೆ: ಭಾವಭರಿತನಾಗಿದ್ದವನು ಮಂದಾಳುವೆಂದಿಗೂ ಆಗನು. (*The Bengali has always led and still leads the thought of India, for he has the invaluable gift of thinking with the heart*).

ಮಾತಿನಲ್ಲಿ ಬುದ್ಧಿಯ ಬೆಳಕೂ ಭಾವದ ತುಳುಕೂ ಹೊರಹೊಮ್ಮಿ ಮಾತನಾಡುವ ವಕ್ತೃತ್ವಶಾಲಿಗಳು ಅನೇಕರಾಗಿ ಹೋಗಿದ್ದಾರೆ. ಅಥೆನ್ಸದ ಡೆಮಾಸ್ಥೆನೀಸ, ಇಂಗ್ಲಂಡಿನ ಬರ್ಕ ಮತ್ತು ಭಾರತದ ಸುರೇಂದ್ರನಾಥ ಬಾನರಜಿ ಇವರು ಜನರಲ್ಲಿ ಅಗ್ರಗಣ್ಯರು. ನಿಜವಾದ ವಕ್ತೃತ್ವ

ದಂತಹ ಅಸ್ತ್ರವಿನ್ನೊಂದಿಲ್ಲ. ಸೀಝರನು ತನ್ನ ವಾಕ್ಚಾತುರಿಯಿಂದ ಜನರಲ್ಲಿ ಅಂಜಿಕೆಯು ಮೊಳಕೆಯುನ್ನೂರಿ ಅವರನ್ನು ತನ್ನತ್ತಲೆಳೆಯು ತ್ತಿದ್ದನು. ಆದರೆ ಸಿಸಿರೊ ಅವನು ಜನರಲ್ಲಿ ಪ್ರೇಮವನ್ನು ತೋರಿ ಅವರ ಮೌಢ್ಯವನ್ನು ತೂರಿ, ಅವರನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳು ತ್ತಿದ್ದನು. ಆದರ ಪರಿಣಾಮವಾಗಿ ಸೀಝರನಲ್ಲಿಯೇ ಅವನ ವಾಗ್ಬಾ ಣವು ಅಳಿಯಿತು; ಸಿಸಿರೊನದು ಮಾತ್ರ ಇಂದಿಗೂ ಉಳಿಯಿತು. ರೋಮದ ಜನರು ಸಿಸಿರೊನ ಮಿರುಗುಗೊಂಡ ಸತತವಾಗಿ ಸುರಿಯುವ ವಾಗ್ಧಾರೆಯನ್ನನುಭವಿಸಿ ಅದು ಎಂಥ ಭವ್ಯವಾದ ಭಾಷಣವೆಂದು ಬೆರಳು ಕಚ್ಚಿ ಬೆರಗಾಗಿ ತೆರಳುತ್ತಿದ್ದರು. ಅಥೆನ್ಸದ ಜನರು ಮಾತ್ರ ಡೆಮಾಸ್ಥೆನೀಸನ ಮಾತುಗಳನ್ನು ಕೇಳಿ ಮುಯ್ಯವನ್ನು ತೀರಿಸಿಕೊಳ್ಳ ಲೋಸುಗ 'ಏಳಿರಿ, ನಡಕಟ್ಟಿರಿ, ಫಿಲಿಪನೊಡನೆ ಹೋರಾಡಿರಿ' ಎಂದೆನ್ನುತ್ತ ಚದುರುತ್ತಿದ್ದರು; ಯಾಕಂದರೆ ಅವರ ಹೃದಯದಲ್ಲಿ ನೇರವಾಗಿ ನೆಡು ವಂತೆ ಅವನು ತನ್ನ ಮಾತುಗಳನ್ನು ಆಡುತ್ತಿದ್ದನು, ಮತ್ತು ಆ ಮಾತಿನ ಲಹರಿಯಲ್ಲಿ ತಾನು ತನ್ನನ್ನು ಮರೆತುಬಿಡುತ್ತಿದ್ದನು, ಅವರೂ ಸಹ ತಾವು ತಮ್ಮನ್ನು ತುಂಬಾ ಮರೆತು ಎದುರಿಗಿದ್ದುದನ್ನು ಅರಿಯುವಂತೆ ಮಾಡಿಬಿಡುತ್ತಿದ್ದನು. ಬರ್ಕನಲ್ಲಿ ಭಾವದ ತುಳುಕು ಹೆಚ್ಚಿದ್ದರೆ ಪಿಟ್ಟನಲ್ಲಿ ಬುದ್ಧಿಯ ಬೆಳಕು ಹೆಚ್ಚು ಇರುತ್ತಿತ್ತು. ಪಿಟ್ಟನ ಮಾತುಗಳಿಗಿಂತ ಬರ್ಕನ ಮಾತುಗಳು ಹೆಚ್ಚು ಪರಿಣಾಮಕಾರಿಯಾಗಿರುತ್ತಿದ್ದವು. ಆದುದರಿಂದ ಪಿಟ್ಟನಿಗಿಂತ ಬರ್ಕನು ಉತ್ತಮನಾದ ವಕ್ತಾರನಾಗಿದ್ದನು. ಸುರೇಂದ್ರ ನಾಥ ಬಾನರಜಿಯ ವಾಗ್ಝರಿಯೂ ಬರ್ಕನಂತೆಯೇ ಅವ್ಯಾಹತವಾಗಿ ಸಾಗುತ್ತಿತ್ತು. ಆದುದರಿಂದ ಅವನಿಗೆ ವಂಗದೇಶದ ಬರ್ಕನೆಂದು ಕರೆ ಯುತ್ತಿದ್ದರು. ಡೆಮಾಸ್ಥೆನೀಸನ ತರುವಾಯ ಬರ್ಕ, ಬರ್ಕನ ತರುವಾಯ ಸುರೇಂದ್ರನಾಥ ಇವರು ಅದ್ವಿತೀಯ ವಕ್ತೃಗಳಾಗಿದ್ದರು. ಇವರ ಭಾಷಣ ಗಳಲ್ಲಿ ಭಾವ ಭಾಷೆ ಬುದ್ಧಿಗಳ ಸಮ್ಮೇಳನವು ಒಡೆದುಕಾಣುತ್ತಿತ್ತು.

ಕನ್ನಡ ನಾಡಿನಲ್ಲಿಯೂ ಹಿಂದಕ್ಕೆ ಸುಪ್ರಸಿದ್ಧವಾದ ಭಾವಬುದ್ಧಿ ಗಳ ಬೆಡಗಿನಿಂದ ವೈಭವಶಾಲಿಗಳಾಗಿದ್ದ ವಕ್ತಾರರನೇಕರಿದ್ದರು. ಕ್ರಿ. ಶ. ೧೨ನೆಯ ಶತಮಾನದಲ್ಲಿ ಶಿವಶರಣರು ಸ್ಥಾಪಿಸಿದ ಅನುಭವಮಂಟಪವು ಈಗಿನಂತಹ ವಕ್ತೃತ್ವ ಸಂಸ್ಥೆಗಳನ್ನು ಹೋಲುತ್ತಿತ್ತು. ಅಲ್ಲಿ ಅಧ್ಯಾತ್ಮಿಕ ವಿಷಯಗಳನ್ನು ಕುರಿತು ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ಭಾರತದ

ಎಲ್ಲೆಡೆಗಳಿಂದ ನೆರೆದ ಸ್ತ್ರೀಪುರುಷರಲ್ಲಿ ಚರ್ಚೆ ನಡೆಯುತ್ತಿದ್ದಿತು. ಶಿವಶರಣರು ತಮ್ಮ ಅನುಭವಕ್ಕೆ ವೇದ್ಯವಾದ ಸಂಗತಿಯನ್ನು ಅನುಭವಮಂಟಪಕ್ಕೆ ತಂದು ವಚನರೂಪವಾಗಿ ಮಂಡಿಸುತ್ತಿದ್ದರು. ಅದರ ವಿವೇಚನೆಯಾದ ಬಳಿಕ ಮಥಿತಾರ್ಥವನ್ನು ವಚನಭಂಡಾರಿ ಶಾಂತರಸನು ಕೂಡಿಹಾಕಿ ಬರೆದಿಟ್ಟುಕೊಳ್ಳುತ್ತಿದ್ದನು ಎಂದು ಅನುಭವಮಂಟಪದ ಐತಿಹ್ಯದಿಂದ ತಿಳಿದು ಬರುವದು. ಶೂನ್ಯಸಂಪಾದನೆ ಎಂಬ ಗ್ರಂಥದಿಂದ ಅನುಭವಮಂಟಪದಲ್ಲಿ ನಡೆಯುತ್ತಿದ್ದ ಚರ್ಚೆಗಳ ಸ್ವರೂಪವನ್ನು ಅರಿಯ ಬಹುದು. ವಚನವೆಂದರೆ ಮೂಲತಃ ನುಡಿ, ಮಾತು ಎಂದೇ ಅರ್ಥ ವಾಗುತ್ತದೆ. ಶಿವಶರಣರು ಭಾವಶುದ್ಧವಾಗಿ ಅನುಭವ ಮಂಟಪದಲ್ಲಿ ನುಡಿದ ಮಾತುಗಳು ನೇರವಾಗಿ ಹೃದಯದಿಂದಿಳಿದು ಹೃದಯಕ್ಕೆ ತಟ್ಟುವ ಸಾಮರ್ಥ್ಯವುಳ್ಳವುಗಳು. ಆದುದರಿಂದ ಇಲ್ಲಿ ಭಾವಭಾಷೆಗಳ ಸಮನ್ವಯವನ್ನು ಕಾಣಬಹುದು. ಸಾಹಿತ್ಯ ದೃಷ್ಟಿಯಿಂದ ಇವು ಬರೆ ಯಲ್ಪಟ್ಟವುಗಳಾಗಿರದಿದ್ದರೂ ಉತ್ಕೃಷ್ಟಭಾವನಾವಿಕಾಸವೇ ಲಕ್ಷಣವಾಗಿ ರುವ ಉತ್ತಮ ಸಾಹಿತ್ಯವೆನಿಸಲು ತಕ್ಕವಾಗಿರುವವು. ಪಾಂಡಿತ್ಯದ ಬಿರುದು ಬಾವುಲಿಗಳು ಶಿವಶರಣರಿಗಿರದಿದ್ದರೂ ಅವರ ಶಬ್ದಗಳಲ್ಲಿ ಶಕ್ತಿಯಿದೆ; ಅವರ ನುಡಿಯಲ್ಲಿ ಬೆಡಗಿದೆ; ಅವರ ಮಾತಿನಲ್ಲಿ ಜ್ಯೋತಿಯಿದೆ; ಅವರ ವಾಣಿಯಲ್ಲಿ ವೈಶಿಷ್ಟ್ಯವಿದೆ; ಅವರ ವಿಚಾರ ಸರಣಿಯಲ್ಲಿ ನಾವೀನ್ಯತೆಯಿದೆ. ಭಾವದಿಂದ ಗ್ರಹಿಸಿ ಬಳಸಿದ ಅವರ ಮಾತು ವ್ಯಕ್ತಿ ಮತ್ತು ಜನಸಾಮಾನ್ಯದ ಭಾವದೋಷವನ್ನು, ಆಚಾರಹೀನತೆ ಯನ್ನು ಖಂಡಿಸುವಲ್ಲಿ ನಿಶಿತವಾದ ಶಸ್ತ್ರವಾಗಿ ಅಸ್ತ್ರವಾಗಿ ಅಲಗಾಗಿ ಅಂಕುಶವಾಗಿ ಭಾಲೆಯಾಗಿ ಬರ್ಚಿಯಾಗಿ ಪರಿಣಮಿಸುತ್ತಿತ್ತು. ಗುಣ ಸಂಪಾದನೆಯ ಮಾಡುವಲ್ಲಿ ಅದು ತಿದ್ದಿ ಮುದ್ದಾದ ಮಾಟಾದ ನೀಟಾದ ಸುಲಲಿತವಾದ ಸುರಮ್ಯವಾದ ಸ್ತುತಿಯಾಗಿ ಶೋಭಿಸುತ್ತಿತ್ತು. ಮತ್ತು ಲಿಂಗಾಂಗ ಸಾಮರಸ್ಯದ ಬಗೆಯನ್ನರುಹುವಲ್ಲಿ ಅದು ಅಪ್ತವಚನ ವಾಗಿ ಶಾಸ್ತ್ರವಾಗಿ ಮಿರುಗುಗೊಳ್ಳುತ್ತಿತ್ತು. ಅನುಭವಮಂಟಪದಲ್ಲಿ ಬಳ ಸುತ್ತಿದ್ದ ಮಾತುಗಳ ವೈಮೆ ಇಂತಿಹುದು.

ವಕ್ತೃತ್ವ ಕಲೆಯನ್ನು ಸ್ವಾಧೀನಪಡಿಸಿಕೊಳ್ಳಬಯಸುವವರಿಗೆ ಭಾವ ಶುದ್ಧವಾಗಿ ವಿಚಾರಿಸಿ, ಭಾವಬದ್ಧವಾಗಿ ಆ ವಿಚಾರಗಳನ್ನು ಮಂಡಿ ಸುವ ಅಭ್ಯಾಸವನ್ನಿಟ್ಟುಕೊಳ್ಳುವದು ಪ್ರಾಮುಖ್ಯವಾದುದು.

---

# ಸಾಹಿತ್ಯ ಮತ್ತು ಸ್ವಾನುಭಾವ.

ಸಂಗ್ರಾಹಕರು:—ವೀರಭದ್ರಪ್ಪ ಕೊಪ್ಪಳ ಎಂ. ಎ., ಬಿ. ಟಿ, ಧಾರವಾಡ

(ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ತಾ. ೬-೫-೧೯೪೩ ನೆಯ ದಿವಸ ಬಸವಜಯಂತಿ ಉತ್ಸವದ ಸಂದರ್ಭದಲ್ಲಿ ಧಾರವಾಡ ಲಿಂಗಾಯತ ನಗರಭವನದಲ್ಲಿ ಮೇಲ್ಕಂಡ ವಿಷಯುವನ್ನು ಕುರಿತು ಮಾಡಿದ ಭಾಷಣದ ಸಾರಾಂಶವಿದು)

ಜೀವನಕ್ಕೂ ಸಾಹಿತ್ಯಕ್ಕೂ ನಿಕಟವಾದ ಸಂಬಂಧವಿರುವಂತೆ ಜೀವನಕ್ಕೂ ಸ್ವಾನುಭಾವಕ್ಕೂ ಅತ್ಯಂತ ನಿಕಟವಾದ ಸಂಬಂಧವಿರುವುದು. ಕೇವಲ ಜನಮನರಂಜನೆಯೊಂದರಿಂದ ಸಾಹಿತ್ಯದ ಗುರಿಯು ಸಾಧಿಸಿದಂತಾಗುವದಿಲ್ಲ. ಅದರ ಉಚ್ಚವಾದ ಧೇಯವು ಉತ್ಕೃಷ್ಟಭಾವನಾವಿಕಾಸದಿಂದ ಉದ್ಧಾರಕಾರ್ಯವನ್ನು ನೆರವೇರಿಸುವುದರಲ್ಲಿದೆ. ಇದು ಸಾಧ್ಯವಾದಷ್ಟು ಮಟ್ಟಿಗೆ ಸಾಹಿತ್ಯದಲ್ಲಿ ತರಗತಿಗಳುಂಟಾಗುವವು. ಬಸವಣ್ಣ ಮೊದಲಾದ ಶಿವಶರಣರ ವಚನಗಳಲ್ಲಿ, ಹರಿಹರದೇವನ ರಗಳೆಗಳಲ್ಲಿ ಸಾಹಿತ್ಯದ ಲಕ್ಷಣಗಳ ಜೊತೆಗೆ ಉತ್ಕೃಷ್ಟ ಭಾವನಾವಿಕಾಸಕ್ಕೆ ಅವಕಾಶವಿರುವದನ್ನು ಮನಗಾಣಬಹುದು. ಇಲ್ಲಿ ಸಾಹಿತ್ಯ ಮತ್ತು ಸ್ವಾನುಭಾವ ಇವುಗಳ ಸಂಗಮವುಂಟು. ಚಿತ್ತವೃತ್ತಿಪವಿತ್ರೀಕರಣವೇ (*Sublimation*) ಶ್ರೇಷ್ಠ ಸಾಹಿತ್ಯದ ಉಚ್ಚತಮವಾದ ಗುರಿಯಾದರೆ, ಚಿತ್ತವೃತ್ತಿನಿರೋಧ (*Spiritualisation*) ಸ್ವಾನುಭಾವಕ್ಕೆ ಗುರಿ. ಒಂದರಿಂದ ಭಾವಾಂತರವು (*Transformation*) ಸಾಧಿಸಿದರೆ, ಇನ್ನೊಂದರಿಂದ ಭಾವಾತೀತ ಸ್ಥಿತಿಯು (*Transcendence*) ಸಾಧ್ಯವಾಗುವದು. ಭಾವಾಂತರಗೊಳ್ಳುವದಾಗಲಿ, ಭಾವಾತೀತ ಸ್ಥಿತಿಯನ್ನು ಪಡೆಯುವದಾಗಲಿ ಪರಸ್ಪರ ವಿರೋಧವಾದವುಗಳಲ್ಲ; ಪೋಷಕವಾದವುಗಳು. ಈ ದೃಷ್ಟಿಯಿಂದ ಸಾಹಿತ್ಯಕ್ಕೂ ಸ್ವಾನುಭಾವಕ್ಕೂ ಎಷ್ಟೊಂದು ಪರಸ್ಪರ ಮೈತ್ರಿ ಇದೆ ಎಂಬುದು ವ್ಯಕ್ತವಾಗುತ್ತದೆ.

ಜಾಗರದಲ್ಲಿಯಾಗಲಿ ಸ್ವಪ್ನದಲ್ಲಿಯಾಗಲಿ, ಜ್ಞಾನದ ವ್ಯವಹಾರಕ್ಕೆಲ್ಲ ಇಂದ್ರಿಯಗಳ, ಅದರಲ್ಲಿ ಪ್ರಾಮುಖ್ಯವಾಗಿ, ಸ್ಪರ್ಶದ ಬಳಕೆಯೇ ಕಾರಣವು. ಜೀವನದ ಸಾಮಾನ್ಯವಾದ ವ್ಯವಹಾರವೆಲ್ಲ ಈ ಇಂದ್ರಿಯ ಜನ್ಯ ಜ್ಞಾನದಿಂದಲೇ ಸಾಗಿರುವುದು. ಇಂಥ ಜ್ಞಾನಕ್ಕೆ ವೃತ್ತಿಜ್ಞಾನವೆಂತಲೂ

೨

ಹೆಸರು. ಜಾಗರದಲ್ಲಿಯು ವ್ಯವಹಾರಕ್ಕೆ ಮೂಲವಾಗಿರುವ ವಿವೇಕದ ನೆರವಿನಿಂದ ಮರೆಮಾಜಲು ಶಕ್ಯವಿರುವ ಇಂದ್ರಿಯವೃತ್ತಿಗಳನ್ನು ಸ್ವಪ್ನ ಸೃಷ್ಟಿಯಲ್ಲಿ ತಡೆಯಲೂ ಪರಿವರ್ತನೆಗೊಳಿಸಲೂ ಸಾಮಾನ್ಯರಿಗೆ ಶಕ್ಯವಿಲ್ಲ. ಜಾಗರದಲ್ಲಿ ನಮಗೆ ಸಹ್ಯವಾದುದೂ ಅದರಂತೆ ಅಸಹ್ಯವಾದುದೂ ಸ್ವಪ್ನ ದಲ್ಲಿ ತೋರಬಲ್ಲದು; ಅರ್ಥಾತ್ ಜಾಗರವನ್ನು ಸ್ವಾಧೀನಪಡಿಸಿಕೊಂಡಂತೆ ಸ್ವಪ್ನವನ್ನು ಕೈಯಲ್ಲಿಟ್ಟುಕೊಳ್ಳುವದು ಸಾಧ್ಯವಿಲ್ಲ. ಅದಕ್ಕಾಗಿ ಸಾಧನೆ ಬೇಕು, ಕಟುತರವಾದ ಸಾಧನೆ ಬೇಕು. ಅದನ್ನು ಸ್ವಾನುಭಾವಿಯು ಜೀವನ ಕ್ರಮದಲ್ಲಿ ಕಾಣಬಲ್ಲೆವು. ಸಾಹಿತಿಯಾದವನು ವೃತ್ತಿಜ್ಞಾನ ವನ್ನು ಹಸನಾಗಿ ಬಣ್ಣಿಸಬಲ್ಲನು, ಆದರೆ ಬದಲು ಮಾಡಲಾರನು. ಸಾಹಿತಿಯು ನೆರವಿನಿಂದ ಇಂದ್ರಿಯಸನ್ನಿಕರ್ಷಜ್ಞಾನದ ಹುರುಡನ್ನು ತಿಳಿದು ಪ್ರಾತಿಭ ಚಕ್ಷುರುನ್ಮೀಲನಕ್ಕೆ ಸ್ವಾನುಭಾವಿಯು ಗುರಿಯಿಡುವನು, ಅನಿ ಮಿಷದೃಷ್ಟಿಯನ್ನು ಅರಳಿಸಿಕೊಳ್ಳುವನು. ಅವನಲ್ಲಿ ಕುರುಹಿನ ಸೋಂಕಿ ನಿಂದ ಅರುಹು ಬೆಳಗುವ ಗೂಢವು ಪುಟಗೊಳ್ಳುವುದು; ವಿಷಯಗ್ರಹಣ ಗೊಳ್ಳುವ ಇಂದ್ರಿಯ ಶಕ್ತಿಯು — ಸಾಂಖ್ಯರ ತನ್ಮಾತ್ರವು — ಚಿತ್‌ಪ್ರಕಾಶ ಶಕ್ತಿಯಲ್ಲಿ ಪರಿವರ್ತನಗೊಳ್ಳುವುದು. ಅಂಥ ಸ್ವಾನುಭಾವಿಯಲ್ಲಿ ಶಿವಶರಣರ ಪ್ರಾಣಲಿಂಗಿಯ ನಿಲವನ್ನು ಅರಿಯಬಹುದು. ಅವನಲ್ಲಿ ಇಂದ್ರಿಯಗಳು ವಿಷಯಗಳತ್ತ ಸಾಗದೆ, ಅವನ ಅನಿಮಿಷದೃಷ್ಟಿಯ ಅರಳಿನಲ್ಲಿ, ಅವನ ಪ್ರಾತಿ ಭಚಕ್ಷುರುನ್ಮೀಲನದಲ್ಲಿ ವಿಷಯಗಳ ಮತ್ತು ಅವಕ್ಕೆ ಸಂಬಂಧಿಸಿದ ದೇಶ ಕಾಲ ಅವಸ್ಥೆಗಳ ಅರಿವು ತಾನೆ ತಾನಾಗಿ ಸ್ಫುರಣಗೊಳ್ಳುವುದು; ಈ ಚಿತ್ ಪ್ರಕಾಶದ ಪರಾಶಕ್ತಿಯು ತೊಳಗಿ ಬೆಳಗುವುದು. 'ಎಲ್ಲರೊಳು ನೀನೆ ಇರುವೆ. ಎಲ್ಲವ ನೀ ವ್ಯಾಪಿಸಿರುವೆ' ಎಂಬ ಅನುಭವವು ಅವನಲ್ಲಿ ಕರಿಗೊ ಳ್ಳುವುದು. ಅವನ ಈ ಜ್ಞಾನವು ಇಂದ್ರಿಯಜನ್ಯ ಜ್ಞಾನವಲ್ಲ; ಆದುದರಿಂದ ಅದು ಅತಂತ್ರ ಜ್ಞಾನವಲ್ಲ. ಅದು ಗ್ರಂಥಸ್ಥವಾಗಿಹ ಆಗಮಜ್ಞಾನವಲ್ಲ; ಆದುದರಿಂದ ಶ್ರುತಜ್ಞಾನವೂ ಅಲ್ಲ. ಅದು ದೇವೋನ್ಮಾದದ ನಿಬ್ಬೆರಗಿನಲ್ಲಿ ಹೊರಹೊಮ್ಮುವ, ಶುದ್ಧಾತ್ಮಕನ ಅರಿವಿನ ವ್ಯವಹಾರದಲ್ಲಿ ತಲೆದೋರುವ ಸಮ್ಯಕ್‌ಜ್ಞಾನವು; ಆದುದರಿಂದ ಅದು ಸ್ವಾನುಭಾವ ಜ್ಞಾನವು. ಅತಿ ಮಾನಸವಿಜ್ಞಾನವೆಂದರೂ ಇದುವೇ! ಸಾಹಿತ್ಯವು ಗ್ರಂಥಸ್ಥವಾಗಬಲ್ಲದು; ಆದರೆ ಸ್ವಾನುಭಾವವು ಗ್ರಂಥಸ್ಥವಾಗಲು ಶಕ್ಯವಿಲ್ಲ. ಸ್ವಾನುಭಾವವು ಜೀವಂತ ವ್ಯಕ್ತಿಗಳ ಹೃದಯಸ್ಥವಾಗಿಹುದು. ಸಾಹಿತಿಯ ಜ್ಞಾನವು ವೃತ್ತಿಗೆ ಸಂಬಂಧಿಸಿಹುದರಿಂದ ಅದು ಖಂಡಿತವಾಗಿಹುದು, ಪರಿಮಿತವಾಗಿ

ಹುದು, ಜಡವಾಗಿಹುದು, ಮಂದಗಮನವುಳ್ಳದು. ಆದರೆ ಸ್ವಾನುಭಾವಿಗೆ ನಿಲುಕುವ ಜ್ಞಾನವು ಅಖಂಡವಾದುದು, ಅಪರಿಮಿತವಾದುದು, ಸ್ಫುರಣೆಯಿಂದ ಕೂಡಿದುದು, ತ್ವರಿತ ಗತಿಯುಳ್ಳದು ಅವನ ಅರಿವಿನ ಕಣ್ದೆರವಿನಲ್ಲಿ ಸೃಷ್ಟಿಯು ಕ್ಷಣಕ್ಷಣಕ್ಕೆ ಹೊಸಹೊಸದಾಗಿ ಕಂಗೊಳಿಸುವುದು. ಸಾಹಿತಿಯಲ್ಲಿ ಸಹ ಸೃಷ್ಟಿಯನ್ನು ಹೊಸತಾಗಿ ಕಾಣುವ ನವದೃಷ್ಟಿಯಿದ್ದರೂ ಅದು ಸೃಷ್ಟಿಯನ್ನು ಇದ್ದಕ್ಕಿದ್ದಂತೆ ಕಾಣಲರಿಯದು. ದೋಷವಳಿದುಕೊಳ್ಳದ ಅವನ ದೃಷ್ಟಿಗೆ ಅದು ತಿರುವುಮುರುವಾಗಿ ತೋರುವುದು. ಆದುದರಿಂದ ಅವನ ಬಣ್ಣನೆಯಲ್ಲಿ ಯಥಾರ್ಥತೆಯು ರೂಪಗೊಳ್ಳದು. ಅದು ಕೇವಲ ಸತ್ಯದ ಆಭಾಸವು. ಆದರೆ ದೃಷ್ಟಿಗಾವರಿಸಿದ ಮರಹಿನ ಪರಿಯನು ಓರೆಗೊಳಿದ ಸಮ್ಯಕ್‌ಜ್ಞಾನಿಯ ದೃಷ್ಟಿಗೆ ಸೃಷ್ಟಿಯು ಇದ್ದಕ್ಕಿದ್ದಂತೆಯೇ ಕಾಣುವುದು; ಮತ್ತು ಅವನ ಆ ದೃಷ್ಟಿಗೆ ಸೃಷ್ಟಿಯಲ್ಲಿಯ ನಾವೀನ್ಯತೆಯು ಸ್ಪಷ್ಟವಾಗುವುದು. ‘ದಿಟಪುಟ ಭಕುತಿಸಂಪುಟ ನೆಲೆಗೊಳ್ಳದಾಗಿ ಟೀವಕ ಟಂಬಕನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ’ ಎಂಬುದು ಅವನ ಸುಜ್ಞಾನ ದೃಷ್ಟಿಗೆ ನಿಲುಕಿಹುದು. ಆದುದರಿಂದ ಸೃಷ್ಟಿಯ ಬಗೆಗೆ ಇಂಥ ಸಮ್ಯಕ್ ದೃಷ್ಟಿಯನ್ನು ಪಡೆಯುವದೇ ಸ್ವಾನುಭಾವಿಗೆ ಇಷ್ಟವಾಗಿಹುದು, ಆದುದರಿಂದಲೆ ಅವನು ಇಷ್ಟಲಿಂಗಪೂಜಕನು. ಅವನ ಆ ಅಖಂಡವಾದ ಆ ಅಪರಿಮಿತವಾದ ಆ ಸ್ಫುರಣಾತ್ಮಕವಾದ ಆ ತ್ವರಿತಗತಿಯ ಸಮ್ಯಕ್‌ಜ್ಞಾನದ ದೆಸೆಯಿಂದ ಅವನು ಪರಿಪೂರ್ಣ ಜಂಗಮವೆನಿಸಿಕೊಳ್ಳುವನು. ಸಾಹಿತಿಗೆ ಜಡವಾದ ಇಂದ್ರಿಯಗಳ ಬಳಕೆಯಿಂದ ರಸಾಸ್ವಾದನೆ (*Emotion*) ಪಡೆಯುವದೇ ಜೀವನದ ಆತ್ಯಂತಿಕ ಗುರಿಯಾದರೆ, ಸ್ವಾನುಭಾವಿಗೆ ಅರುಹಿನ ಸೋಂಕಿನಿಂದ, ಪಾರದರ್ಶಕವಾದ ಇಂದ್ರಿಯಗಳ ಬಳಕೆಯಿಂದ, ನಿಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿಯಿಂದ, ಸ್ಫುರಣಾತ್ಮಕ ಜ್ಞಾನದಿಂದ, ಸಮರಸ (*Intuition*) ಹೊಂದುವದೇ ಜೀವನದಲ್ಲಿ ಪರಮಾದರ್ಶವಾಗಿಹುದು. ಈ ಮೇಳದಲ್ಲಿ ಸಾಹಿತಿ ಮತ್ತು ಸ್ವಾನುಭಾವಿ ಇವರ ದೃಷ್ಟಿಗಳಲ್ಲಿ ಹಿರಿದುಕಿರಿದುಗಳನ್ನರಿತುಕೊಳ್ಳಬಹುದು.

(ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿಯ ಸಾಹಿತ್ಯ ಸಮಿತಿಯವರು ಅಚ್ಚುಗೊಳಿಸಿದ ಹರಿಹರದೇವನ ರಕ್ಷಾಶತಕ ಮತ್ತು ಪಂಪಾಶತಕ ಇವನ್ನು ಶ್ರೀ ಕುಮಾರಸ್ವಾಮಿಗಳು ಪ್ರಕಟಗೊಳಿಸುವ ಅದೇ ಸಮಯ

ದಲ್ಲಿ ಶತಕಗಳ ಬಗೆಗೆ ಆಗ ತಾನೇ ತಮಗೆ ಸ್ಫುರಣೆಗೊಂಡ ಸಂಗತಿಯನ್ನು ಹೀಗೆ ಹೇಳಿದರು.)

ಒಂದು ಇದು ಯಾವಾಗಲೂ ವ್ಯಕ್ತಿವಾಚಕವಾದುದು. ವಿಶ್ವದಲ್ಲಿ ಅಡಕವಾಗಿಹ ಸಂಗತಿಗಳನ್ನು ಒಂದೊಂದಾಗಿ ಗಣಿಸಬಹುದು. ಆದರೆ ಇಡಿಯ ವಿಶ್ವವು ಅಪಾರವಾದುದರಿಂದ ಅದು ನಮ್ಮ ತಿಳಿಯ ಅಳವಿಗೆ ಒಳಪಡದು. ಅದರ ಬಗೆಗೆ ನಮ್ಮ ದೃಷ್ಟಿಯು ಶೂನ್ಯತೆಗೊಳ್ಳುವುದು. ಆದುದರಿಂದ ೧ ವ್ಯಕ್ತಿವಾಚಕವಾದರೆ, ೧ ರ ಮುಂದೆ ಬರುವ ಶೂನ್ಯದೊಡನೆ ತೋರುವ ೧೦ ವಿಶ್ವವಾಚಕವಾಗಿಹುದು. ಒಂದರ ಮುಂದೆ ಬರುವ ಶೂನ್ಯವು ವಿಶ್ವವು ಅನಂತವಾಗಿಹುದೆಂಬದನ್ನು ಸೂಚಿಸುವುದು. ಜೀವ ಜಗತ್ತು ದೇವ ಇವುಗಳಲ್ಲಿ ದೇವನು ಜೀವನಲ್ಲಿಲ್ಲ, ಆದರಂತೆ ಅವನು ಜಗತ್ತಿನಲ್ಲಿಯೂ ಇಲ್ಲ; ಅವನ ನಿಲವು, ವ್ಯಕ್ತಿವಿಶ್ವಗಳನ್ನು ಮೀರಿ ಆಚೆಗಿಹುದು. ಜೀವ ಭಾವವಳಿದಲ್ಲಿ, ಜಗತ್ತಿನ ಕಾಠಿಣ್ಯವು ಕರಗಿದಲ್ಲಿ ದೇವನ ನಿಲವನ್ನು ಅಳೆಯಲು ಅವಕಾಶವುಂಟು. ದೇವನನ್ನು ಕಂಡಿಹೆನು ಎಂಬುದು ಕೇವಲ ಕಲ್ಪನೆ! ಅಂಥವನು ಕಂಡಿರುವುದು ತನ್ನ ಕಲ್ಪನೆಯ ದೇವನನ್ನು ಮಾತ್ರ! ದೇವನನ್ನು ಕಾಣಲಿರುವೆನು ಎಂಬ ಹಂಬಲದಲ್ಲಿ ಆನಂದವಿರುವಂತೆ ಕಂಡಬಳಿಕ ಆ ಆನಂದವಿಲ್ಲ; ಅದು ಅಲ್ಲಿಯೇ ಪರ್ಯವಸಾನಗೊಳ್ಳುವುದು; ಅದರಂತೆ ದೇವನನಿಲವೂ ಆಗಲೇ ಖಂಡಿತವಾಗುವುದು. ಮಾನವನು ತನ್ನ ನಿಲವನ್ನು ತಾನು ತಿಳಿದಷ್ಟುಮಟ್ಟಿಗೆ ದೇವನ ನಿಲವನ್ನು ಕಾಣುವನು. ತನ್ನ ನಿಲವಿನ ವೈಶಾಲ್ಯತೆಯಲ್ಲಿ ದೇವನ ನಿಲವಿನ ವೈಶಾಲ್ಯವಿದೆ. ಮಾನವನ ಖಂಡಿತವಾದ ಕಲ್ಪನೆಗೆ ದೇವನು ಮೂಲತ ಅಖಂಡನು, ಅಳತೆಗೆ ನಿಲುಕದವನು ಎಂಬುದು ಹೊಳೆದಾಗಲೆ ಪ್ರಗತಿಗೆ ಮೊದಲಹುದು. 'ಅತ್ಯತಿಷ್ಠದ್ದಶಾಂಗಲನು' ಎಂದು ಶ್ರುತಿಗಳು ದೇವನನ್ನು ವರ್ಣಿಸುವ ರಹಸ್ಯವೂ ಕೂಡ ದೇವನ ಅಖಂಡತೆಯನ್ನೇ ವ್ಯಕ್ತಗೊಳಿಸುವುದು. ರೂಪಕ್ಕೆ ನಿಲುಕದ ದೇವನನ್ನು ರೂಪಿಸಲು ಯತ್ನಿಸಿದರೆ, ಅದು ಶೂನ್ಯವೇ! ೧೦೦ ರ ಕಲ್ಪನೆಯಲ್ಲಿ ಈ ಗೂಢವಿದೆ. ಜೀವ ಜಗತ್ತು ದೇವ–ವ್ಯಕ್ತಿ ವಿಶ್ವವಿಶ್ವೋತ್ತೀರ್ಣ ಪರಶಿವ ಇವುಗಳ ಈ ಗೂಢವನ್ನು ಎದುರಿಟ್ಟುಕೊಂಡೇ ಕವಿಗಳು ಶತಕದ ಸಾಹಿತ್ಯವನ್ನು ನಿರ್ಮಿಸಿರಬೇಕು. ಹರಿಹರದೇವನಾಗಲಿ ಇನ್ನಾವ ಮಹಾನುಭಾವಿಯಾಗಲಿ ಬರೆದಿಹ ಶತಕಗಳ ಗೂಢವು ಇಂಥ ಅಗಾಧವಾದ ಅನುಭವದಿಂದ ಕೂಡಿದ್ದಾಗಿರಬೇಕು.

---

# ಸಾಹಿತ್ಯ ಪ್ರಪಂಚದಲ್ಲಿ ವಚನಗಳ ಸ್ಥಾನ

ಸಂಗ್ರಾಹಕರು: ಪೀ. ರು. ಕೊಪ್ಪಳ, ಎಂ. ಎ., ಬಿ. ಟಿ., ಮುಖ್ಯ ಅಧ್ಯಾಪಕರು,
ಆರ್. ಎಲ್. ಎಸ್. ಹಾಯಸ್ಕೂಲ, ಧಾರವಾಡ.

( ಧಾರವಾಡದ ನವಕಲ್ಯಾಣಮಠದ ಶ್ರೀ ಕುಮಾರ ಸ್ವಾಮಿಗಳು ಮೂರು ಸಂದರ್ಭಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಮಾಡಿದ ಭಾಷಣಗಳ ಸಾರಾಂಶವಿದು. )

ಜೀವನವನ್ನು ಶಬ್ದ ಸಂಗ್ರಹದಿಂದ ವರ್ಣಿಸಬಹುದಲ್ಲದೆ ಅದನ್ನೊಂದು ವ್ಯಾಖ್ಯೆಯಿಂದ ತಿಳಿಯಪಡಿಸುವುದಾಗುವದಿಲ್ಲ. ಜೀವನದ ವ್ಯವಹಾರದಿಂದಲೂ ಅದರ ಸ್ವರೂಪವನ್ನು ಕಾಣಬಹುದು. ಈ ತೆರನಾದ ವರ್ಣನೆಯನ್ನು ಅಥವಾ ವ್ಯವಹಾರವನ್ನು ಒಮ್ಮೊಮ್ಮೆ ಒಂದು ಮಹಾಸಾಗರಕ್ಕೆ ಹೋಲಿಕೆ ಕೊಟ್ಟು ಹೇಳುವುದೂ ಉಂಟು. ಮಹಾಸಾಗರದಲ್ಲಿ ಏಳುವ ಗುಳ್ಳೆ ಗೊರಚೆ, ನೊರೆ ತೆರೆಗಳಂತೆ ಜೀವನ ಸಾಗರದಲ್ಲಿ ಅನೇಕ ವಿಚಾರವೀಚಿಗಳೂ ಕಲ್ಪನಾತರಂಗಗಳೂ ಭಾವಾವೇಶಗಳೂ ತೋರಿ ತೋರಿ ಅಡಗುವವು. ಭಾವದಲ್ಲಿ ಹುದುಗಿದ ಅನೇಕಾನೇಕ ವಿಚಾರಗಳ, ಕಲ್ಪನೆಗಳ ಸ್ವರೂಪವು ಭಾವದಿಂದ ಮನಕ್ಕೆ ಮನದಿಂದ ಮಾತಿಗೆ ಇಲ್ಲವೆ ಕೃತಿಗೆ ಇಳಿದ ಹೊರತು ಗೊತ್ತಾಗುವದಿಲ್ಲ. ಭಾವವು ಭಾಷೆಗಿಳಿಯುವ ಮೊದಲು ಅಂದರೆ ನುಡಿಯ ಬೆಡಗು ಬಿನ್ನಾಣದಲ್ಲಿ ಒಡಮೂಡುವ ಮೊದಲು ಇಲ್ಲವೆ ಶಬ್ದಾಡಂಬರದ ಒನಪು ಒಯ್ಯಾರಗಳಿಂದ ಮಿರುಗುವ ಮೊದಲು ಅದು ಇಂಥ ಒಂದು ಕ್ರಮದಲ್ಲಿ ಸಾಗಬೇಕಾಗುತ್ತದೆ. ಭಾವದ ವ್ಯಕ್ತಸ್ವರೂಪವಾದ ಈ ಭಾಷೆಯಿಂದ ಅಥವಾ ಕೃತಿಯಿಂದ ಜನತೆಯ ಜೀವನದಲ್ಲಿಯ ಗುಣಾಂಶಗಳೂ ಲೋಪದೋಷಗಳೂ ಸೂಚಿತವಾಗುತ್ತವೆ. ಜೀವನದ ಕುಂದು ಕೊರತೆಗಳು ಹಿಂಗಿ ಅದು ಜೀವಕಳಾಸಂಪನ್ನವಾಗಬೇಕಾದರೆ, ಅದು ತೇಜೋಮಯವೂ ಓಜೋಮಯವೂ ಆಗಬೇಕಾದರೆ ಅದರಲ್ಲಿ ಉತ್ಕೃಷ್ಟಭಾವನಾವಿಕಾಸವುಂಟಾಗಬೇಕು. ಅಂದರೇನೇ ಮಾತ್ರ ಅದು ಸಾಧ್ಯವು. ಭಾವದ ಪರಿಪಾಕತೆಯಿಂದ ಭಾಷೆಯ ಪ್ರೌಢಿಮೆಯು ದೊರೆಕೊಳ್ಳುವದು; ಅದರಂತೆ ಕಾರ್ಯದ ಸೊಬಗೂ ಉಂಟಾಗುವದು. ಭಾಷಾ ಪ್ರೌಢಿಮೆ ಮತ್ತು ಕಾರ್ಯದ ಸೊಬಗು ಉಂಟಾದಷ್ಟು ಉತ್ಕೃಷ್ಟಭಾವನಾವಿಕಾಸದಲ್ಲಿ ತರಗತಿಗಳು ತೋರಿಬರುವವು. ಜೀವನದ ಗುಣದೋಷಗಳು ಪ್ರೌಢವಾದ ಭಾಷೆಯಲ್ಲಿ ಒಡಮೂಡಿದಾಗ ಸಾಹಿತ್ಯವಾಗಿಯೂ ಸೊಬಗಿನ ಕಾರ್ಯದಲ್ಲಿ ಕಂಡಾಗ ಸತ್ಕ್ರಿಯೆಯಲ್ಲಿಯೂ ಪರಿಣಮಿಸುವವು. ಸಾಹಿತ್ಯದಿಂದ ಸತ್ಕ್ರಿಯೆಗೂ ಸತ್ಕ್ರಿಯೆ

ಯಿಂದ ಸಾಹಿತ್ಯಕ್ಕೂ ಕಳೆಯೇರಿ, ಎರಡೂ ಉತ್ಕೃಷ್ಟ ಭಾವನಾವಿಕಾಸಕ್ಕೆ ಅನಿವಾರ್ಯವಾಗಿ ಬಿಡುವವು. ನ್ಯಾಯ ಸಲುವಳಿಗೆಗೆ ಅದರ ಎರಡೂ ಮೆಯ್ಗಳು ಶುದ್ಧವಾಗಿರುವದು ಹೇಗೆ ಅವಶ್ಯಕವೋ ಹಾಗೆಯೇ ಉತ್ಕೃಷ್ಟಭಾವನಾವಿಕಾಸಕ್ಕೆ, ಜೀವನದ ಜೀವಕಳಾಸಂಪನ್ನತೆಗೆ ಸಾಹಿತ್ಯವೂ ಸತ್ಕ್ರಿಯೆಯೂ ಅತ್ಯಾವಶ್ಯಕವಾದವುಗಳು.

ಸಾಹಿತ್ಯಕ್ಕೆ ರಸಾಸ್ವಾದನೆಯೇ ಮುಖ್ಯವಾದ ಉದ್ದೇಶವು. ಸಾಹಿತ್ಯಾಂಗಗಳಾದ ದೃಶ್ಯ-ಶ್ರವ್ಯಕಾವ್ಯಗಳೆಲ್ಲ ರಸದ ಮೀಮಾಂಸೆಯನ್ನೇ ಮಾಡುತ್ತವೆ. ಸಂಗೀತದಲ್ಲಿ ರಾಗವು ಮುಖ್ಯವಾಗಿರುವಂತೆ ಸಾಹಿತ್ಯದಲ್ಲಿ ರಸವೇ ಮುಖ್ಯವಾದುದು. ನಂದಿಕೇಶ್ವರನೇ ರಸದ ಋಷಿಯೆಂದು ರಾಜಶೇಖರನು ತನ್ನ ಕಾವ್ಯಮೀಮಾಂಸೆಯಲ್ಲಿ ಹೇಳಿದ್ದರೂ ನಾಟ್ಯಶಾಸ್ತ್ರಕಾರನಾದ ಭರತಾಚಾರ್ಯನೇ “ ವಿಭಾವಾನು-ಭಾವ ವ್ಯಭಿಚಾರಿ ಸಂಯೋಗಾದ್ರಸನಿಷ್ಪತ್ತಿಃ ” ಎಂದು ರಸದ ಮೀಮಾಂಸೆಯನ್ನು ಮಾಡಿ ಮೊದಲಿಗೆ ಅದನ್ನು ಪ್ರತಿಷ್ಠೆಗೊಳಿಸಿದವನು. ಬಾಹ್ಯಪ್ರಪಂಚಜ್ಞಾನವು ಪಂಚೇಂದ್ರಿಯದ್ವಾರಾ ಉಂಟಾಗುತ್ತಿದೆಯಷ್ಟೆ ! ಕುರುಹಿನ ಸ್ಪರ್ಶದಿಂದ ಅರುಹು ಉಂಟಾಗುವದೆಂಬ ಈ ಮಾತು ಶಾಸ್ತ್ರೀಯ ದೃಷ್ಟಿಯಿಂದಲೂ ಸಿದ್ಧವಾದುದು. ಬಾಹ್ಯ ಸಂಗತಿಗಳನ್ನು ಇಂದ್ರಿಯಮುಖದಿಂದ ಅನುಭವಿಸುವಾಗ ಬಗೆಬಗೆಯ ಭಾವಗಳೂ ಸುಖದುಃಖರೂಪದ ಅನುಭಾವಗಳೂ ಮೈದೋರುವವು. ಚಿತ್ತವೃತ್ತಿಗಳಲ್ಲಿದ್ದ ಈ ತರಂಗಗಳು ಸಣ್ಣವಿರಲಿ ದೊಡ್ಡವಿರಲಿ ಭಾವವನ್ನು ಕದಲಿಸಿ ಬಿಡುತ್ತವೆ. ಇವುಗಳಲ್ಲಿ ಸಣ್ಣವಾಗಿಯೂ ಅಸ್ಥಿರವಾಗಿಯೂ ತೋರುವ ಭಾವಗಳಿಗೆ ಸಂಚಾರಿ (ವ್ಯಭಿಚಾರಿ) ಭಾವಗಳೆಂದು, ದೊಡ್ಡವಾಗಿಯೂ ಸ್ಥಿರವಾಗಿಯೂ ಇರುವ ಭಾವಗಳಿಗೆ ಸ್ಥಾಯೀ ಭಾವಗಳೆಂದು ಹೆಸರು. ಬಾಹ್ಯಸಂಗತಿಗಳಿಗೆ-ಘಟನೆಗಳಿಗೆ ವಿಭಾವಗಳೆಂದು ಹೆಸರು. ಸೃಷ್ಟಿಯ ಜ್ಞಾನವನ್ನು ಪಡೆಯುವಾಗ ಸ್ಥಾಯೀಭಾವ ಸಂಚಾರೀಭಾವಗಳು ಉದಿಸುವವು. ಆದರೆ ಲೋಕದಲ್ಲಿ ಸತ್ಯಸಂಗತಿಗಳ ಅನುಭವವುಂಟಾಗುವದು ಸ್ಥಾಯೀಭಾವಗಳಿಂದ. ಈ ಅನುಭವದಿಂದುಂಟಾಗುವ ಆನಂದವು ಲೌಕಿಕಾನಂದವೂ ಅಲ್ಲ; ಪಾರಲೌಕಿಕಾನಂದವೂ ಅಲ್ಲ. ಅದು ಅಲೌಕಿಕಾನಂದವು. ಸಾಹಿತ್ಯದಲ್ಲಿ ರಸಾಸ್ವಾದನೆಯಿಂದ ನಮಗೆ ದೊರೆಯುವದು ಇಂಥ ಆನಂದವು.

ಸಾಹಿತ್ಯಕ್ಕೆ ಸಂಸಾರವೇ ರಸ. ಸಂಸಾರವು ಮೂರು ದಿನದ ಸಂತೆ ಎಂಬ ತಿಳಿಯು ಸಾಹಿತಿಯ ಮತ್ತು ಕವಿಯ ತಿಳಿವಳಿಕೆಗೆ ಬಾಹ್ಯವಾದುದು. ಸಂಸಾರವೆಂಬದು ಸೆರೆಮನೆಯಲ್ಲ, ಮಾಯೆಯಲ್ಲ, ಮಾಟವಲ್ಲ, ಬಲೆಯಲ್ಲ, ಬಂಧನವಲ್ಲ; ಅದೊಂದು ಲೀಲೆ ಎಂದು ಭಾವನೆಗೊಂಡು ಭೋಗ ಹೊಂದುವ ಯೋಗಿಗಳೇ ರಸಿಕ ಶಿಖಾಮಣಿಗಳು; ಇವರೇ ಸಹೃದಯಿಗಳು. ಇಂಥ ಸಹೃದಯಿಗಳು ರಸಾಸ್ವಾದನೆ

ಮಾಡಿಯೂ ರಾಗದಿಂದ ನಿರ್ಲಿಪ್ತರಾಗಿರುವರೆಂದು ಸಾಹಿತಿಗಳು ಹೇಳುತ್ತಾರೆ. ಕವಿ ಯೋಗಿಗಳ ರಸಾಸ್ವಾದನಶಕ್ತಿಯು ಅತ್ಯದ್ಭುತವಾದುದು. ಅದು ಅವರ ಸ್ಥಾಯೀ ಸಂಚಾರೀ ಭಾವಗಳಿಗೆ ಬೀಡು. ಜೀವ ಜಗತ್ತುಗಳ ನಿಜಸ್ವರೂಪವು ರಸಮಯವಾಗಿರುವದೇನೋ ನಿಜ. ರಸಾಸ್ವಾದನೆಯಿಂದ ಜೀವ ಜಗತ್ತುಗಳ ಸಂಯೋಗವಾಗುವದಾದರೂ ಅದು ಸಮರಸವಲ್ಲ. ಹೆಣನ ಇಲ್ಲವೆ ಮರಣೋನ್ಮುಖನ ನಾಲಗೆಯ ಮೇಲಿರಿಸಿದ ಕಲ್ಲು ಸಕ್ಕರೆಯ ಹರಳಿನಂತೆ ಜೀವ ಜಗತ್ತುಗಳ ಸಂಯೋಗದರಿವು. ಕವಿಯಾದವನಿಗೆ ಈ ಸಂಯೋಗದರಿವಿನಲ್ಲಿ ಶಾಂತಿಯಿಲ್ಲ. ಆವನು ತನ್ನ ಪ್ರಸನ್ನ ಗಂಭೀರ ವಾಣಿಯಿಂದ ಜೀವ ಜಗತ್ತುಗಳ ಕಾಠಿಣ್ಯತೆಯನ್ನು ಕಳೆದು, ಒಂದರ ರಸದಲ್ಲಿ ಇನ್ನೊಂದರ ರಸಹೊಯ್ದು, ಜೀವಕಳೆ ತುಂಬಿ ತೋರಿಸಿ ಸಾಮರಸ್ಯದ ಅರಿವನ್ನುಂಟುಮಾಡಿಕೊಡುವನು. ಕವಿಸಾಮ್ರಾಟ ರವೀಂದ್ರರೂ ಸಹ ಈ ರಸವನ್ನು Emotional activity ಎಂದು ಕರೆದು ಇದೇ ಮಾತನ್ನು ಎತ್ತಿ ಹಿಡಿದಿದ್ದಾರೆ.*

ಕಾವ್ಯವ ಓದುವದು ರಸಾಸ್ವಾದನೆಗಾಗಿ ಮತ್ತು ಅದರಿಂದೊದಗುವ ಆನಂದಕ್ಕಾಗಿ; ಈ ಆನಂದವು ಮೆಟ್ಟಿಲುಗಳಂತೆ ಕ್ರಮದಿಂದ ಏರುತ್ತ ಹೋಗಬೇಕು. ವಿದ್ಯಾರಣ್ಯರು ಪಂಚದಶಿಯಲ್ಲಿ ಆನಂದವನ್ನು ೫ ವಿಧವಾಗಿ ವರ್ಣಿಸಿರಲಿ, ನಿಜಗುಣರು ವಿವೇಕಚಿಂತಾಮಣಿಯಲ್ಲಿ ಅದನ್ನು ೯ ವಿಧವಾಗಿ ನಿರೂಪಿಸಿರಲಿ ಅವೆಲ್ಲಕ್ಕೂ ಅನುಭವದ ಘನತೆಯೇ ಅಡಿಗಲ್ಲು. ಅನುಭವದ ತರತಮದ ಮೇಲೆ ಕಾವ್ಯದ ಮೇಲ್ಮೆ ಇರುತ್ತದೆಂಬುದನ್ನು ಮರೆಯಲಾಗದು. ಕಾವ್ಯದಲ್ಲಿ ಬರಿಯ ರಸಧ್ವನಿಯು ಮುಖ್ಯವಾದುದಲ್ಲ. ಅದರಿಂದ ಅಧಿಕತರವಾದ ಆನಂದವು ಉಕ್ಕುತಿರಬೇಕು. ಒಸರುವ ರಸಾಸ್ವಾದನೆಯಿಂದ ವಿಕಾರ ವರ್ಧನೆಗೊಳಿಸುವುದರಲ್ಲಿ ಆನಂದದ ಗತಿಯು ಇರುವದಾದರೆ ಅಂಥ ರಸಯುಕ್ತ ಕಾವ್ಯವು ಕಾವ್ಯವೇ ಅಲ್ಲ. ವಿನೋದ-ಆನಂದ-ತಾತ್ಕಾಲಿಕ ಸಂತೋಷ-ಇದರಲ್ಲಿ ಪರ್ಯವಸಾನಗೊಳ್ಳುವದೇ ಕಾವ್ಯದ ಉದ್ದೇಶ

* Our emotions transform this world of appearance into the more intimate world of sentiments. On the other hand, outer world has its own juices, having their various qualities which excite our emotional activities. This is called in our own Sanskrit rhetoric *rasa* which signifies outer juices having their response in the inner juices of our emotions ...... It (a poem) brings to us ideas, vitalized by feelings, ready to be made into the life stuff of our nature.

— Personality P. 14-15

ವಾಗಿರುತ್ತಿದ್ದರೆ, ಅದೇನೂ ಘನವಾದ ಉದ್ದೇಶವು ಅಲ್ಲ; ಅದರಿಂದ ಕಾವ್ಯದ ಘನತೆಯೂ ಧ್ವನಿತವಾಗುವುದಿಲ್ಲ. ಕಾವ್ಯವ ಪಠಿಸುವುದರಿಂದ ಉತ್ಕೃಷ್ಟ ಭಾವನಾ ವಿಕಾಸವಾದರೇನೇ ಮಾತ್ರ ಅದರ ಉದ್ದೇಶವು ಸಫಲವಾಯಿತೆನ್ನಬೇಕು. ಪರಿಪಾಕತೆ, ಸಂಸ್ಕರಣಗಳು ಲಕ್ಷ್ಯವಾಗಿರುವ ಕಾವ್ಯಗಳು ಉತ್ತಮ ತರಗತಿಯ ಕಾವ್ಯಗಳು. ಇಂಥ ಕಾವ್ಯಗಳಿಂದ ಜೀವನದ ಉತ್ತಮಿಕೆಯುಂಟಾಗುವದು; ಅನುಭವವು ಅಳವಡುವದು; ಆನಂದರಸದ ಸೊನೆ ಉಕ್ಕಿ ಅದು ಮೇರೆಯಿಲ್ಲದೆ ಹೊರಹೊಮ್ಮುವದು. ಆನಂದಪ್ರತೀತವಾದ ಇಂಥ ಜೀವನಕ್ಕೆ ಅನುಭವ ಸಾಧನೆಯೇ ಹೆಗ್ಗುರಿಯಾಗಿಹುದು. ಅನುಭವವೇ ಜೀವನದ ತಳಹದಿಯೆಂದು ಮಾರಿಸ್ ಮೇಟರಲಿಂಕ್ ( Maurice Maeterlink )ನು ತನ್ನ 'ಬಡವರ ಭಾಗ್ಯ' ( The Treasure of the Humble ) ದಲ್ಲಿ ಸಿದ್ಧಗೊಳಿಸಿರುವನು. ಅನುಭಾವಿಯ ಜೀವನದಲ್ಲಿ ಸಾಧನೆಯ ಮೆಟ್ಟಲುಗಳಿಗನುಸಾರವಾಗಿ ತಾನಾರೆಂಬುದು ತಲೆದೋರಹತ್ತುವದು. "ಅನುಭಾವವೆಂಬುದು ಆತ್ಮವಿದ್ಯೆ. ಅನುಭಾವವೆಂಬುದು ತಾನಾರೆಂಬುದ ತೋರುವದು. ಅನುಭಾವವೆಂಬುದು ನೆಲದ ಮರೆಯ ನಿಧಾನ. ಅನುಭಾವವೆಂಬುದು ಅಂತರಂಗದ ರತ್ನ. ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು. ಅನುಭಾವವಿಲ್ಲದ ಭಕ್ತಿ ಲಿಂಗಸಮರಸಸುಖವನೀಯದು. ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು. ಅನುಭಾವವಿಲ್ಲದೆ ಅರಿಯಬಾರದು. ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ." ಇತ್ಯಾದಿಯಾಗಿ ಶಿವಶರಣರೂ ಅನುಭಾವದ ಘನತೆಯನ್ನು ಕೊಂಡಾಡಿರುವರು. ಇಂಥ ಘನವಾದ ಅನುಭಾವದ ಆಧಾರದಲ್ಲಿಯೇ ಉತ್ತಮವಾದ ಕಾವ್ಯದ ಉಗಮವಿದೆ.

ಜೀವನವು ಎಡರು - ಎಡೆಯಾಟಗಳಿಂದಲೂ ಸಂದೇಹ - ಸಂಶಯಗಳಿಂದಲೂ ದುಃಖ-ದಾರಿದ್ರ್ಯಗಳಿಂದಲೂ ಬೆರೆತಿರುವುದರಿಂದಲೇ ಅದಕ್ಕೆ ಅನುಭವದ ಜೋಡಣೆಯುಂಟಾಗುವದು. ಮತ್ತು ಈ ದೆಸೆಯಿಂದಲೇ ಅದರಲ್ಲಿ ಹೋರಾಟಕ್ಕೆ ಅವಕಾಶವೂ ಇರುವದು. ದ್ವಂದ್ವದ ಕಲಹದಲ್ಲಿ ಮನಸ್ಸಿಗೆ ಶಾಂತಿಯಿಲ್ಲ. ಆಗ ಅದು ಕಾತರಗೊಳ್ಳುತ್ತಿದೆ, ಕಾವೇರುತ್ತಿದೆ; ಇಂಥ ಸಮಯದಲ್ಲಿ ಈ ಕಾತರಕಳವಳಗಳ ನಿವಾರಣೆಗೆ ಕಾವ್ಯಗಳು ಅವಶ್ಯವಾದುವುಗಳು. ಅವು ಮನಸ್ಸಿನ ಈ ಕಾವಿನಿಂದ ಹುಟ್ಟುವ ಮೂಲಕ ಮತ್ತು ಮನಸ್ಸಿನ ಈ ಕಾವನ್ನು ಆರಿಸುವ ಮೂಲಕ ಮಹಾಕಾವ್ಯಗಳಾಗುವವು. ಗೀತೆಯೇ ಇದಕ್ಕೆ ಒಂದು ಬಲವಾದ ಉದಾಹರಣೆ ಎನ್ನಬಹುದು. ಅದು ಅರ್ಜುನನ ಮನಸ್ಸಿನ ಕಾವಿಗಾಗಿ ಹೊರಹೊಮ್ಮಿದ ಮಹಾಕಾವ್ಯವು. ಅವನಿಗೆ ದುರ್ಯೋಧನನ ದ್ರೋಹಕ್ಕಾಗಿ ಮತ್ತು ಅವನಲ್ಲಿದ್ದ ದ್ವೇಷಕ್ಕಾಗಿ ಕರದಲ್ಲಿ ಗಾಂಡೀವವೂ ಭೀಷ್ಮದ್ರೋಣಾದಿಗಳ ಮೇಲಿನ ಮೋಹಕ್ಕಾಗಿ ಮತ್ತು ಅವರಲ್ಲಿ

ಟ್ಟಿದ್ದ ಗುರುಭಕ್ತಿಗಾಗಿ ಕಂಠದಲ್ಲಿ ಗದ್ಗದವೂ ಏಕಕಾಲದಲ್ಲಿ ತೋರಿದುವು. ಒಂದು ಕಡೆ ವೀರರಸದ ಉಕ್ಕು, ಇನ್ನೊಂದು ಕಡೆ ಕರುಣರಸದ ಬಿಕ್ಕು; ಇವೆರಡರ ತಿಕ್ಕಾಟದಲ್ಲಿ ಅರ್ಜುನನ ಹೃದಯದ ಗ್ರಂಥಿಯನ್ನು ಬಿಚ್ಚಲು-ಅವನ ಅವಿದ್ಯಾ ಗ್ರಂಥಿಯನ್ನೊಡೆಯಲು ಗೀತೆಯು ತಲೆದೋರಬೇಕಾಯಿತು. ಅವಿದ್ಯಾಗ್ರಂಥಿ ಯನ್ನು ಕಳೆದುದರಿಂದ ಗೀತೆಯು ಒಂದು ಉದ್ಗ್ರಂಥವಾಯಿತು. ಹೀಗೆ ಮನಸ್ಸಿನ ಗ್ರಂಥಿಯನ್ನು ಬಿಚ್ಚದ ಮತ್ತು ಅನುಭವವಿಕಾಸಗೊಳಿಸದ ಗ್ರಂಥಗಳು ಗ್ರಂಥ ಗಳೇ ಅಲ್ಲ. ಅವು ಸಾಹಿತ್ಯಾಂಗಗಳಾಗಲಾರವು. ಹೃದಯದ ಕಾವಳವನ್ನು ಕಳೆಯಲು, ಕಾತರ ಕಳವಳಗಳನ್ನು ಕಡಿಯಲು ಜೀವನದಲ್ಲಿ ಸಾಹಿತ್ಯವು ಅವಶ್ಯ ವಾಗಿ ಬೇಕೆಂಬುದು ಸ್ಪಷ್ಟವಾದುದು.

ಜೀವನದ ಹೋರಾಟವೇ ಉತ್ಕೃಷ್ಟವಾದ ಸಾಹಿತ್ಯ ನಿರ್ಮಾಣಕ್ಕೆ ಸಾಧ ನವು. ದಂದ್ವಕಲಹದ ತೆರೆಯಲ್ಲಿ ಅವಿದ್ಯಾಗ್ರಂಥಿಯನ್ನು ಭೇದಿಸುವ ಗ್ರಂಥ ರಚನೆಗೆ ಅವಕಾಶವಿದೆ. ೧೨ನೆಯ ಶತಮಾನದಲ್ಲಿ ಶಿವಶರಣರ ವಚನ ಸಾಹಿತ್ಯವು ಉಗಮಗೊಂಡ ರೀತಿಯನ್ನು ಪರಿಶೀಲಿಸಿದರೆ ಆಗಿನ ಜನಜೀವನದ ಶಾಂತಮಯ ವಾತಾವರಣವನ್ನು ಕೋಲಾಹಲಗೆಯ್ದು ಅದರ ಉತ್ತಮಿಕೆಯನ್ನು ಕೆಡಿಸುವ ಅನೇಕ ಘಟನೆಗಳು ಸಂಭವಿಸುತ್ತಿದ್ದುವೆಂದೂ ಇಂಥ ಘಟನೆಗಳೇ ಇದಕ್ಕೊಂದು ಅವಕಾಶವನ್ನು ಕಲ್ಪಿಸಿಕೊಟ್ಟುವೆಂದೂ ಹೇಳಬಹುದು. ಶಿವಶರಣರೆದುರು ಅತಿ ಭೋಗ ವಾದವನ್ನು ಎತ್ತಿಹಿಡಿಯುವ ಚಾರ್ವಾಕರು, ಅತಿ ತ್ಯಾಗವಾದವನ್ನು ಮಂಡಿಸುವ 'ನಿರ್ವಾಣ' ಮತವಾದಿಗಳು, ತಮ್ಮ ತಮ್ಮ ಪಂಥಪಾಡುಗಳ ಮೇಲ್ಮೆಗೊಳಿಸುತ್ತಿರುವದು ಕಂಡು ಬರುತ್ತಿತ್ತು. ಪ್ರಪಂಚವು ನಶ್ವರವಾದುದು. ನಾಳೆಯ ಯೋಚನೆ ಬೇಡ; ನಿನ್ನೆಯ ಗೊಡವೆಯೂ ಬೇಡ; ಸಾಧ್ಯವಾದ ಮಟ್ಟಿಗೆ ಇಂದ್ರಿಯ ಭೋಗೋಪಭೋಗವನ್ನೆಲ್ಲ ಇಂದೇ ಭೋಗಿಸೋಣ. ಇದೇ ದೇಹದಲ್ಲಿ ಕಂಡುದುದನ್ನೆಲ್ಲ ಉಣ್ಣೋಣ. ದೇಹವು ದಹಿಸಿ ಹೋದ ಬಳಿಕ ಮರಳಿ ಬಾರದು; ಸಾಲ ತೆತ್ತಾದರೂ ಹಾಲು ತುಪ್ಪ ಕುಡಿಯೋಣ. 'ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ' 'ಋಣಂ ಕೃತ್ವಾ ಘೃತಂ ಪಿಬೇತ್' ಎಂಬ ತತ್ತ್ವ ಗಳನ್ನೂದಿ ಮೇರೆ ಇಲ್ಲದಿರುವ ಆಶೆಯನ್ನು ಪೂರ್ತಿಮಾಡಿಕೊಳ್ಳಬೇಕೆಂಬ ಹಂಬಲ ಒಂದು ಕಡೆ. ಮತ್ತು ಸಂಸಾರವೆಂಬದು ಮೂರು ದಿನದ ಸಂತೆ; ಜೀವನಿಗೆ ಬರುವಾಗ ಬರಿಗೈ, ಹೋಗುವಾಗ ತೆರೆಗೈ; ಗಾಳಿಗಿಟ್ಟ ಸೊಡರಿನಂತೆ ಜೀವನವು ನೊಂದಿ ಹೋಗುವದು; ಎಲ್ಲವೂ ಮಾಯೆ; ತೋರುವ ತೋರಿಕೆಯೆಲ್ಲ ಬರಿಯ ಭ್ರಮೆ; ಪಾಪಪುಣ್ಯಗಳ ಫಲವಾಗಿ ಈ ಜೀವನು ದೇಹವಿಡಿದು ಜನಿಪನು; ಕಾಲರಾಯನ ಕೈಚಳಕಕ್ಕೆ ಸಿಕ್ಕು ನುಗ್ಗಾಗುವನು; ಕಾಲವಶದಿಂದ ಕಾಣದಾಗುವನು; 'ಕಾಲಾಯ

ತಸ್ಮೈನಮಃ ' ಎಂಬ ಮಾತುಗಳನ್ನು ಮುಂದೆ ಮಾಡಿ ಅದೃಷ್ಟವಾದದ ಅಲ್ಪ ದೃಷ್ಟಿಯಿಂದ ತೆರೆಕೊರೆಯಿಲ್ಲದೆ ಹರಿಯುವ ಆಶೆಯನ್ನು ಒತ್ತಿಹಿಡಿದು ತ್ಯಾಗವೇ ಜೀವನದ ಅತ್ಯುಚ್ಛ್ರಾಯ ಧ್ಯೇಯವೆಂದು ಬೀರುವ ಹವಣಿಕೆ ಇನ್ನೊಂದು ಕಡೆ.§

ಹೀಗೆ ಇವೆರಡರ ಕೋಟಲೆಯಲ್ಲಿ ಕುದಿಯುತ್ತ ಕರ್ಮಭೂಮಿಯಲ್ಲಿ ಆವುದನ್ನು ಹಿಡಿಯೋಣ, ಆವುದನ್ನು ಬಿಡೋಣ ಎಂಬ ಇಬ್ಬಗೆಯ ದಂದುಗದಲ್ಲಿ ಜನಜೀವನದ ಚಿತ್ರವು ಒಡೆದುಕಾಣುತ್ತಿತ್ತು. ಮರಣವೇ ಮೋಕ್ಷ, ದೇಹವೇ ಆತ್ಮ; ಅದರ ತುಷ್ಟಿಗಾಗಿ, ಪುಷ್ಟಿಗಾಗಿ ಹೆಣಗುವದೇ ಆನಂದಸಾಗರ; ಇದೇ ಜೀವನದ ಸರ್ವಸ್ವ-ಸಾರ್ಥಕ್ಯ ಎಂದು ಹೇಳಿದರೂ ಮನಸ್ಸಿನ ಹವಣಿಕೆ ಹರಿದಾಟಗಳನ್ನು ಕುರಿತು ವಿವರಿಸುವದು ಆ ಚಾರ್ವಾಕವಾದಕ್ಕೆ ನಿಲುಕಲಿಲ್ಲ. ಮತ್ತು ತ್ಯಾಗದ ಆದರ್ಶದಿಂದ ಜೀವನದ ಕುಂದುಕೊರತೆಗಳನ್ನು ಪೂರೈಸಿಕೊಳ್ಳುವದು ನಿರ್ವಾಣವಾದಿಗಳಿಗೆ ಕೈಸೆರೆಯಾಗಲಿಲ್ಲ. ಸಮಾಜ ಜೀವನದಲ್ಲಿಯ ಈ ಕಲಹದ ಒಂದಂಗವನ್ನು ಹಿಂಗಿಸಿಕೊಳ್ಳುತ್ತಿರಲು ಇನ್ನೊಂದು ತಲೆಯೆತ್ತಿ ಕುಣಿದು ತೊಂದರೆ ಕೊಡುತ್ತಿತ್ತು.

ಇಂಥ ಪರಿಸ್ಥಿತಿಯಲ್ಲಿ ಜೀವರುಗಳು ಇಹದಲ್ಲಿ ನುರಿತವರಾಗಲಿಲ್ಲ; ಅವರಿಗೆ ಪರವು ಕೈಸೇರಲಿಲ್ಲವೆಂಬುದು ಶಿವಶರಣರ ದಿವ್ಯ ತಿಳಿಗೆ ಹೊಳೆಯಿತು. ಅಪರಿಮಿತವಾದ ಇಂದ್ರಿಯ ಭೋಗದಲ್ಲಿ ದೇವನನ್ನು ಅಲ್ಲಗಳೆಯುವ ಅತಿಭೋಗವಾದವೂ ಜೀವನದಲ್ಲಿ ಸೊಬಗಿಲ್ಲವೆಂದು ಅದನ್ನು ಅಲ್ಲಗಳೆಯುವ ಅತಿತ್ಯಾಗವಾದವೂ ದೋಷದಿಂದ ಬೆರೆತವುಗಳೇ ಎಂದು ಅವರಿಗನಿಸಿತು. ಜೀವನು ಇಂದ್ರಿಯಗಳ ಮುಖಾಂತರ ವ್ಯವಹರಿಸುವನು; ಆದ್ದರಿಂದ ಇಂದ್ರಿಯ ಭೋಗವನ್ನೇಕೆ ಅಲ್ಲಗಳೆಯುವದು? ಹಿತವಾಗಿ ಮಿತವಾಗಿ ಇಂದ್ರಿಯಸುಖ ಬಳಸಲು ಬರುವುದಿಲ್ಲವೆಂದು ಅದಕ್ಕೆ ಅರದಾಳವನ್ನೇ ಹಚ್ಚುವುದೇ? ಜೀವನದ ಸೊಬಗನ್ನು ಸವಿಯಬೇಕು; ಅದರ ಸಾರ್ಥಕತೆ

§. ಜೀವನದ ಕಷ್ಟನಷ್ಟಗಳನ್ನು ಕಂಡು ನಿರ್ವೇದಗೊಂಡು ಸನ್ಯಾಸ ದೀಕ್ಷೆ ಪಡೆಯುತ್ತಿದ್ದ ಜೈನ ಬೌದ್ಧ ಮತವಾದಿಗಳ ಜೀವನವನ್ನೂ

ಸಿರಿಯು ಸತಿಸುತಹಿತರು ನಿಜವೆಂದು ನೆರೆನಂಬಿ
ಬರಿದೆ ಮೈಮರೆದು ಕೆಡದಿರು ಮಂದ ಮನುಜ ‖
... ... ... ... ... ...
ನಿನ್ನಂಗಕಿಂತ ನಿನಗಿನ್ನು ಹಿತವಾವುದೀ
ನಿನ್ನಂಗವೆ ನಿನ್ನನಗಲ್ವುದೆನಲು ।
ಅನ್ಯವಹ ಸಿರಿ ಸತಿ ಸುತ ಹಿತರು ನಿಜವದೆಂ
ತಿನ್ನಿದನು ತಿಳಿದು ಮೋಹಿಸದಿರೆಲೆ ಮರುಳೆ ‖

ಎಂದು ಪೇಳುತಲಿದ್ದ ವೇದಾಂತ ಮತವಾದಿಗಳ ಜೀವನವನ್ನೂ ಇದಕ್ಕೆ ಹೋಲಿಸಬಹುದು.

ಯಾಗಬೇಕು ; ಎರಡೂ ಕೈಗೂಡಬೇಕು ; ಇದು ಹೇಗೆ ಸಾಧ್ಯವಾದೀತು ಎಂಬುದೇ ಅವರ ಹಂಬಲ. ಆಗಿನ ಜೀವನದಲ್ಲಿಯ ಈ ಎಡರುಗಳನ್ನು ಈ ತೊಡಕಿನ ಸಮಸ್ಯೆಗಳನ್ನು ಬಿಡಿಸಲು ಶಿವಶರಣರು ಸಮರ್ಥರಾದರು. ಹೃದಯದಲ್ಲಿ ಗುಡಿಗಟ್ಟಿದ ಗ್ರಂಥಿಯನ್ನು ಬಿಚ್ಚಲು ಅವರು ಬಲ್ಲಿದರಾದರು. ಅವರ ಪ್ರಯತ್ನವು ಫಲಿಸಿತು. ವಚನ ಸಾಹಿತ್ಯವು ಉಗಮಗೊಂಡಿತು. ಶಿವಶರಣರ ಜೀವನವನ್ನು ವಿವರಿಸುವ ಈ ಸಾಹಿತ್ಯದಲ್ಲಿ ಒಡಮೂಡಿದುದು ಅತಿಭೋಗವಾದವೂ ಅಲ್ಲ; ಅತಿತ್ಯಾಗವಾದವೂ ಅಲ್ಲ. ತ್ಯಾಗಭೋಗಗಳ ಸಮನ್ವಯ ಯೋಗವು ಅದರಲ್ಲಿದೆ. ಇಂಥ ಯೋಗವನ್ನು ಸಾಧಿಸುವುದೇ ಅವರ ಗೊತ್ತು, ಗುರಿ. ಜೀವನದ ಉತ್ತಮಿಕೆಗೆ ಇದೇ ಅವರು ಸಾಧಿಸಿದ ಯೋಗಸಾಧನೆ.

ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು. ಸತಿ ಪತಿ ರತಿ ಸುಖವ ಬಿಟ್ಟರೆ ಸಿರಿಯಾಳಚೆಂಗಳೆಯರು ? ಸತಿ ಪತಿ ರತಿ ಸುಖದ ಭೋಗೋಪಭೋಗವಿಳಾಸವ ಬಿಟ್ಟರೆ ಸಿಂಧುಬಲ್ಲಾಳರು ? ನಿಮ್ಮ ಮುಟ್ಟಿ ಪರಧನ ಪರಸ್ತ್ರೀಗೆಳಸಿದಡೆ ನಿಮ್ಮ ಚರಣಕ್ಕೆ ದೂರ, ಕೂಡಲ ಸಂಗಮ ದೇವಾ!

ಎಂಬ ಬಸವಣ್ಣನವರ ವಚನವೂ

ಪಂಚೇಂದ್ರಿಯ ಸಪ್ತಧಾತುವನತಿಗಳೆದಲ್ಲಿ ಫಲವೇನು ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ವಿಷಯವನತಿಗಳೆದಲ್ಲಿ ಫಲವೇನು ? ಇವೆಲ್ಲವ ಕೊಂದ ಪಾಪ ನಿಮ್ಮ ತಾಗುವದು ಗುಹೇಶ್ವರಾ.

ಎಂಬ ಪ್ರಭುದೇವರ ವಚನವೂ ಹೇಳುವದೇನನ್ನು ? ಇಂದ್ರಿಯಗಳನ್ನು ಹಿತವಾಗಿ ಮಿತವಾಗಿ ಬಳಸಬೇಕು, ಬಾಳಿನ ಸಾರ್ಥಕತೆಯನ್ನು ಕಾಣಬೇಕು ಎಂಬುದನ್ನಲ್ಲವೇ ? ಶಿವಶರಣರಿಗೆ ಪ್ರಪಂಚ ಪಾರಮಾರ್ಥ ಎಂಬ ಭೇದವಿರಲಿಲ್ಲ. ಪ್ರಪಂಚವೇ ಪಾರಮಾರ್ಥವಾಗಬೇಕು. ಇಹವೇ ಪರವಾಗಬೇಕು. ಮರ್ತ್ಯಲೋಕವೇ ಮಹಾಮನೆಯಾಗಬೇಕು. ಕರ್ಮಭೂಮಿಯೇ ಧರ್ಮಭೂಮಿಯಾಗಬೇಕು ಎಂಬುದೇ ಅವರ ಉಚ್ಚತಮವಾದ ಬಾಳಿನ ಗುಟ್ಟು; ಸಾಧನೆಯ ಗುರಿ. ಇದಕ್ಕಾಗಿ ಇಂದ್ರಿಯಗಳ ಭೋಗಬಲವನ್ನು ಬೆಳಸುವ ಇಲ್ಲವೆ ಅಳಿಸುವ ಕಾರ್ಯಕ್ಕೆ ಕೈನೀಡದೆ ಅವರು ಅದನ್ನು ಮಾರ್ಪಡಿಸಿಕೊಳ್ಳಬೇಕೆಂದು ಕಂಡು ಕೊಂಡರು. (Not suppression or repression but sublimation was their motto ) ಹೀಗೆ ಮಾರ್ಪಾಡುಗೊಳ್ಳುವ ಕಾಲಕ್ಕೆ ತಮಗುಂಟಾದ ಸಿರಿಸುಖವನ್ನು, ತಮಗುಂಟಾದ ಆನಂದವನ್ನು ಕುರಿತು ಅವರು ಅನೇಕ ತೆರನಾಗಿ ಹಾಡಿಕೊಂಡಿರುವರು.

ಬಾಳು ಸಾರ್ಥಕವಾಗಲೆಂದು ನೀ ಕಾಡದಿರು
ಅವುದೊಂದನು ವ್ಯರ್ಥಮಾಡನವನು
ಮೇಲಾಗಿ ನೀ ಬಾಳುವದು ನಿನ್ನ ಛಲವಲ್ಲ
ದೇವನ ವಿಶಾಲ ಮಮತೆಯ ಫಲವದು !

ಎಂಬರ್ಥದ ಧನ್ಯತೆಯ ಭಾವವನ್ನು ವ್ಯಕ್ತಗೊಳಿಸುವ ವಚನಗಳು,

ಪಶ್ಚಿಮ ಗಿರಿಯಲ್ಲಿ ಚಿತ್ಸೂರ್ಯ ಉದಯವಾದುದ ಕಂಡೆ. ಸುತ್ತುಮುತ್ತಿದ ಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದ ಕಂಡೆ. ಹತ್ತು ದಿಕ್ಕಿನ ಒಳ ಹೊರಗೆಲ್ಲ ಬೆಳ್ಳಗಿನ ಪೊತ್ತವೇ ತುಂಬಿದುದ ಕಂಡೆ. ಬಿಚ್ಚಿ ಅರಳಾಗಿ ಅಚ್ಚ ಹೊಸ ಗಂಧವು ದೆಸೆದೆಸೆಗೆ ಎಸೆವುದ ಕಂಡೆ. ಇಂತಿದರ ಕೌಶಲವ ಕಂಡು ಬೆರಗಾದೆನಯ್ಯಾ ಅಖಂಡೇಶ್ವರಾ.

ಎಂಬ ಯೋಗಯೋಗ್ಯರು ಹಾಡಿದ ಯೋಗಪರವಾದ ವಚನಗಳು ಮತ್ತು

ಮನಕ್ಕೆ ಮನೋಹರವಲ್ಲದ ಗಂಡರು ಮನಕ್ಕೆ ಬಾರರು ಕೇಳವ್ವ ಕೆಳದಿ, ಪನ್ನಗ ಭೂಷಣವಲ್ಲದ ಗಂಡರು ಇನ್ನೆನಗಾಗದ ನೋರೆ ನೋಡವ್ವ. ಕನ್ನೆಯಿಂದಿನ ಕೂಟ, ಚಿಕ್ಕಂದಿನ ಬಾಳುವೆ ಸಿಮ್ಮಾಣಿಯಯ್ಯಾ ಕೂಡಲ ಸಂಗಮ ದೇವಾ.

ಎಂಬ ಭಕ್ತಿಯುತರು ಹಾಡಿದ ಭಕ್ತಿಪರವಾದ ವಚನಗಳು ವಚನ ವಾಙ್ಮಯದಲ್ಲಿ ಹೇರಳವಾಗಿ ಸಿಕ್ಕುತ್ತಿವೆ. ಇವೆಲ್ಲ ಜೀವನಸಾರ್ಥಕತೆಯ ರೀತಿಯನ್ನೆ ಅರುಹುತ್ತಿವೆ. ಈ ವಚನಗಳಲ್ಲಿ ತಾಳಲಯ ಪ್ರಾಸ ತೂಕವುಳ್ಳ ಶಬ್ದಜೋಡಣೆ, ಭಾವಗಂಭೀರತೆ ಮುಂತಾದವುಗಳು ಯಾವ ಸಾಹಿತ್ಯಾಂಶದ ಘನತೆಯನ್ನು ಹೇಳಲಿಕ್ಕಿಲ್ಲ ?

ಇಂದ್ರಿಯಗಳ ಭೋಗವೂ ಜೀವನದ ಸಾರ್ಥಕತೆಯೂ ಏಕಕಾಲದಲ್ಲಿ ಲಭಿಸ ಬೇಕಾದರೆ ಇಂದ್ರಿಯ ಭೋಗಪ್ರವೃತ್ತಿಯುಳ್ಳ ಜೀವ, ಜೀವನದ ಸಾರ್ಥಕತೆಗೆ ಧ್ಯೇಯ ವಸ್ತುವಾದ ದೇವ, ಇವರೀರ್ವರಲ್ಲಿ ಮೇಳವುಂಟಾಗುವಂತೆ ಶಿವಶರಣರು ಮಾಡಿದರು. ಅವರಿಗೆ ಜೀವನೂ ರಸಮಯನು; ದೇವನೂ ರಸಮಯನು. ಜೀವ ದೇವರಲ್ಲಿ ಭಾವವೊಂದು ಅಡ್ಡವಾಗಿದೆ. ಜೀವ ಭಾವವು ಅಳಿದರೆ ಜೀವನೇ ದೇವ ನಾಗುವನು. ಜೀವ ದೇವರ ಬೆಸುಗೆಯಲ್ಲಿ ಸಮರಸವುಂಟಾಗುವುದು ಎಂದು ತಿಳಿದು ಜೀವನೇ ಅಂಗ, ದೇವನೇ ಲಿಂಗನೆಂದು ಕರೆದರು; ಲಿಂಗಾಂಗಸಾಮರಸ್ಯಯೋಗ ವನ್ನು ಕಂಡುಹಿಡಿದರು; ಅದರಿಂದ ಲಿಂಗಾನಂದವನ್ನು ಪಡೆದರು. ಜಗತ್ತು ರಸಮಯ ವಿರುವದಾದರೂ ಹೆಣನ ಇಲ್ಲವೆ ಮರಣೋನ್ಮುಖನ ನಾಲಗೆಯ ಮೇಲಿನ ಕಲ್ಲು ಸಕ್ಕರೆಯ ಹರಳಿನ ಅನುಭವವು ಅದರಿಂದುಂಟಾಗಬಾರದೆಂದು ಹಂಬಲಿಸಿ, ಗರುಡಿಯ ಸಾಧಕನಿಗೆ ಅದು ತಕ್ಕ ಸ್ಥಳವೆಂದು ತಿಳಿದರು; ಕಲಿಯ ಹೋರಾಟಕ್ಕೆ ಅದು ಹವಣಾದ ಸ್ಥಾನವೆಂದು ತಿಳಿದರು; ಹಿತವಾಗಿ ಮಿತವಾಗಿ ಬಳಸಿ ಅದರ ಸವಿ ಸುಖವನ್ನು ಸವಿದರು. ಅಂತೆಯೇ ಅವರಿಗದು ಲೀಲಾಭೂಮಿಯಾಯಿತು. ದೇವನ ಒಡನಾಟದಿಂದ ಅವರು ಕಳೆಹೊಯ್ದುದು ಜೀವನದ ಈ ಮಾಧುರ್ಯಕ್ಕೆ; ಜಗದ ಸೌಂದರ್ಯಕ್ಕಲ್ಲ !

ಕಾವ್ಯದ ಉದ್ದೇಶವೇನೋ ಆನಂದ; ಇದು ದೊರೆಯುವದು ರಸಾಸ್ವಾದನೆ ಯಿಂದ; ರಸವು ರತ್ಯಾದಿ ಸ್ಥಾಯೀ ಭಾವಗಳನ್ನಾಶ್ರಯಿಸಿದುದು; ಭಾವವು ರಮಣೀ ಯತೆಯಲ್ಲಿ ವ್ಯಕ್ತಗೊಳ್ಳಬೇಕು; ಆದ್ದರಿಂದ 'ಆನಂದ-ರಸ-ರತಿ-ರಮಣೀಯತೆ'ಗಳು

ಕಾವ್ಯಬ್ರಹ್ಮನ ಚತುರ್ಮುಖಗಳು ಎಂದು ಹೇಳುವುದುಂಟು. ಶಿವಶರಣರ ವಚನ ವಾಙ್ಮಯದಲ್ಲಿ ದೊರೆಯುವ ಆನಂದವು ಕಾವ್ಯಪಠಣದಿಂದ ಲಭಿಸುವ ಅಲೌಕಿಕ ಆನಂದದಿಂದ ಭಿನ್ನವಾದುದು. ಅಲ್ಲಿ ರಸ ಒಸರುವದು ರತಿಭಾವದಿಂದಲ್ಲ, ಸತೀ ಭಾವದಿಂದ. ಅವುಗಳಲ್ಲಿ **ಸತೀಭಾವವು** ಸ್ಥಾಯೀಭಾವವು* ರತಿಭಾವವು ಕಾಮಮಯವಾದುದು; ಶೃಂಗಾರದಿಂದ ಬೆರೆತುದು. ಸತೀಭಾವವು ಪ್ರೇಮಮಯವಾದುದು; ಸಾಮರಸ್ಯ ಪ್ರಧಾನವಾದುದು. ನಿರ್ಹೇತುಕ ನಿಷ್ಕಲಂಕ ನಿಸ್ಸೀಮ ಪ್ರೇಮವೇ ಸತಿ. ಶುದ್ಧವೂ ಶಾಂತವೂ ಆದ ಸತೀಭಾವವೇ ಭಕ್ತಿ. ಭಕ್ತಿಗೆ ಉತ್ಕೃಷ್ಟಭಾವವೇ ಬೀಡು. ನಾರದ ಭಕ್ತಿಸೂತ್ರಗಳೂ ಶಿವಶರಣರ ವಚನಗಳೂ ಹರಿದಾಸರ ಹಾಡುಗಳೂ ಅಚಿಂತ್ಯ ಅಭಿನ್ನವಾದ ಈ ಭಕ್ತಿಯ ರೀತಿಯನ್ನು ಮನಂಬುಗುವಂತೆ ವಿವರಿಸುತ್ತವೆ. ವಚನ ಗ್ರಂಥಗಳನ್ನು ಓದುವದು ಅವುಗಳಲ್ಲಿ ವ್ಯಕ್ತವಾದ ಸತೀಭಾವದಿಂದ ಸಿಗುವ ಸಾಮರಸ್ಯದ ಲಿಂಗಾನಂದಕ್ಕಾಗಿ !

ರತಿ, ಸ್ನೇಹ, ಸತಿ ಇವುಗಳಲ್ಲಿ ಒಂದು ಬಗೆಯ ಆಕರ್ಷಣೆ ಇದೆ. ಅವು ಒಂದರಿಂದ ಒಂದು ಭಿನ್ನವಲ್ಲ. ಬೇಕಾದರೆ ಈ ಆಕರ್ಷಣೆಗೆ ನ್ಯೂಟನ್ನನ ಗುರುತ್ವಾಕರ್ಷಣೆ ( Newtonian Attraction ) ಎಂದು ಕರೆಯಿರಿ. ಇಡೀ ವಿಶ್ವವೇ ಒಂದು ಬಗೆಯ ಆಕರ್ಷಣೆಗೆ ಒಳಗಾಗಿದೆ. ಅಲ್ಲದೆ ಇವನ್ನೆಲ್ಲ ಒಂದೇ ಭಾವದಲ್ಲಿ, ಒಂದೇ ಒಂದು ರತಿ ಭಾವದಲ್ಲಿ ಅಡಗಿಸಿಬಿಟ್ಟರೆ ಆಗುವದಲ್ಲವೇ ? ನಿಜಗುಣರು ಹಾಗೆ ಮಾಡಿಲ್ಲವೇ ? ಇವನ್ನೆಲ್ಲ ವಿಂಗಡಿಸುವುದೇಕೆ ? ಎಂದು ಯಾರಾದರೂ ರತಿ ಸತಿ ಮೊದಲಾದವುಗಳಲ್ಲಿ ಏಕತಾನತೆಯನ್ನು ಕಲ್ಪಿಸಲು ಹವಣಿಕೆಗೊಳ್ಳಬಹುದು;

* ರಸದ ಮೀಮಾಂಸೆಯಲ್ಲಿ ಭರತಮುನಿಯು ಮತವಿಡಿದು ಶೃಂಗಾರಾದಿ ಎಂಟೇ ರಸಗಳನ್ನು ಲಾಕ್ಷಣಿಕರು ಪ್ರತಿಪಾದಿಸುತ್ತ ಬರುತ್ತಿದ್ದರೂ ಹೊಸ ಹೊಸ ರಸಗಳು ಇರಬೇಕೆಂಬ ಸೂಚನೆಗಳು ಬರದೇ ಇರುತ್ತಿರಲಿಲ್ಲ. ಈ ವಿಷಯದಲ್ಲಿ ಶಾಂತರಸವನ್ನು ಹೇಳಿ ಹೊಸ ಹಾದಿಯಲ್ಲಿ ಅಡಿಯಿಟ್ಟವನು ಉದ್ಭಟನು. ರುದ್ರಟನು ಪ್ರೇಯೋರಸವನ್ನು ಸೇರಿಸಿ ರಸಗಳು ಹತ್ತು ಎಂದು ಹೇಳಿದನು. ರಸತರಂಗಿಣಿಕಾರನಾದ ಭಾನುದತ್ತನಿಗೆ 'ಮಾಯಾ' ರಸವು ಹೊಸದೆನಿಸಿತು. ವಿಶ್ವನಾಥನಿಗೆ ವಾತ್ಸಲ್ಯವು ಸ್ವತಂತ್ರವಾದ ರಸವೆನಿಸಿತು. ಶ್ರದ್ಧಾ ರಸವನ್ನು ಹೇಳುವವರು ಅನೇಕರುದಿಸಿದರು. ಭಕ್ತಿಯು ತರಗತಿಯಲ್ಲಿ ಅನೇಕ ವಿಧವಾಗಿದ್ದು ಭಕ್ತಿರಸವನ್ನು ಪ್ರಾಯಿಕವಾಗಿ ಎಲ್ಲರೂ ಅನುಸರಿಸುತ್ತ ಬಂದಿರುವರು. ಅದರಂತೆ ಶಿವಶರಣರಲ್ಲಿ ಸಾಧಕನ ನೆಲೆಕಲೆಗನುಸರಿಸಿ ಭಕ್ತಿಯನ್ನು ಆರು ತೆರನಾಗಿ ತಿಳಿಸಿದರು. ಅವೆಲ್ಲಕ್ಕೂ ಸತಿಯೇ ಸ್ಥಾಯೀ ಭಾವವು. ಸತೀ ಸ್ಥಾಯೀ ಭಾವದಲ್ಲಿ ಭಕ್ತಿರಸ ಮೀಮಾಂಸೆಗೊಳಿಸಿದುದು ವಚನ ಸಾಹಿತ್ಯದ ಒಂದು ವೈಶಿಷ್ಟ್ಯವು. ರಸದ ಈ ಮೀಮಾಂಸೆಯಿಂದ ಜೀವನ ರಹಸ್ಯವು ಎಂಟು ಇಲ್ಲವೆ ಒಂಬತ್ತು ರಸಗಳಿಂದ ಪೂರ್ತಿಯಾಗಿ ಹೊರಹೊಮ್ಮುವದಿಲ್ಲ; ಕಾರಣ ಸೃಷ್ಟಿಯು ಉಗಮವನ್ನು ಕಾಣಲು ಹೊಸ ಹೊಸ ರಸಗಳೂ ಹೊಸ ಹೊಸ ಭಾವಗಳೂ ಅವಶ್ಯವೆಂದು ಇದರಿಂದ ಧ್ವನಿತವಾಗುತ್ತದೆ.

ಸರಿ. ವಿಶ್ವದ ಆಕರ್ಷಣೆಗೆ ಅನುಗುಣವಾಗಿ ಇವುಗಳಲ್ಲಿ ವಿಶ್ವದ ವಿರಸವೂ (Cosmic Repulsion) ಇರುವದೆಂಬ ಮಾತನ್ನು ಮರೆಯಲಾಗದು. ವಿಶ್ವವು ಅಗಮ್ಯವಾದ ಒಂದು ಸೆಳೆತಕ್ಕೆ ಸಿಕ್ಕು, ತೋರುವ ತೋರಿಕೆಯಲ್ಲ. ಒಂದೇ ಎಂದು ಕಂಡರೂ ಇರುವಿಕೆಯಲ್ಲಿ ಮಾತ್ರ ಅದು ಭಿನ್ನಭಿನ್ನವಾಗಿದೆ ಎಂಬದನ್ನು ಗಮನಿಸಬೇಕು. ಗಂಡಹೆಂಡಿರಲ್ಲಿ ತೋರಿ ಬರುವ ಸ್ನೇಹವು ಬೇರೆ; ಉತ್ತರರಾಮ ಚರಿತೆಯಲ್ಲಿ ಭವಭೂತಿಯು ತಿಳಿಸುವ ಸ್ನೇಹವು ಬೇರೆ; ಜೀವ ದೇವರಲ್ಲಿಯ ಸ್ನೇಹವೂ ಬೇರೆ. ಗಂಡಹೆಂಡಿರಲ್ಲಿಯ ಸ್ನೇಹಭಾವವು ತಾತ್ಪೂರ್ತಿಕ ವಾದುದು. ವಿಷಯ ವ್ಯಾಮೋಹದ ತೃಪ್ತಿಯು ಪೂರ್ತಿಗೊಳ್ಳುವವರೆಗೆ ಇಲ್ಲವೆ ಅದಕ್ಕೆ ಚ್ಯುತಿ ಉಂಟಾಗುವವರೆಗೆ ಮಾತ್ರ ಈ ಸ್ನೇಹವು ಇರುವದು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಮಿತಿಮೀರಿ ಬೆಳೆದು ರೂಢವಾಗಿರುವ ಗಂಡಹೆಂಡಿರ ಗುತ್ತಿಗೆಯ ಮದುವೆ (Contract marriages) ಬಿಡುಗಡೆ (Divorce) ಮೊದ ಲಾದ ಉದಾಹರಣೆಗಳಿಂದ ಈ ಸ್ನೇಹವು-ಈ ರತಿಯು ಅದೆಷ್ಟು ಅಸ್ಥಿರವಾಗಿದೆಯೆಂದು ತಿಳಿದುಬರುತ್ತದೆ. ಲೌಕಿಕದ ಸೌಖ್ಯವೇ ಗುರಿಯಾಗಿರುವ ಈ ರತಿಭಾವವು ಈ ದೋಷದಿಂದ ಬಿಡುಗಡೆಹೊಂದದು. ಭವಭೂತಿಯು ತಿಳಿಸುವ ಸ್ನೇಹವು ಜನ್ಮಾಂತರ ದಿಂದ ಬೆಳೆದು ಬಂದುದು. ಅಲ್ಲಿ ಒಳಗಿರ್ಪ ಒಂದು ನೆವವು ಪದಾರ್ಥಗಳನ್ನು ಕಟ್ಟಳ್ಳ ರಿಂದ ಕಟ್ಟಿಹುದು. ಅಂತೆಯೇ ಈ ಪರಿಚಯವು ನಿಬಿಡಬದ್ಧವಾದುದು. ಈ ಸ್ನೇಹವು ರತಿಯಲ್ಲ; ರತಿಗಿಂತ ಮುಂದಿನದು. ರತಿಭಾವವು ಇದರಷ್ಟು ಆಳವಾಗಿ ಇಳಿಯದು. ರತಿಭಾವದಲ್ಲಿ ಕಾಣಲಾಗದ ಆಕರ್ಷಣಶಕ್ತಿಯು ಭವಭೂತಿಯು ನಿರೂಪಿಸುವ ಈ ಸ್ನೇಹದಲ್ಲಿ ಹುದುಗಿದೆ. ಆದರೆ ಶಿವಶರಣರು ವ್ಯಕ್ತಗೊಳಿಸಿದ ದೇವ-ಭಕ್ತ, ಶಿವ-ಜೀವರಲ್ಲಿಯ ಸ್ನೇಹಭಾವವು ನಿರಂತರವಾದುದು. ಅಲ್ಲಿ ಜನ್ಮಾಂತರದ ಪ್ರಶ್ನೆ ಯಿಲ್ಲ. 'ಟೆನಿಸನ್' ಮಹಾಕವಿಯು ತಿಳಿಸುವ "Man in God and God in Man" ಎಂಬ ಮಾತೂ ಸಹ ಜೀವದೇವರಲ್ಲಿಯ ಈ ನಿರಂತರ ಸ್ನೇಹವನ್ನೇ ಸೂಚಿಸುವುದು.

ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ, ಆಲಿಕಲ್ಲ ಹಸೆಯ ಹಾಸಿ,
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು. ಎಂದೆಂದೂ ಬಿಡದ
ಬಾಳುವೆಗೆ ಕೊಟ್ಟರೆನ್ನ, ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆ ಮಾಡಿದರು.

ಎಂದು ಶಿವಶರಣೆ ಅಕ್ಕಮಹಾದೇವಿಯು ತಿಳಿಸುವ ವಚನದಲ್ಲಿ 'ಎಂದೆಂದೂ ಬಿಡದ ಬಾಳುವೆ'ಯು ನಿರಂತರ ಸ್ನೇಹವನ್ನು ವ್ಯಕ್ತಗೊಳಿಸುವದು. ಈ ನಿರಂತರವಾದ ಸ್ನೇಹದಲ್ಲಿ 'ಭಕ್ತಿಯೆಂಬ ಆಧಾರಸ್ತಂಬದ ಮೇಲೆ ಜ್ಞಾನಾಗ್ನಿಯೆಂಬ ಚಪ್ಪರವ ನಿಕ್ಕಿ ಸತ್ಕ್ರಿಯೆಯೆಂಬ ಶುಭ್ರವಾದ ಹಸೆಯ ಮೇಲೆ ದುಶ್ಚಾರಿತ್ರವಿಲ್ಲದ ಹೆಂಡತಿಯು ವೃತ್ತಿಜ್ಞಾನವೆಂಬ ತಲೆಯಡಗಿಸಿ ಕೇವಲ ಚೈತನ್ಯಜ್ಞಾನ (Intuitive know-

ledge )ವನ್ನು ಆಳವಡಿಸಿಕೊಂಡ ಗಂಡನೊಡನೆ ಎಂದೆಂದೂ ಬಿಡದ ಬಾಳುವೆಯನ್ನು ಸಾಗಿಸಿಕೊಂಡು ಹೋಗಲಿರುವಳು ' ಎಂಬ ಉದಾತ್ತವಾದ ಗಂಭೀರವಾದ ಗಾಢವಾದ ಗೂಢವಾದ ಅನುಭವವು ಹುದುಗಿದೆ ಎಂಬದನ್ನ ಷ್ಟರಿತರೆ ಈ ನಿರಂತರ ಸ್ನೇಹದ ಹಿರಿಮೆಯು ಹೊಳೆಯುತ್ತಿದೆ. ರತಿಭಾವದಲ್ಲಿ ಇದ್ದುದನ್ನು ಇಲ್ಲವೆಂದು, ಇಲ್ಲದುದನ್ನು ಇದೆಯೆಂದು ತಿಳಿಯುವ ಭ್ರಾಂತಿಯು ಅಡಗಿದೆ. ಸತೀಭಾವದಲ್ಲಿ ಮಾತ್ರ ಇದ್ದುದನ್ನು ಇದ್ದಂತೆ ಕಾಣುವ ಶಾಂತಿಯು ಒಡಮೂಡಿದೆ. ಇಂತಪ್ಪ ಸತೀಭಾವದ ಸೃಷ್ಟಿಯಲ್ಲಿ ಹುದುಗಿದ ಅಗಮ್ಯ ಆಳವಾದ ಧರ್ಮಗಳ ಲವಲೇಶವು ರತಿ ಭಾವದಲ್ಲಿ ಕಾಣದು. ಆದ್ದರಿಂದ ರತಿ ಸ್ನೇಹ ಸತಿಗಳು ಒಂದೇ ವರ್ಗದ ಭಾವಗಳೆಂದು ಹೇಳಲಾಗದು. ಮತ್ತು ಇವುಗಳನ್ನು ಹೀಗೆ ತೂಗುವದರಿಂದ ರತಿಗಿಂತ ಮಿತ್ರಮಿತ್ರರ ಸ್ನೇಹವೂ ಅದಕ್ಕಿಂತ ಜೀವದೇವರ ನಿರಂತರ ಸ್ನೇಹವೂ ಒಂದಕ್ಕಿಂತ ಒಂದು ಮಿಗಿಲಾಗಿ ತೋರುವವು.

ಶಿವಶರಣರು 'ಲಿಂಗ ಪತಿ, ಶರಣ ಸತಿ' ಎಂಬ ಒಂದಲಗಿನಿಂದ ಈ ಸತೀಭಾವವನ್ನು ಸಾಧಿಸಿದರು. ಈ ಸಾಧನೆಯಿಂದ ಅವರು ಜೀವಪ್ರಪಂಚದ ಘಟಕಾವಯವಗಳನ್ನು ಮಾರ್ಪಡಿಸಿ ಶಿವಪ್ರಪಂಚದ ಘಟಕಾವಯವಗಳಲ್ಲಿ ಅಡಗಿಸಿದರು. ಕಾಮ ಕ್ರೋಧಾದಿ ಷಡ್ವೈರಿಗಳು ಒಂದಿಲ್ಲ ಒಂದು ರೂಪದಲ್ಲಿ ತೋರುವವೆಂಬುದು ಅವರ ಅನುಭವಕ್ಕೆ ನಿಲುಕಿತು. ಹ್ಯೂಮ್ ತತ್ತ್ವಜ್ಞಾನಿಯು ಹೇಳುವಂತೆ ಸ್ಥಾನಭ್ರಷ್ಟವಾದ ವಿಷಯವೇ ವಿಷ. (Matter out of place is dirt) ಎಂಬ ಅನುಭವವನ್ನು ಅವರು ಅರಿತವರಾಗಿದ್ದರು. ಆದ್ದರಿಂದಲೇ ಸ್ಥಾನಭ್ರಷ್ಟವಾಗಿರುವದರಿಂದ ಕೆಡಕೆಂದು ಕಾಣುವ ಕಾಮಕ್ರೋಧಾದಿಗಳ ಸದುಪಯೋಗವನ್ನು ಮಾಡಿಕೊಳ್ಳುವ ಸಮ್ಯಕ್ ದೃಷ್ಟಿಯನ್ನು ( Right angle of vision ) ಸಂಪಾದಿಸಿಕೊಂಡರವರು. ಚೆನ್ನಬಸವಣ್ಣನು ಹಾಡಿದ

**ಶಿವಭಕ್ತಿಯುಳ್ಳವಂಗೆ ಕಾಮಬೇಡ, ಕ್ರೋಧಬೇಡ, ಲೋಭಬೇಡ, ಮೋಹಬೇಡ, ಮದಬೇಡ, ಮತ್ಸರಬೇಡ. ಶಿವಭಕ್ತಿಯುಳ್ಳವಂಗೆ ಕಾಮಬೇಕು, ಕ್ರೋಧಬೇಕು, ಲೋಭಬೇಕು, ಮೋಹಬೇಕು, ಮದಬೇಕು, ಮತ್ಸರಬೇಕು. ಬೇಕೆಂಬುವದಕ್ಕಾವ ಗುಣ? ಕಾಮಬೇಕು ಲಿಂಗದಲ್ಲಿ, ಕ್ರೋಧಬೇಕು ಕರಣಂಗಳಲ್ಲಿ, ಲೋಭಬೇಕು ಪಾದೋದಕ ಪ್ರಸಾದದಲ್ಲಿ, ಮೋಹಬೇಕು ಗುರುಲಿಂಗಜಂಗಮದಲ್ಲಿ, ಮದಬೇಕು ಶಿವಾಚಾರ ಘನವೆಂಬಲ್ಲಿ, ಮತ್ಸರಬೇಕು ಹೊನ್ನುಹೆಣ್ಣುಮಣ್ಣಿನಲ್ಲಿ, ಇಂತೀ ಸದ್ಗುಣವಿರಬೇಕು. ಬೇಡೆಂಬುದಕ್ಕಾವ ಗುಣ? ಕಾಮಬೇಡ ಪರಸ್ತ್ರೀಯರಲ್ಲಿ, ಕ್ರೋಧಬೇಡ ಗುರುವಿನಲ್ಲಿ, ಲೋಭಬೇಡ ತನು ಮನಧನದಲ್ಲಿ, ಮೋಹಬೇಡ ಸಂಸಾರದಲ್ಲಿ, ಮದಬೇಡ ಶಿವಭಕ್ತರಲ್ಲಿ, ಮತ್ಸರಬೇಡ ಸಕಲ ಪ್ರಾಣಿಗಳಲ್ಲಿ–ಇಂತೀ ಷಡ್ವಿಧ ಗುಣವನರಿದು ಮೆರೆಯ ಬಲ್ಲಡೆ ಆತನೇ ಸದ್ಭಕ್ತ ಕಾಣಾ ಕೂಡಲ ಚೆನ್ನಸಂಗಮದೇವಾ.**

ಎಂಬ ವಚನವು ಮಾರ್ಪಾಡುಗೊಳಿಸುವ ಈ ಉದಾತ್ತ ಭಾವನೆಯನ್ನು ಎಷ್ಟು ಸುಂದರವಾದ ರೀತಿಯಲ್ಲಿ ವಿವರಿಸುತ್ತದೆ ಎಂಬುದನ್ನು ಮನಗಾಣಬಹುದು. ಪ್ರೇಮವ ಪರಸ್ತ್ರೀಯರಲ್ಲಿಟ್ಟಾಗ ಅದು ಕಾಮವಾಗಿಯೂ ಕಾಮವ ಲಿಂಗದಲ್ಲಿಟ್ಟಾಗ ಅದು ನಿಜವಾದ ಪ್ರೇಮವಾಗಿಯೂ ಪರಿಣಮಿಸುತ್ತದೆ. 'ಕಂಗಳ ಕಾಮಿಯಯ್ಯಾ ಪ್ರಭುದೇವರು' ಎಂದು ಅಲ್ಲಮಪ್ರಭುವಿನ ಬಗ್ಗೆ ಶರಣರು ತಿಳಿಸುವ ವಚನಗಳು ಇಲ್ಲವೆ ಬಸವಣ್ಣನು ತನ್ನ ಅನುಭವವನ್ನು ತಿಳಿಯಪಡಿಸುವ

ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿವರಿವುತ್ತ ಸುರಿವುತ್ತ ಎಂದಿಪ್ಪೆನೋ, ನೋಟವೆ ಪ್ರಾಣವಾಗಿ ಎಂದಿಪ್ಪೆನೋ, ಕೂಟವೆ ಪ್ರಾಣವಾಗಿ ಎಂದಿಪ್ಪೆನೋ, ಎನ್ನ ಅಂಗವಿಕಾರದ ಸಂಗವಳಿದು ಕೂಡಲ ಸಂಗಯ್ಯ ಲಿಂಗ ಲಿಂಗವೆನ್ನುತ್ತ ?

ಎಂಬ ವಚನವು, ಕಾಮವು ನಿಜವಾದ ಪ್ರೇಮದಲ್ಲ ಅದು ಹೇಗೆ ಮಾರ್ಪಾಡಾಗುವದೆಂಬುದನ್ನು ತಿಳಿಸುತ್ತವೆ.

ಜಂಗು ತಿನ್ನುವುದು ಕಬ್ಬಿಣಕ್ಕೆ ಸ್ವಾಭಾವಿಕವಾದುದು. ಆದರೆ ಪರುಷ ಮುಟ್ಟಿದ ಅದೇ ಕಬ್ಬಿಣವು ಬಂಗಾರವಾಗಿ ಜಂಗು ತಿನ್ನದು, ಎಂದು ಹೇಳುವದಿದೆಯಷ್ಟೇ! ಕಾಮವು ತುಕ್ಕನ್ನು ಎಂದಾದರೂ ಹಿಡಿಯುವದೇ! ಲಿಂಗಪ್ರೇಮವಾಗಿ ಪರಿಣಾಮಗೊಂಡ ಕಾಮವು ಮಾತ್ರ ಎಂದೂ ತುಕ್ಕನ್ನು ಹಿಡಿಯದು.

ನಿಮ್ಮ ನೋಟವನಂತ ಸುಖ, ನಿಮ್ಮ ಕೂಟ ಪರಮಸುಖವಯ್ಯಾ. ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು. ಕೂಡಲ ಸಂಗಮದೇವಾ, ನಿಮ್ಮ ನೋಡಿ ನೋಡಿ ಮನದಲ್ಲಿ ರತಿಹುಟ್ಟಿ ನಿಮಿರ್ದವೆನ್ನ ಕಂಗಳು.

ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಂಗಳು ಕಡೆಗೋಡಿವರಿದವಯ್ಯಾ. ಎನ್ನಶ್ರು ಜಲಂಗಳು ಆಲಿಕಲ್ಲರೂಹಿನಂತೆ ಅರಗಿನ ಪುತ್ಥಳಿಯಂತೆ. ತನು ಪುಳಕಿತವಾದ ಬೆವರು ಬಿಂದುಗಳೆಲ್ಲ ಭಕ್ತಿರಸದ್ರವ್ಯವಯ್ಯಾ. ಕೂಡಲ ಸಂಗಮದೇವಯ್ಯಾ ನಿಮ್ಮ ದರ್ಶನ ಸ್ಪರ್ಶನದಿಂದ ಮನ ಒಲಿದು ನೆರೆವ ಭರವ ನಾನೇನೆಂಬೆನಯ್ಯಾ.

ಅಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು, ಹಾಡಿ ನಾಲಗೆ ದಣಿಯದು ಇನ್ನೇವೆನಿನ್ನೇವೆನಯ್ಯಾ. ನಾ ನಿಮ್ಮ ಕೈಯಾರೆ ಪೂಜಿಸಿ ಮನದಣಿಯಲೊಲ್ಲದು ಇನ್ನೇವೆ ನಿನ್ನೇವೆನಯ್ಯಾ. ಕೂಡಲ ಸಂಗಮದೇವ ಕೇಳಯ್ಯಾ ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ.

ಇತ್ಯಾದಿಯಾದ ವಚನಗಳಲ್ಲಿ ಭಕ್ತಿಯ ಉಕ್ಕೂ ಪ್ರೇಮದ ತರಂಗವೂ ನಿಷ್ಕಳಂಕ ಸತೀಭಾವವೂ ಎಷ್ಟು ಸುರಮ್ಯವಾಗಿ ವ್ಯಕ್ತವಾಗಿದೆ ಎಂಬುದನ್ನುಮನಗಾಣಬಹುದು.

ಅನುಭವದೃಷ್ಟಿಯಿಂದ ಕಾಮವು ಲಿಂಗಪ್ರೇಮದಲ್ಲಿ ಪರಿಣಾಮಗೊಂಡರೆ ಒಳ್ಳೆ ಮನೋಹರವಾದ ರೀತಿಯಲ್ಲಿ ಹೊರಹೊಮ್ಮುವದೆಂಬುದು ತಿಳಿದು ಬಂತು. ಸಾಹಿತ್ಯದೃಷ್ಟಿಯಿಂದ ನೋಡಿದರೆ ಈ ಲಿಂಗಪ್ರೇಮವು ಕಡಮೆಯ ತರಗತಿಯ

ಲ್ಲೇನೂ ಕಂಡು ಬರುವದಿಲ್ಲ. ಸಾಹಿತ್ಯದಲ್ಲಿ ಲಿಂಗಪರವಾಗಿ ಹಾಡಿದ ವಚನಗಳು ಅನೇಕವಾಗಿವೆ.

ಎನ್ನ ಸರ್ವಾಂಗವನು ನಿನ್ನ ಪರಿಣಾಮಕ್ಕೆ
ಚನ್ನಾಗಿ ಸಲಿಸುವೆನು ಎಲೆ ಲಿಂಗವೆ !

ಎಂದು ನುಡಿದು, ತನ್ನ ಅಂಗಾಂಗಗಳಲ್ಲಿ ದಾಸಿ ತೊತ್ತು ಹೆಂಗಳು ಕೆಳದಿ ಸತೀಭಾವವ ಸ್ಥಿರಗೊಳಿಸಿ, ಭ್ರಾಂತಿಭ್ರಮೆಯಳಿವ ಕಂತು ಹರ ಶಿವಷಡಕ್ಷರಿಯು ಸರ್ವ ಸಮರ್ಪಣದ ಸೇವಾಭಕ್ತಿಯ ಧುರೀಣತೆಯಿಂದ ಕೂಡಿದ ಮುಪ್ಪಿನ ಷಡಕ್ಷರಿಯ ಪ್ರಸನ್ನ ವಾಣಿಯಲ್ಲಿ ಸರ್ವ ಇಂದ್ರಿಯಗಳನ್ನೂ ಮಾರ್ಪಾಡುಗೊಳಿಸುವ ಕ್ರಿಯಾಪರತೆಯು ಕೆಚ್ಚಿದೆ. ಶಾಂತಿಕಳಾಸಂಪನ್ನತೆಯಿದೆ. ನಿಶ್ಚಿಂತ ಪ್ರವರ್ತನೆಯಿದೆ.

ಲಿಂಗವ ನೋಡವ್ವಾ । ತನುವಿನ
ಸಂಗವು ಬೇಡವ್ವಾ ॥
ಭಂಗಬಡುವ ವಿವಿಧಾಂಗದೊಳಿದ್ದರು
ರಂಗುಗೆಡದ ಬಹು ಮಂಗಳಕರ ಶಿವ ॥ ೧ ॥

ಕಂಗಳನೊಡಗೂಡಿ । ಬಗೆಬಗೆ
ರಂಗಾಗುತ ಮಾಡಿ ॥
ಅಂಗದೊಳಗೆ ಬಹಿರಂಗದೊಳಗೆ ಬೆಳ
ದಿಂಗಳವೊಲ್ ಭುವನಾಂಗಳ ಬೆಳಗಿಪ ॥ ೨ ॥

ಖಂಡವೆನಿಸುತಿಲ್ಲಿ । ಈ ಮಲ
ಭಾಂಡದ ಒಡಲಲ್ಲಿ ॥
ಪಿಂಡವಳಿಯೆ ಗಗನಾಂಡದ ಪರಿಯು
ಖಂಡವೆನಿಸಿ ಬ್ರಹ್ಮಾಂಡವ ಬಳಸುವ ॥ ೩ ॥

ಸಡಗರದೊಳಗಿಹುದು । ಇದು ಬಹು
ಒಡಲೊಳಗಡಗಿಹುದು ॥
ಎಡಬಲದೊಡಲಿನ ಬುಡವನು ಕಡಿದೊಡೆ
ಪೊಡವಿಯು ಕೋಟಿಗೆ ಎಡೆಯಾಗುವ ಘನ ॥ ೪ ॥

ತನುವಿನೊಳಗೆ ಮೂಡಿ । ಚಲಿಸುವ
ಮನಸಿನೊಡನೆ ಕೂಡಿ ॥
ಕನಕಧನಾಂಗನೆ ಮನೆಗಳ ರೂಪದಿ
ಜನಿಸುತ ತೋರುವ ಜಗವಾಗಿರುವೀ ॥ ೫ ॥

ಎರಡೆಂಬುದ ಪಿಡಿದು । ಬರಿದೇ
ಸೆರೆಯೊಳಗಡಗಿಹುದು ॥
ಕರುಣವು ಗುರು ಶಂಕರನೊಳ್ಪರೆತರೆ ।
ತೆರೆಕೊರೆಯಿಲ್ಲದೆ ನಿರವಧಿ ಎನಿಸುವ ॥ ೬ ॥

ಎಂದು ಶಂಕರಾನಂದನು ಹಾಡುವ ಜ್ಞಾನಪರ ಮಾತುಗಳು ಭ್ರಾಂತಿಭ್ರಮೆಗಳಳಿದು ಶಾಂತಿಕಳಾಸಂಪನ್ನನಾಗಿ ನಿಶ್ಚಿಂತಪ್ರವರ್ತನೆಯ ನಡೆಗಲಿತ ಮಹಿಮನ ನಿಲವನ್ನೂ ಮನೋಹರವಾಗಿ ಚಿತ್ರಿಸುತ್ತವೆ. 'ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾದ' ಇಷ್ಟಲಿಂಗವು ಬ್ರಹ್ಮಾಂಡದ ಕುರುಹು; ಅದು ಕ್ರಿಯೆಯಲ್ಲಿ ವ್ಯಕ್ತಗೊಳ್ಳುವದು. ಬ್ರಹ್ಮಾಂಡದಲ್ಲಿ ಹುದುಗಿದ ಕಳೆಯೇ ಪ್ರಾಣಲಿಂಗವು; ಅದು ಜ್ಞಾನದಲ್ಲಿ ಅಡಗಿಹುದು. ಈ ಕ್ರಿಯೆ ಈ ಜ್ಞಾನ ಇವುಗಳನ್ನು ಪ್ರಕಟಗೊಳಿಸುವ ವಚನಗಳಲ್ಲಿ ಕ್ರಿಯಾಜ್ಞಾನಗಳ ಬೆಸುಗೆಯನ್ನು ಲಕ್ಷಿಸುವಂತೆ ಭಾವಭಾಷೆಗಳ ಬೆಸುಗೆಯನ್ನೂ ಲಕ್ಷಿಸಬೇಕು. ಬೆಡಗು ಬಿನ್ನಾಣಗಳಿಂದ ಕೂಡಿದ ನುಡಿಯೇ ಸಾಹಿತ್ಯವೆಂದು ಸ್ಥೂಲವಾಗಿ ಹೇಳುವುದಾದರೆ ಸಾಹಿತ್ಯದೃಷ್ಟಿಯಿಂದಲೂ ಈ ವಚನಗಳು ಗಮನಕ್ಕೆ ಎಡೆ ಗುಡುವವು. ಈ ದೃಷ್ಟಿಯಿಂದ ಮುಪ್ಪಿನ ಷಡಕ್ಷರಿಯ ಇನ್ನೊಂದು ವಚನದ ಸೊಗಸಿಲ್ಲಿ.

ಎಳೆ ಮುತ್ತಿನ ನವರತ್ನದ
ಥಳಥಳಿಸುವ ನೀಲ ಪವಳ ಪಚ್ಚೆಯ ಮಳಲಿಂ
ಥಳಥಳ ಗುಳುಗುಳು ನಾದದ
ಹೊಳೆಯೊಳಗನವರತ ಲಿಂಗ ಮಜ್ಜನಗೆಯ್ವೆಂ

ಗಗನವನಡರುವ ಗಿರಿಯೊಳ್
ಮಿಗೆ ಬೆಳದಿಹ ಗುಲ್ಮಲತೆಯ ವೃಕ್ಷದ ನೆಳಲೊಳ್
ಸೊಗಸುವ ಮಡುವಿನ ಜಲದಿಂ
ಮಿಗೆ ಮನದಣಿವಂತೆ ಲಿಂಗ ಮಜ್ಜನಗೆಯ್ವೆಂ

ಕೆರೆ ತೊರೆ ಸರು ಬೆಂಚೆಗಳಾ
ಒರತೆಗಳಾ ಕೂಪ ಕೊಳದ ನಿರ್ಮಲ ಜಲಮಂ
ಸರಸಿಜದೆಸವಘ್ರ್ಯಗಳಿಂ
ಹರನಿಗೆ ಪುರಹರನಿಗೊಲಿದು ಮಜ್ಜನಗೆಯ್ವೆಂ

ಒತ್ತೊತ್ತಿ ಬೆಳೆದ ಬಿಲ್ವದ
ಕತ್ತರಿಸೆಯೆ ಕಾತು ತಳಿತ ತಣ್ಪಿನ ವನದೊಳ್
ಚಿತ್ತಜವೈರಿಯ ಚರಣವ
ನರ್ತಿಯೊಳಾ ಪತ್ರೆಯಿಂದೆ ಪೂಜಿಸೆನೊಲವಿಂ

ಸೊಂಪಿನ ಝೊಂಪಿನ ಗುಂಪಿನ
ನುಣ್ಪಿನ ಸಂಪಿಗೆಯ ವನದ ತಣ್ಪಿನ ನೆಳಲೊಳ್
ಕಂಪಿನ ಸಂಪಿಗೆಯುರಳಿಂ
ಬಿಣ್ಪಿನ ಚಲುವಂಗಧರನ ಪೂಜಿಪೆನೊಲವಿಂ

ಭೃಂಗಂ ಬಳಸದ ತಣ್ಪಿನ
ಶೃಂಗಾರದ ವನಗಳಲ್ಲಿ ವರ ಕುಸುಮಗಳಿಂ
ಸಂಗವುಪೂಗಿ ಷಡಕ್ಷರ
ಲಿಂಗವನನವರತ ದಿಡದಿ ಪೂಜಿಪೆನೊಲವಿಂ

ತಾಳ ಲಯ ದೇಸಿಗಳಿಂದ ಬೆರೆತ ಪೊಸದೊಂದು ಲಾಸ್ಯದ ಭಾವನೆಯು ಈ ಶಬ್ದ ಗಳಲ್ಲಿ ಮಿರುಗುಗೊಂಡಿದೆ.

ವಚನ ವಾಙ್ಮಯವನೋದುವದರಿಂದ ಆವ ಉದ್ಧಾರ ಕಾರ್ಯವು ಕೈಗೂಡುವದು? ಆವ ಉತ್ಕೃಷ್ಟ ಭಾವನಾವಿಕಾಸವು ದೊರೆಕೊಳ್ಳುವದು? ಇದನ್ನಷ್ಟು ವಿವರಿಸಿದರೆ ಸಾಹಿತ್ಯದಲ್ಲಿ ಅದರ ಸ್ಥಾನವನ್ನು ಹೇಳಿದಂತಾಯಿತು. ರತ್ಯಾದಿ ಸ್ಥಾಯೀಭಾವಗಳಿಗೆ ಸಾಹಿತ್ಯದಲ್ಲಿ ಮನ್ನಣೆಯಿದೆಯಷ್ಟೇ! ಸತೀಭಾವವು ವಚನ ಸಾಹಿತ್ಯದಲ್ಲಿ ಮೇಲ್ಮೆಯನ್ನು ಪಡೆದಿಹುದೆಂಬುದನ್ನು ಮನಗಂಡಿಹೆವು. ಇನ್ನು ರತಿ ಸತಿ ಭಾವಗಳ ಪರ್ಯವಸಾನವನ್ನಿಷ್ಟು ಬಗೆಯುವಾ. ರತಿಭಾವದಲ್ಲಿ ಮೊದಲುಗೊಂಡ ಕಾಮವು ಕ್ರೋಧದಲ್ಲಿಯೂ, ಕ್ರೋಧವು ಲೋಭದಲ್ಲಿಯೂ, ಲೋಭವು ಮೋಹದಲ್ಲಿಯೂ, ಮೋಹವು ಮದದಲ್ಲಿಯೂ, ಮದವು ಮತ್ಸರದಲ್ಲಿಯೂ ಆಡಗುತ್ತ ಹೋಗಿ ಕಡೆಗೆ ಈ ಕಾಮದ ಕೊನೆಯು ಮತ್ಸರದಲ್ಲಿ (ಅಸೂಯೆಯಲ್ಲಿ) ಕಾಣುವದು. ಆದರೆ ಅದೇ ಸತೀಭಾವದಲ್ಲಿ ಉಗಮಗೊಂಡ ಪ್ರೇಮವು ಅರ್ಥಾತ್ ಲಿಂಗ ಪ್ರೇಮವು ಅನಸೂಯೆಯಲ್ಲಿ ಪರ್ಯವಸಾನವನ್ನು ಹೊಂದುವುದು. ಅನಸೂಯೆಯೆಂದರೆ ಸದ್ಭಾವ. ಅನಸೂಯೆಗೆ ಅತ್ರಿ ಋಷಿಯು ಗಂಡನೆಂದು ಹೇಳುವದುಂಟಷ್ಟೇ! ಅತ್ರಿ ಋಷಿಯೆಂದರೆ ಗುಣತ್ರಯ ವಿರಹಿತವಾದ ನಡೆಯ ಪ್ರತೀಕವು; ಸತ್ಕ್ರಿಯಾ ಮೂರ್ತಿಯು. ಅನಸೂಯೆ ಅತ್ರಿಗಳಿಂದ ಜನಿಸಿದ ಶಿಶುವು ದತ್ತಾತ್ರೇಯನು. ದತ್ತ ಅತ್ರೇಯನು ಅಂದರೆ ಅತ್ರಿ ಋಷಿಯಿಂದ ಆರಾಧನೆಗೋಸುಗ ಕೊಡಲ್ಪಟ್ಟ ವಸ್ತುವು. ಸದ್ಭಾವದ್ಯೋತಕವಾದ ಅನಸೂಯೆ, ಸತ್ವರಜತಮವಿರಹಿತವಾದ ನಡೆಯನ್ನು ವ್ಯಕ್ತಗೊಳಿಸುವ ಸತ್ಕ್ರಿಯಾವಂತ ಅತ್ರಿ, ಇವರ ಒಡನಾಟದಿಂದ ಜನಿಸುವ ಸತ್-ಚಿತ್-ಆನಂದಮಯ ಮೂರ್ತಿಯು – ಸುಜ್ಞಾನ ಮೂರ್ತಿಯು ಈ ದತ್ತಾತ್ರೇಯನು. ಪೌರಾಣಿಕ ಈ ಸಂಗತಿಯನ್ನು ಬದಿಗಿರಿಸಿ ತಾತ್ವಿಕವಾಗಿ ಹೇಳುವುದಾದರೆ ಇದು ಸತ್ಕ್ರಿಯಾಸುಜ್ಞಾನಗಳಿಂದುದಿಸಿದ ಸ್ವಾನುಭಾವವು. ಸ್ವಾನುಭಾವವು

ಸಚ್ಚಿದಾನಂದಮಯುವಾದುದು. ಇದು ಸ್ವಾನುಭವಿಗಲ್ಲದೆ ಅನ್ಯರಿಗೆ ಅಜ್ಞೇಯವಾದುದು. ವಚನ ವಾಙ್ಮಯವು ಈ ಅಜ್ಞೇಯವನ್ನು ಜ್ಞೇಯಗೊಳಿಸಲು ಗುರು-ಲಿಂಗ-ಜಂಗಮವೆಂಬ ಮೂರ್ತಿತ್ರಯಗಳಿಂದ ಹವಣಿಸಿತು. ಹೀಗೆ ಪ್ರೇಮದ ಪ್ರಭಾವದಿಂದ ಅನಸೂಯೆಯಾಗಿ ಸದ್ಭಾವಗೊಂಡು ಸುಜ್ಞಾನವ ಪಡೆದು ಅದರಿಂದ ಸ್ವಾನುಭಾವ ಸಂಪಾದನೆಗೊಳಿಸಿದ ಮೇಲ್ಮೆಯು ವಚನ ಸಾಹಿತ್ಯಕ್ಕಿದೆ. ಈ ಸ್ವಾನುಭಾವ ಸಂಪಾದನೆಯನ್ನೇ ಗುರು-ಲಿಂಗ-ಜಂಗಮ ಮೂರರಲ್ಲಿ ದೃಷ್ಟಗೊಳಿಸಿದ ಘನತೆಯು ವಚನ ಸಾಹಿತ್ಯಕ್ಕಿದೆ. ಇಂಥ ಸ್ವಾನುಭಾವ ಸಂಪಾದಕನು ಗುಣತ್ರಯಗಳನ್ನು ಅಳಿದುಕೊಂಡು, ಸಚ್ಚಿದಾನಂದ ಮೂರ್ತಿಯಾಗಿ, ಗುರು-ಲಿಂಗ-ಜಂಗಮದ ರಹಸ್ಯವನ್ನು ಅಳವಡಿಸಿಕೊಂಡು, ಮೈದೋರಿದ ಸುಜ್ಞಾನಿ-ನಿರಹಂಕಾರರ ಶಿಶುವು ಅಲ್ಲಮಪ್ರಭುವು. ಅಲ್ಲಮಪ್ರಭುವಿನ ಯೋಗದಿಂದ ಉದ್ಧಾರಕಾರ್ಯವೂ ಉತ್ಕೃಷ್ಟಭಾವನಾವಿಕಾಸವೂ ದೊರೆಕೊಳ್ಳುವವೆಂಬುದನ್ನು ವಚನವಾಙ್ಮಯವು ಮುಕ್ತಕಂಠವಾಗಿ ಹೇಳುತ್ತಿದೆ. ಈ ಸ್ವಾನುಭಾವ ಸಂಪಾಧಕನ ನಿಲವನ್ನು ಶಿವಶರಣರು ಬಣ್ಣಿಸಿದುದನ್ನು ಇಲ್ಲಿ ನೋಡಬಹುದು.

ಸ್ವಾನುಭಾವದುದಯದಿಂದೆ ಜ್ಞಾನನೇತ್ರ ಮುಸುಕ ತೆಗೆದು ।
ತಾನು ತನ್ನ ನಿಜವ ನೋಡಿ ತಿಳಿದ ಮಹಿಮನು ॥ ಪ ॥

ಚಿತ್ತ ಬಿಂದು ಪ್ರಕೃತಿ ಹಿಂಗಿ ನಿತ್ಯಾನಿತ್ಯ ವಿವೇಕದಿಂದ ।
ಲತ್ತ ನಿಲುಕಿ ನೋಡಿ ಕಂಡ ಸಕಲದಳಿವನು ॥
ತತ್ವದಲಿ ವಿವೇಕಿಯಾಗಿ ನಿಶ್ಚಲದ ನಿಜಾಂತರಂಗ ।
ತತ್ವಚಯವನ್ನೈದಿ ಸುಖದ ಮುಖವನರಿದನು ॥ ೧ ॥

ಜ್ಞಾನ ಮುಕುರದೊಳಗೆ ನೋಡಿ ತಾನು ತನ್ನ ಕುರಹವಿಡಿದು ।
ತಾನು ತನಗೆ ಅನ್ಯವಿಲ್ಲವೆಂಬ ಭೇದವಾ ॥
ತಾನೆಯರಿದು ಮಾಯೆ ಮಿಥ್ಯವಂ ನಿವೃತ್ತಿ ಮಾಡಿ ಶಿವ ।
ಧ್ಯಾನದಲ್ಲಿ ಮನವನಿತ್ತ ಸೌಖ್ಯ ಶರಣನು ॥ ೨ ॥

ಹಿಂದ ಹರಿದು ಹರಿದ ಹಿಂದನೊಂದು ಮಾಡಿ ಬೆರೆಸದಾ ।
ನಂದದಿಂದಲೈದಿ ಮನೋಭಾವಿಯಾಗಿ ।
ಬಿಂದು ನಾದ ಕಲತ್ರಯದ ಸಂದನಳಿದು ಚಿತ್‌ಸ್ವರೂಪ ।
ಬಿಂದುವಿನೊಳು ನಿಂದು ಮೆರೆದ ಸೌಖ್ಯ ಶರಣನು ॥ ೩ ॥

ಶಕ್ತಿಯೊಳು ಶಿವಾತ್ಮನಡಗಿ ಶಕ್ತಿರಹಿತನೆಂಬ ಬೆಡಗ ।
ಶಕ್ತಿ ಮುಖದೊಳರಿದು ಶಕ್ತಿಸಂಗ ಭಂಗ ವಿ ॥
ರಕ್ತಿಯಿಂದೆ ಗೆಲಿದು ಪರನು ಶಕ್ತಿಸುಖವ ಕಂಡ ಸುಖಿಯು ।
ಚಿತ್ತದರಿವು ಜಗವ ನುಂಗಿಯುುಗುಳದಿರ್ದುದು ॥ ೪ ॥

ಆದಿ ಮಧ್ಯ ಅಂತ್ಯವೆಂಬ ಭೇದವಾಕ್ಯದೊಳಗೆ ಪುಗದ ।
ನಾದಿ ಸಿದ್ಧನಾಗಿ ತನ್ನ ತಾನೆ ಕಂಡು ಅ ॥
ಭೇದ್ಯಪದವ ನೈದಿ ಕೂಡಲ ಚನ್ನ ಸಂಗನಲ್ಲಿ ।
ಭೇದವಿಲ್ಲದಿಪ್ಪ ದಿವ್ಯಜ್ಞಾನಿ ನೋಡಾ ॥ ೫ ॥

ಸಾಹಿತ್ಯದ ಹಿರಿಮೆಯನ್ನು ಕುರಿತು ವಿಚಾರಿಸುವಾಗೆಲ್ಲ ಮುಂಬರುವ ಮುಖ್ಯ ವಿಷಯವೆಂದರೆ ಅದು ನುಡಿಯ ಬೆಡಗಿನಿಂದ ಮಿರುಗುಗೊಂಡಿರಬೇಕು, ಆದರಿಂದ ಹೊರಹೊಮ್ಮುವ ರಸದ ಆಸ್ವಾದನೆಯಿಂದ ಉತ್ಕೃಷ್ಟಭಾವನಾವಿಕಾಸವಾಗಬೇಕು, ಮತ್ತು ಅದರಿಂದ ಆನಂದಜೀವನದ ಉತ್ತರೋತ್ತರ ಬೆಳವಣಿಗೆಯಾಗಬೇಕು, ಎಂಬುದು. ವಚನಸಾಹಿತ್ಯವು ಭಾವಭಾಷೆಗಳ ಹಸನಾದ ಬೆಸುಗೆಯಿಂದ ಸತೀ ಸ್ಥಾಯೀಭಾವದ ಪದರಿನಲ್ಲ ರಸಾಸ್ವಾದನೆಗೆ ಇಂಬುಗೊಟ್ಟುಲಿಂಗಾನಂದ ಶರಧಿಯಲ್ಲಿ ಪ್ರೈಮರೆಯಲು ಅನುಕೂಲಿಸಿಕೊಡುವದು. ಲಿಂಗವಂತರ ಪಾರಿಭಾಷಿಕ ಶಬ್ದಗಳಲ್ಲಿ ಯೇ ಇದನ್ನು ಹೇಳುವದಾದರೆ ವೈಯಕ್ತಿಕವಾಗಿ ವಚನವಾಙ್ಮಯದ ಒಡನಾಟ ದಿಂದ ಅನಿಷ್ಟ ಪರಿಹಾರಗೊಳಿಸುವ ಇಷ್ಟ ಶುದ್ಧಿಯನ್ನೂ ಅದರ ರಸಾಸ್ವಾದನೆಯಿಂದ ಹರಣವ ಹದಗೊಳಿಪ ಪ್ರಾಣಸಿದ್ಧಿಯನ್ನೂ ಅದರಿಂದೊದಗುವ ಆನಂದದಿಂದ ಉತ್ಕೃಷ್ಟಭಾವಪ್ರಸಿದ್ಧಿಯನ್ನೂ ಉಂಟು ಮಾಡಿಕೊಡುವ ಇಷ್ಟ-ಪ್ರಾಣ-ಭಾವ ಲಿಂಗಗಳ ಅನುಸಂಧಾನದ ರಹಸ್ಯವು ಇದರಿಂದ ತಿಳದುಬರುವದು. ಮತ್ತು ಸಾಮೂ ಹಿಕ ಆಚರಣೆಗೆ ಅನುಕೂಲಿಸುವಂತೆ ನುಡಿಯ ಬೆಡಗಿನಿಂದ ಗುರುತತ್ವ ಪ್ರಸಿದ್ಧಿಯೂ, ರಸಾಸ್ವಾದನೆಯಿಂದ ಲಿಂಗತತ್ವ ಪ್ರಕಾಶವೂ ಹಾಗು ಆನಂದಜೀವನದಿಂದ ಜಂಗಮ ತತ್ವ ವಿಮರ್ಶೆಯೂ ಅಂಗಕ್ಕಳವಡುವವು. ಇದೂ ಅಲ್ಲದೆ, ಈ ವಚನಸಾಹಿತ್ಯದ ನುಡಿ ಯ ಬೆಡಗಿನಿಂದ ಅಂತರಂಗದ ಕರಣೇಂದ್ರಿಯಂಗಳಲ್ಲಿ ಅರಿವನ್ನು,ಅದರ ರಸಾಸ್ವಾದನೆ ಯಿಂದ ಬಹಿರಂಗದ ಪ್ರಪಂಚದಲ್ಲಿ ಅರಿವನ್ನು, ಅದರ ಆನಂದದಿಂದ ಆತ್ಮಸಂಗದಲ್ಲಿ ಅರಿವನ್ನು ಹೇಗೆ ಕಾಯ್ದುಕೊಳ್ಳಬೇಕೆಂಬುದು ಗೊತ್ತಾಗುವದು. ಹೇಯವೆಂದು ತ್ಯಜಿಸಿಬಿಟ್ಟ ಭೂಮಿಯಲ್ಲಿ ಆದರ ಘನತೆಯನ್ನರಿತು ಜೀವನ ಸೌಂದರ್ಯದ ಪರಾ ಕಾಷ್ಠತೆಯನ್ನು ಭೋಗಿಸಲು ತಾವು ಇಲ್ಲದಂತೆ ಭೋಗಿಸಿದ ಯೋಗಿ ಶಿಖಾಮಣಿ ಗಳಾದ ಶಿವಶರಣರು ಕಟ್ಟಿದ ವಚನಸಾಹಿತ್ಯದ ಹಿರಿಮೆಯು ಇಂತಿಹುದು. ಅವರ ಉತ್ಕೃಷ್ಟ ಭಾವನಾವಿಕಾಸವು ಅನ್ಯಾದೃಶವಾದುದು. ಅವರ ವಚನಗಳಲ್ಲಿ ಜೀವಕಳೆ

ರೂಹುಗೊಂಡಿದೆ. ಪ್ರಾಣಶಕ್ತಿಯು ಸ್ಪಂದಿಸುತ್ತಿದ. ಆತ್ಮನ ಪರಿಪೂರ್ಣತೆಯು ಒಡಮೂಡಿದೆ. ಅನೇಕ ಕಡೆ ಛಂದೋಗತಿಯ ನಿನಾದದಲ್ಲಿ ಮಿರುಗುಗೊಂಡು ಅವು ವಿಶ್ವನಾದಕ್ಕೆ ಧ್ವನಿಗುಡುತ್ತಿವೆ. ನುಡಿಯು ಬೆಡಗಿನೊಡನೆ ಬೆಳೆದು ಬಂದ ಆ ನಿರಂತರ ಸ್ನೇಹ, ಆ ಭಕ್ತಿಸಾರಸ್ವಾದನೆಯ ಆನಂದಜೀವನ ಆ ಲಿಂಗಾನಂದದ ನಿಬ್ಬೆರಗಿನಲ್ಲಿ ಹೊರಹೊಮ್ಮಿದ ಸಾಮರಸ್ಯ–ಇವು ಕನ್ನಡನಾಡಿಗೆ ಹೊಸದೊಂದು ಜೀವಕಳೆಯನ್ನೇ ತುಂಬಿದುವು. ಕನ್ನಡ ಸಾಹಿತ್ಯಜೀವನವು ಚೇತನಗೊಂಡು ಹೊಸದೊಂದು ಹಾದಿಯಲ್ಲಿ ನಡೆಯುತೊಡಗಿತು. ಕನ್ನಡಿಗರ ಬಾಳುವೆಯು ಅನುಭವದ ಬಟ್ಟೆಯಲ್ಲ ಕಳಸದಂತಿರುವ ಶಿವಶರಣರ ಅನುಭವದ ಆದರ್ಶದಲ್ಲಿ ಮೇಲ್ಮೆವಡೆಯುತೊಡಗಿತು. ವಚನಸಾಹಿತ್ಯ ನಿರ್ಮಾಣಕ ಬಸವಣ್ಣನ ಶಬ್ದಗಳನ್ನು ಬಳಸಿ ಹೇಳುವದಾದರೆ ಸಾಹಿತ್ಯ ಮತ್ತು ಜೀವನಗಳು ಅಂತರಂಗ ಬಹಿರಂಗ ಆತ್ಮಸಂಗದ ಏಕತಾನತೆಯನ್ನು ಎದುರಿಟ್ಟು ಸಾಗತೊಡಗಿದುವು. ಇಂತಿದು ಸಾಹಿತ್ಯ ಸಾಮ್ರಾಜ್ಯದಲ್ಲಿ ವಚನವಾಙ್ಮಯವು ನಿರ್ಮಿಸಿದ ಸಾವಿನ್ಯತೆಯು; ಅದಕ್ಕಿರುವ ಸ್ಥಾನ ಗೌರವವು.

**ನವಕಲ್ಯಾಣಮಠ, ಧಾರವಾಡ**

೧–೧–೧೯೪೨

# ವೀರಶೈವ 'ವೆಲ್ಟನ್‌ಶಾಂಗ'

ವೀರಶೈವ ಧರ್ಮವು ಆಗಮ ನಿರೂಪಿತ ಧರ್ಮದ ಒಂದಂಗವೆಂದು ಸಾಮಾನ್ಯವಾಗಿ ಹೇಳಲಾಗುತ್ತಿದೆ. ಕ್ರಿ. ಶ. ೧೨ನೆಯ ಶತಮಾನದ ಮಧ್ಯದ ಸುಮಾರಿಗೆ ಈ ಧರ್ಮದಲ್ಲಿ ಅಭೂತಪೂರ್ವವಾದ ಒಂದು ಉದ್ಧರಣ ಕಾರ್ಯವು ನೆರವೇರಿತೆಂದು ಕರ್ಣಾಟಕದ ಐತಿಹ್ಯದಿಂದ ತಿಳಿದುಬರುವದು. ನಿಜಾಂ ಪ್ರಾಂತದ ಕಲ್ಯಾಣ ನಗರದಲ್ಲಿ ಆಳಿದ ಜೈನ ಧರ್ಮಾವಲಂಬಿ ಬಿಜ್ಜಳ ಭೂಪನಿಗೆ (೧೧೫೭—೧೧೬೭) ಮುಖ್ಯ ಮಂತ್ರಿಯಾದ ಶ್ರೀ ಬಸವಣ್ಣನು ಈ ಧರ್ಮೋದ್ಧಾರ ಕಾರ್ಯಕ್ಕೆ ಕೈನೀಡಿದವರಲ್ಲಿ ಅಗ್ರಗಾಮಿಯು. ಅವನಿಗೆ ಮನವನ್ನು ಸೆರೆಗೆಯ್ವ ಸಾಮರ್ಥ್ಯವುಳ್ಳ ದಿವ್ಯವೂ ಭವ್ಯವೂ ಆದ ವ್ಯಕ್ತಿತ್ವವಿದ್ದುದರಿಂದ ಭಾರತದ ಎಲ್ಲೆಡೆಗಳಿಂದ ಆಳು ಮೊದಲ್ಗೊಂಡು ಅರಸನವರೆಗೆ, ದೀನಮೊದಲ್ಗೊಂಡು ಧನಿಕನವರೆಗೆ, ಭೋಗಿ ಮೊದಲ್ಗೊಂಡು ಯೋಗಿಯವರೆಗೆ ನಾನಾ ಬಗೆಯ ಶೀಲ ಸ್ವಭಾವದ ವ್ಯಕ್ತಿಗಳನ್ನು ತನ್ನತ್ತ ಅವನು ಸೆಳೆದನು. ಹೀಗಾಗಿ ಅವನ ನೇತೃತ್ವದಲ್ಲಿ ಸುಮಾರು ೩೦೦ ಜನ ಸದ್ಭಕ್ತ ಶಿವಾನುಭವಿಗಳ ನೆರವಿಯೊಂದು ಸೇರಿತು. ಈ ಗುಂಪಿನಲ್ಲಿ ನಾರೀಮಣಿಗಳಿಗೆ ಮಣಿದೀಪದಂತಿದ್ದ ಅಕ್ಕ ಮಹದೇವಿಯೇ ಮೊದಲಾದ ಸುಮಾರು ೬೦ ಜನ ಹೆಣ್ಣುಮಕ್ಕಳೂ ಸೇರಿದ್ದರೆಂಬುದು ಸಂತಸವೀವ ಸಂಗತಿಯು. ಈ ಶಿವಶರಣರ ಅನುಭವದ ಆಳವನ್ನು ತಿಳಿಯಪಡಿಸುವ ವಚನಗಳು ನುಡಿಯ ಬೆಡಗಿನಲ್ಲಿ ಮೇಲ್ತರಗತಿಯ ಮಟ್ಟಕ್ಕೆ ಮುಟ್ಟಿದವುಗಳು. ಇಂಪಿನ ಸೊಂಪಿನಲ್ಲಾಗಲಿ, ಗತಿಯ ಗಮಕದಲ್ಲಾಗಲಿ, ಸೊಬಗಿನ ಶಾಂತಿಯಲ್ಲಾಗಲಿ ಈ ವಚನ ಸಾಹಿತ್ಯವನ್ನು ಸರಿಗಟ್ಟುವ ಸಾಹಿತ್ಯವನ್ನು ಕಾಣುವದರಿದು. ಆದುದರಿಂದಲೇ ಗಣಿಸಿದ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರು ಮೊದಲಾದ ಕೀರ್ತಿವೆತ್ತ ವಿದ್ವನ್ಮಣಿಗಳು ಶಿವಶರಣರ ಮನಂಬುಗುವ ಸೂತ್ರಪ್ರಾಯವಾಗಿರುವ ಈ ವಚನಗಳನ್ನು ಉಪನಿಷತ್ ಋಷಿಗಳ ವಚನಗಳಿಗೆ ಹೋಲಿಸಿದುದೂ ಉಂಟು. ಶರಣರ ಈ ವಚನಗಳು ನಿರರ್ಗಳವಾಗಿ ನೇರವಾಗಿ ದೈವೀಪ್ರೇರಣೆಯಿಂದ ಹೊರಹೊಮ್ಮಿದ ನುಡಿಗಳಿರುವುದರಿಂದ, ದೇವೋನ್ಮಾದದ ನಿಬ್ಬೆರಗಿನಲ್ಲಿ ಅಂತರಂಗದ ದಿವ್ಯಾನುಭವದ ಸೆಲೆಯಿಂದ ಹೊರಚಿಮ್ಮಿದ ನುಡಿಯ ಸೆಲೆಗಳಿರುವುದರಿಂದ, ಅಚ್ಚಳಿಯದ ಭಕುತಿಭಾವ ಮತ್ತು ನಿಚ್ಚಳವಾದ ಜ್ಞಾನಾನುಭವ ಇವನ್ನಳವಡಿಸಿಕೊಂಡ ದೇವೋನ್ಮತ್ತನ ದಿವ್ಯಶಕ್ತಿಯ ಉಸಿರು ಇವುಗಳಲ್ಲಿ ಆಡುತ್ತಿದೆ. ವೀರಶೈವ ಧರ್ಮವು ಆಗಮಾಂತ ಧರ್ಮದ ಒಂದು ಬಗೆಯೆನಿಸಿದ್ದರೂ ಆದು ಶ್ರೀ ಬಸವಣ್ಣನ ಮತ್ತು

ಅವನ ಸಂಗಡಿಗರ ಕೈಯಲ್ಲಿ ಸಂಪೂರ್ಣವಾಗಿ ಮಾರ್ಪಾಟಗೊಂಡು ಲಿಂಗವಂತ ಧರ್ಮವೆಂದು ಹೆಸರು ಹೊಂದಿತು. ಕರ್ಣಾಟಕದ ವೀರಶೈವರ ಈ ವಿಶಿಷ್ಟವಾದ ಲಿಂಗ ವಂತ ಧರ್ಮದ ತತ್ವಜ್ಞಾನದ ತಿರುಳನ್ನರಿಯುವದೇ ಈಗಿನ ನಮ್ಮ ಕಾರ್ಯವಾಗಿದೆ.

ಅಸ್ತಿತ್ವವನ್ನು ಅಲ್ಲಗಳೆಯಲಾಗದ ಈ ಜಗತ್ತಿನ ಬಗೆಗೆ ಕೂಲಂಕಷವಾದ ಮತ್ತು ಕ್ರಮಬದ್ಧವಾದ ವಿಚಾರಸರಣಿಯಲ್ಲಿ ನಿಂತು ಆಲೋಚಿಸುವುದೇ ತತ್ವ ಜ್ಞಾನವೆಂದು ರಾಬರ್ಟ್ ಆರ್ಟ್ (-೧೯೩೦-) ಎಂಬ ತತ್ವಜ್ಞಾನಿಯ ಅಭಿಪ್ರಾಯವು. ನಮ್ಮ ಸಾಮಾನ್ಯವಾದ ತಿಳಿವಿಗೆ ನಿಲುಕುವ ಜಗತ್ತು ದ್ವಂದ್ವದ ದಂದುಗದಿಂದ ಬೆರೆ ತುದು. ಮನವು ಜಗತ್ತಿನ ಇರವು ಏಕಮೇವ ಆದುದೆಂದು ನಿಶ್ಚಯಿಸಿ ಅದ್ವೈತ ದಲ್ಲಿ ಅದನ್ನು ಕಾಣಲು ಅಸಮರ್ಥವಿರುತ್ತದೆ! ಈ ಜಗತ್ತಿನ ಬಗೆಯಲ್ಲಿ 'ಮೇಲು' 'ಕೀಳು' ಇಲ್ಲವೆ 'ಊರ್ಧ್ವ' 'ಅಧಸ್' ಎಂಬ ಸ್ವರೂಪಗಳು ಎದುರಿಗಿರುವವು, ಗಾಢವಾದ ಇಲ್ಲವೆ ಬುದ್ಧಿಗೆ ನಿಲುಕದ ಮತ್ತು ರೂಢವಾದ ಇಲ್ಲವೆ ಬುದ್ಧಿಗಮ್ಯ ವಾದ ಈ ಎರಡು ವಿಂಗಡಿಕೆಗಳಿರುವವು. ಈ ಜಗತ್ತು ಘನವಾದ ಪುರುಷ ಮತ್ತು ಜಘನವಾದ ಪ್ರಕೃತಿ ಹೀಗೆ ಇತ್ತೆರನಾಗಿ ಕಾಣುವದೆಂದು ಬೇರೊಂದು ರೀತಿಯಿಂ ದಲೂ ಹೇಳಬಹುದು. ಸಾಮಾನ್ಯವಾದ ನಮ್ಮ ಮನಸ್ಸಿಗೆ ಈ ದ್ವಿವಿಧವನ್ನು ಇನಿಶ್ಚಯ್ಯವಾದ ಏಕತಾನತೆಯಲ್ಲಿ ಹೊಂದಿಸಿಕೊಳ್ಳಲು ಆಗದು. ಈ ಸ್ವರೂಪಗಳೆ ರಡು ವ್ಯವಹಾರದ ನಮ್ಮ ತಿಳಿವಿಗೆ ನಿಶ್ಚಿತವಾಗಿ ಕಾಣುವವೆಂಬುದನ್ನು ಬಗೆದು ಇವೆರಡರಲ್ಲಿಯ ತೊಡಕನ್ನು ಬಿಡಿಸಲು ಮತ್ತು ಹೊಂದಿಕೆಯನ್ನುಂಟುಮಾಡಲು ಬರುವುದೆಂಬುದನ್ನು ಸಧ್ಯದಲ್ಲಿ ಗ್ರಹಿಸಿಕೊಳ್ಳುವಾ. ನಮ್ಮ ಇರುವಿನ ಬಗೆಯಲ್ಲಿ ಅತೀಂದ್ರಿಯವಾದ ಊರ್ಧ್ವಸೃಷ್ಟಿ ಇಲ್ಲವೆ ಪುರುಷ ಮತ್ತು ಕಾಲ-ಕಾರಣ-ಅವಕಾ ಶಗಳ ಕಟ್ಟಿಗೆ ಒಳಪಡುವ ಅಧಃಸೃಷ್ಟಿ ಇಲ್ಲವೆ ಪ್ರಕೃತಿ ಇವುಗಳಲ್ಲಿ ಸಂಬಂಧವ ನ್ನುಂಟುಮಾಡುವ ಗೊಣಸೊಂದು ಇದ್ದೇ ತೀರಬೇಕೆಂದು ನಮ್ಮ ಆಳವಾದ ಮನಕ್ಕೆ ಸಹಜವಾಗಿ ತಿಳಿವಿಗೆ ಹೊಳೆಯದಿರದು. ಈವೆರಡನ್ನು ಒಳಕೊಳ್ಳುವ, ಇವೆರ ಡನ್ನು ಬಳಸಿಕೊಳ್ಳುವ ಮತ್ತು ಇವೆರಡನ್ನು ಹೊಂದಿಕೊಳ್ಳುವ ಪದವೊಂದು ಅನಸ್ಕೆ ನಿಲುಕಬೇಕು. ಒಂದನ್ನು ಕೆಡಿಸಿ ಇನ್ನೊಂದನ್ನು ಕೊನರಿಸುವದಕ್ಕೆ ಕೈನೀಡದೆ ಇವೆರಡರಲ್ಲಿ ಮೇಳವುಂಟಾಗುವಂತೆ ಮಾಡುವುದು ಅದರ ಧರ್ಮವಾಗಿ ರುವದು.

ಪ್ರಕೃತಿ ಪುರುಷರನ್ನು ಒಂದುಗೂಡಿಸುವ ಪದವಾವುದು? ಭಾರತೀಯರ ತತ್ವಜ್ಞಾನದಲ್ಲಿ ಅದಕ್ಕೆ ಮಹತ್ ಇಲ್ಲವೆ ಬೃಹತ್ ಎಂದು ಹೆಸರು. ಅಪಾರವಾದ ವಿಶ್ವದ ಅರಿವು ಎಂದರೂ ಇದೇ! ಅರಿವು ಪುರುಷನಿಗೆ ಪುರುಷನು ಪ್ರಕೃತಿಗೆ ಪ್ರತ್ಯಕ್ಷ (Real) ವಾದುದರಿಂದ ಎರಡೆಂಬುದಳಿದು ಏಕಾದ ಬಗೆಯು ತಿಳಿಯುಂ ಟಾಗುವುದು. ಪ್ರಕೃತಿ ಸಹಜವಾದುದು. ಪುರುಷರನ್ನು ಸಂಗಡಿಸುವ ಈ ಗೊಣ ಸನು ಗುರುತಿಸಲು ಅಲ್ಲಗಳೆವರೆ ಇವೆರಡರಲ್ಲಿ ಎಂದೂ ಮೇಳವುಂಟಾಗದ ಎದು

ರಾಳಿಗಳಾಗಿ ಇವು ಉಳಿದುಬಿಡುವವು. ಸೊಬಗರಿಯದ ಇವುಗಳ ಬೆಸುಗೆಯು ಕೊನೆಗೆ ಹಸುಗೆಯಲ್ಲಿ ವಿಶ್ರಾಂತಿಯನ್ನೈದುವುದು. ಈ ಮಹತ್ ಇಲ್ಲವೆ ಮೂಲತಃ ಅಖಂಡ ಆದರೆ ತೋರಿಕೆಗೆ ಮಾತ್ರ ಇದು ಕ್ರಮಬದ್ಧವಾಗಿ ವಿವಿಧ ಗತಿಯ ಗಮಕ ದಿಂದ, ಕಾಲಬದ್ಧತೆಯ ಯಮಕದಿಂದ ಮತ್ತು ಚಲನೆಯ ಚಮಕದಿಂದ ಬೆರೆತು ದೆಂದು ಕಾಣುವುದು. ಈ ಕ್ರಮವು ಏರಿಳಿತದಿಂದ ಕೂಡಿರುವುದು ಅಥವಾ ಅಡಗಿ ಸಿಕೊಳ್ಳುವ ಮತ್ತು ಅರಳಿಸುವ ಸಾಮರ್ಥ್ಯದಿಂದ ಒಡಮೂಡಿರುವುದು. ಇಂಥ ಕ್ರಮದಲ್ಲಿ ಪುರುಷನಿಗೆ ಊರ್ಧ್ವಸೃಷ್ಟಿಯೂ ಪ್ರಕೃತಿಗೆ ಅಧಃಸೃಷ್ಟಿಯಲ್ಲಿಯೂ ಸ್ಥಾನಾಪನ್ನತೆಯಿದೆ. ಈ ಸೃಷ್ಟಿಗಳೆಡರ ಶಾಶ್ವತವಾದ ಸೃಷ್ಟಿಯೊಂದಿದೆ. ಅದುವೆ ಇದನ್ನು ಬಳಿಸಿಕೊಂಡಿರುವ ಅರುಹಿನ ಸೃಷ್ಟಿಯು. ವಸ್ತುಗಳ ಯಥಾರ್ಥ ಜ್ಞಾನವೇ ಅದಕ್ಕೆ ತಳಹದಿಯು. "ಇಲ್ಲಿ ಪ್ರಬಲವಾದ ವ್ಯಕ್ತಿವಿಶೇಷವು ಸರ್ವವ್ಯಾ ಪಿಯಾದ ಆತ್ಮವನ್ನು ಅಪಹರಿಸುವದಿಲ್ಲ. ಅರುಹಿನ ಅಸ್ತಿವಾರವು ಸಂಪೂರ್ಣ ವಾಗಿ ತಾನೇ ತಾನಾದುದಿರುವುದು. ಇದರಲ್ಲಿ ವ್ಯಕ್ತಿಗತ ವಿಶೇಷಕ್ಕೆ ಅವಕಾಶವಿ ರುವುದಾದರೂ ಇದನ್ನುಳಿದವುಗಳೊಡನೆ ಅಖಂಡವಾದ ಮತ್ತು ಸಂಪೂರ್ಣವಾದ ಅರುವಿನ ಸಂಬಂಧವನ್ನು ಅದು ಕಳೆದುಕೊಂಡಿರುವುದಿಲ್ಲ. ನಾನಾತ್ವಕ್ಕೆ ಅವಕಾ ಶವೂ ಇಲ್ಲ, ಅವಸರವೂ ಇಲ್ಲ. ಗತಿಯ ವೈವಿಧ್ಯದಲ್ಲಿ ಅದು ಯಾವಾಗಲೂ ಪ್ರಾಮುಖ್ಯವಾದ ಏಕತ್ವಕ್ಕೆ ಮತ್ತು ಅಖಂಡವಾದ ಸಂಪೂರ್ಣತೆಗೆ ಸಂಬಂಧಿಸಿದುದಿ ರುತ್ತದೆ." ಆದುದರಿಂದ ಈ ಅರುಹಿನ ಸೃಷ್ಟಿಗೆ ವೀರಶೈವ ತತ್ವದಲ್ಲಿ ಮಹಾಲಿಂಗ ವೆಂದು ಹೆಸರು. ಶೈವರಿಗೆ ಶಿವನೂ, ಉಪನಿಷತ್ತುಗಳಿಗೆ ಬ್ರಹ್ಮವೂ, ತತ್ವಶಾ ಸ್ತ್ರವಾದಿ (Ontologists) ತುರೀಯ ಸತ್ಯವೂ, ಜ್ಞಾನವಾದಿ (Inosties) ಗಳಿಗೆ ದೇವನೂ, ತತ್ವಜ್ಞಾನಿಗಳಿಗೆ ಕೇವಲವೂ ಆದುದು ಈ ಮಹಾಲಿಂಗವೇ!

ಕೇವಲವು ನಿರ್ಗುಣವಾದುದೆಂದು (Supra-personal) ಬ್ರ್ಯಾಡ್ಲೆ (೧೮೪೬-೧೯೨೪) ಸಗುಣವಾದುದೆಂದು (Teleological) ಬೊಸಾಂಕೆ (೧೮೪೮-೧೯೨೩) ಅವರು ಹೇಳುತ್ತಾರೆ. ಆದರೆ ವೀರಶೈವ ಅನುಭಾವಿಗೆ— ಶಿವಶರಣನಿಗೆ ಈ ಕೇವ ಲವು ಇವೆರಡು ಅಭಿಪ್ರಾಯಗಳನ್ನು ಒಂದುಗೂಡಿಸಿರುವ ಸಗುಣ ನಿರ್ಗುಣ (Impersonal personality) ವಾಗಿದೆ. ಅದು ವಿಶ್ವಾತೀತವೂ ಅಹುದು, ವಿಶ್ವಾಂ ತರ್ಗತವೂ ಅಹುದು; ಸ್ಥಬ್ಧವಾದರೂ ಅಹುದು, ಸಂಚಲವುಳ್ಳುದೂ ಅಹುದು. ವೀರಶೈವ ತತ್ವಜ್ಞಾನದಲ್ಲಿ ಕೇವಲದ ಸ್ಥಬ್ಧಸ್ವರೂಪಕ್ಕೆ ಸ್ಥಿರ, ಶಿವ, ಅಥವಾ ಲಿಂಗ ವೆಂದೂ, ಸಂಚಲನ ಸ್ವರೂಪಕ್ಕೆ ಚರ, ಶಕ್ತಿ ಅಥವಾ ಜಂಗಮವೆಂದೂ ಹೆಸರು. ಈ ಚರ ಅಥವಾ ಶಕ್ತಿಯು ಕ್ರಿಯಾಪ್ರವೃತ್ತಿಯಿಂದೊಡಗೂಡಿದುದು; ದಿವ್ಯ ನೆನಹೇ ಅಂಗವಾಗಿ ಉಳ್ಳುದು. ಆತ್ಯಂತಿಕ ಸತ್ಯದ ಇಲ್ಲವೆ ಶಿವಲಿಂಗದ ವ್ಯಕ್ತಿತ್ವವೆ ನಿಸಿದುದೂ ಈ ಶಕ್ತಿಯೇ! ಶ್ವೇತಾಶ್ವತರೋಪನಿಷತ್ತು ಈ ಶಕ್ತಿಯನ್ನು ಆತ್ಮಶಕ್ತಿ ಎಂದು ವರ್ಣಿಸುತ್ತದೆ. (ದೇವಾತ್ಮಶಕ್ತಿಃ ಸ್ವಗುಣೈರ್ನಿಗುಡಾ) ಆದುದರಿಂದ ಈ ದಿವ್ಯ

ಶಕ್ತಿಯು ಶಿವನೊಡನೆ ತಾದಾತ್ಮ್ಯ ಸಂಬಂಧದಿಂದ ಹೊಂದಿಕೊಂಡಿರುತ್ತದೆ. ಎಂದು ಸ್ಪಷ್ಟವಾದುದು. ಶಿವಶಕ್ತಿಗಳ ಈ ಸಾಮರಸ್ಯವು ಶಿವಶರಣರ ವಚನಗಳಲ್ಲಿ ಬಹು ಮನೋಹರವಾಗಿ ಸ್ಫುಟಗೊಂಡಿದೆ. ಶ್ರೀ. ಬಸವಣ್ಣನವರು ಅದನ್ನು

ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು
ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು;
ನನೆಯೊಳಗಣ ಪರಿಮಳದಂತೆ ಇದ್ದಿತ್ತು
ಕೂಡಲ ಸಂಗಮದೇವ ಕನ್ಯೆಯ ಸ್ನೇಹದಂತೆ ಇದ್ದಿತ್ತು

(ಪಿಂಡಸ್ಥಲ-೧)

ಎಂದು ವರ್ಣಿಸಿರುತ್ತಾನೆ.

ಶಿವಶಕ್ತಿಗಳ ಈ ಅವಿನಾಭಾವ ಸಂಬಂಧವು ಶಕ್ತಿ ವಿಶಿಷ್ಟಾದ್ವೈತದ ಹೃದಯವು. ಇದರಿಂದ ವಿಶ್ವವನ್ನು ಕಾಣುವ ವೀರಶೈವನ ಬಗೆಯು ವ್ಯಕ್ತವಾಗುತ್ತದೆ. ಇದುವೆ ವೀರಶೈವ ವೆಲ್ಟನ್‌ಶಾಂಗ— ಪರಮಾತ್ಮನಿಗೆ ಪರಿಪೂರ್ಣವೂ ಅಖಂಡವೂ ಆದ ಅರುಹು— ಚಿತ್‌ಶಕ್ತಿಯು ಒಂದಿದೆ, ಈ ವಿಶ್ವವು ಶಿವನ ಅಂಕಿತದಲ್ಲಿ ಶಿವನ ನೆನಹಿನಿಂದ ಶಕ್ತಿಯ ಮುಖಾಂತರ ಹೊರಹೊಮ್ಮಿದುದು ಎಂದು ವೀರಶೈವರ ನಂಬುಗೆ. ಈ ಶಕ್ತಿಯ ನೀಲವನ್ನು ಸರಿಯಾಗಿ ವರ್ಣಿಸಲು ಆಧುನಿಕ ಶಾಸ್ತ್ರಗಳಿಗಾಗಲಿ ಪಾಶ್ಚಿಮಾತ್ಯ ತತ್ವಜ್ಞಾನಿಗಳಿಗಾಗಲಿ ನಿಲುಕಿಲ್ಲ. ಬೆಲ್‌ಫೋರ್ಟ ಬ್ಯಾಕ್ಸನು (೧೮೨೬-೧೮೫೪) ಈ ಶಕ್ತಿಯನ್ನು ತರ್ಕಕ್ಕೆ ಮೀರಿದ ತತ್ವವೆಂದು ನಿರೂಪಿಸುತ್ತಾನೆ; ಮತ್ತು ಅವನು ಅತರ್ಕ್ಯವಾದ ಈ ತತ್ವದ ತಿಳಿಗೇ ಮಹತ್ವವನ್ನಿಟ್ಟಿರುವನು. ಈ ದೆಸೆಯಿಂದ ಇದು ವಿಚಾರಶಕ್ತಿಯಲ್ಲಿ ಸತ್ಯದ ಅಸ್ತಿವಾರವನ್ನರಸುವ ಹೆಗೆಲನ (೧೭೭೦-೧೮೩೧) ಪ್ರವೃತ್ತಿಗೆ ವಿರೋಧವಾದುದು. ಇಲ್ಲಿ ಶೋಪೆನಾರ (೧೭೮೮-೧೮೭೦) ಮತ್ತು ವ್ಹಾನ್ ಹಾರ್ಟಮನ್ (೧೮೪೨-೧೯೦೬) ಇವರ ನಿರಾಶಾವಾದವನ್ನಷ್ಟು (Pessimism) ಬಿಟ್ಟರೆ ಬೆಲ್‌ಫೋರ್ಟ ಬ್ಯಾಕ್ಸನು ಇವರ ವಿಚಾರಕ್ಕೆ ಸಮೀಪಿಸಿರುವನೆನ್ನಬೇಕು. ಹೇನ್ರಿ ಬರ್ಗಸನ್ನನು (೧೮೫೯-೧೯೪೧) ಈ ತರ್ಕಾತೀತವಾದ ತತ್ವಕ್ಕೆ ಕೊಟ್ಟಿರುವ ಮಹತ್ವವು ಒಳ್ಳೇ ಕ್ಷೋಭಕಾರ ರೀತಿಯಲ್ಲಿ ಕೊನೆಗಂಡಿದೆ. ಯಾಕಂದರೆ ಅವನು ಬುದ್ಧಿಪ್ರಧಾನವಾದ ವಿಮರ್ಶೆಗಳ ಆತ್ಯಂತಿಕ ಸತ್ಯವನ್ನು ಸಂಪೂರ್ಣವಾಗಿ ಅಲ್ಲಗಳೆದಿರುವನು. ಶೋಪೆನಾರನಂತೆ ಅವನಿಗೂ ಮಾನವನಲ್ಲಿ ಇಲ್ಲವೆ ಬಾಹ್ಯಜಗತ್ತಿನಲ್ಲಿ ಕಂಡುಬರುವ ವಸ್ತುಗತ ತತ್ವತೆ (The thing-in-itself) ಬುದ್ಧಿಗೆ ನಿಲುಕದ ವಿಷಯವಾದುದು. ಇದಕ್ಕೆ ಅವನು 'ಇಲಾನ್ ವಾಯಿಟಲ್' (Elan Vital) ಎಂದು ಕರೆದಿರುವನು. ಆದರೆ ಬರ್ಗಸನ್ನನ ಈ ವಿವರಣೆಯಲ್ಲಿ ಇಲಾನ್ ವ್ಹಾಯಿಟಲ್‌ದ ಸ್ವರೂಪವು ಅಸ್ಪಷ್ಟವಾದುದು, ಅನಿಶ್ಚಿತವಾದುದು. ಅವನು ಇದಕ್ಕೆ ಪ್ರಾಣರಸ (Vital Fluid) ವೆಂದು ಹೆಸರಿಟ್ಟು ವಿಶ್ವವೆಲ್ಲ, ಈ ವಿಶ್ವವ್ಯಾಪಕ ಶಕ್ತಿಯ ಲೀಲೆಯೆಂದು ವಿವರಿಸಿರುವನು. ಅವನಿಗೆ ಜೀವನವೆಲ್ಲ ಹೋರಾಟದಿಂದ ಬೆರೆತುದು (A stress and a

stir). ಶರಣನಿಗೆ ಮಾತ್ರ ಈ ಜೀವನವು ದಿವ್ಯಶಕ್ತಿಯ ನಿರಂತರವಾದ ಪ್ರೇರಣೆ
ಯಿಂದ ಬೆಳೆಸುದು. [illegible] ಸ್ಫೂರ್ತಿ
ಗಳಿಂದಾಗಲಿ ಸ್ವಪ್ನದ ವಿಚಾರಸೃಷ್ಟಿಗಳಿಂದಾಗಲಿ ಪ್ರೇರೇಪಣೆಗೊಳ್ಳುವದಿಲ್ಲ. ಆದರೆ ಮನದ ಕೊನೆಯ ಮೊನೆಯ ಮೇಲೆ ಮೂರ್ತಗೊಂಡ ಅರುಹಿನ ಆಧ್ಯಾತ್ ಚಿತ್‌ಶಕ್ತಿಯ ಅನುಸಂಧಾನದಿಂದ ಅವನು ಆ ಸ್ಫುರಣೆಯನ್ನು ಪಡೆವನು. ಈ ವಿಚಾರದಲ್ಲಿ ಶರಣನು ಬರ್ಗಸನ್ನನಿಗಿಂತ ಶೋಪೆನಾರನನ್ನೇ ಹೆಚ್ಚಾಗಿ ಬಳಿವಿಡಿವನು. ಮಾನವನ ಮನೋಮಂಡಲದಲ್ಲಿ ಉದ್ಬುದಾಕಾರವಾಗಿ ಏಳುವ ಕಲ್ಪನಾ ತರಂಗಗಳನ್ನು ರೂಪಿಸುವ ಇಚ್ಛಾಶಕ್ತಿಯೇ ಶೋಪನಾರನಿಗೆ ಪ್ರಾಮುಖ್ಯವಾದುದು. ನೆನಹು ಪ್ಲೇಟೋ (ಕ್ರಿ. ಪೂ. ೪೨೯-೩೪೭) ನ ವಿಚಾರಸೃಷ್ಟಿಯು (Realm of Ideas) ಆಚೆಯದೆಂದೂ ಅದು ತರ್ಕಬದ್ಧವಾದ ವಿವೇಕ-ವಿಚಾರ ಸರಣಿಗಳಿಗಿಂತ ಮಿಗಿಲಾದುದೆಂದೂ ಶೋಪನಾರನು ಅಭಿಪ್ರಾಯಪಡುವನು ನೆನಹು ವ್ಯಕ್ತಿಗತವಾದುದಾದರೂ ಅದು ಹೆಚ್ಚು ವ್ಯಾಪಕವಾಗಿ ಕಾರ್ಯಗೆಯ್ಯಬಲ್ಲುದೆಂಬ ದನ್ನರಿತಿಹ ಈ ಪ್ರತಿಭೆಯು ಆ ತತ್ವಜ್ಞಾನಿಗುಂಟು. ಆದುದರಿಂದಲೇ ಅವನಿಗೆ ವಿವೇಕವಾದವು (Idea of reason) ಒಪ್ಪಿಗೆಯಾಗುವದಿಲ್ಲ. ಆದರೆ ಅವನಿಗೆ ಭಾರತೀಯರಲ್ಲಿ ಮಹತ್ ಅಥವಾ ಬೃಹತ್ ಎಂದು ಹೆಸರುಗೊಂಡ ಅರುಹಿನ ಲೋಕೋತ್ತರವಾದ ಮತ್ತು ಸ್ಥಿರವಾದ ಸ್ವರೂಪವನ್ನು ಕಾಣುವ ದೃಷ್ಟಿಯಿಲ್ಲ. ಆದುದರಿಂದ ಅವನ ತತ್ವಜ್ಞಾನದಲ್ಲಿ ಅರುವಿನ ಹರಿವಿದ್ದರೂ, ಅದಕ್ಕೆ ಕೇಂದ್ರವಿಲ್ಲ.

ಶರಣನು ಚಿತ್ ಶಕ್ತಿಗೆ ವಿಶಿಷ್ಟ ಸ್ಥಾನವನ್ನೇನೊ ಕೊಟ್ಟಿರುವನು ಮತ್ತು ತೋರಿಕೆಯು ರೂಪುಗೊಳ್ಳಲು ಅದು ಅತ್ಯವಶ್ಯವಾದುದೆಂದೂ ಅವನು ಒಪ್ಪಿಕೊಂಡಿರುವನು. ಆದರೆ ವೀರಶೈವ ತತ್ವಜ್ಞಾನದಲ್ಲಿ ಶಕ್ತಿಗೆ ಶಿವನಲ್ಲಿ ಆಶ್ರಯ ಸ್ಥಾನವಿರುವದರಿಂದ ಅವನು ಶಿವ-ಶಕ್ತಿ, ಲಿಂಗ-ಜಂಗಮ, ಸತ್ಯ-ನೆನಹುಗಳ ಅವಿನಾಭಾವಸಂಬಂಧವನ್ನು ಎತ್ತಿಹಿಡಿದಿರುವನು. ಈ ಬಿಚ್ಚಿ ಬೇರಾಗದ ಬೆಸುಗೆಯನ್ನು ಅರ್ಥಗಾಂಭೀರ್ಯದ ಸೌಲಭ್ಯದಿಂದ, ಸೆರೆಗೆಯ್ಯುವ ಶಬ್ದಸಂಪತ್ತಿಯಿಂದ ಅವನು ವಿಶೇಷಿಸುತ್ತಾನೆ. ಅವನಿಗೆ ಶಿವ-ಶಕ್ತಿ ಇವುಗಳಲ್ಲಿ ಒಂದು ವಿಶ್ವಾಧಿಕ ವಿಶ್ವೋತ್ತೀರ್ಣ ಸತ್ಯವಾದರೆ, ಇನ್ನೊಂದು ವಿಶ್ವಗತ ನಿತ್ಯವಾಗಿರುವದು; ಒಂದು ಅನಂತವಾದ ಶಾಂತಿಯಾದರೆ, ಇನ್ನೊಂದು ಅಂತರ್ಗತವಾದ ಗಾಂಭೀರ್ಯವಾಗಿರುವದು. ವಿಶ್ವಾಂತರ್ಗತ ಶಕ್ತಿಯು ವಿಶ್ವೋತ್ತೀರ್ಣ ಸತ್ಯ ಇಲ್ಲವೆ ಶಿವನಿಂದ ಹೊರಹೊಮ್ಮಿದುದು ಮತ್ತು ಶಿವನು ಶಕ್ತಿಯನ್ನು ಮೀರಿ—ಆಚೆಗಿಹನು' ಎಂದು ಹೇಳಿ ಶರಣನು ಶಿವ-ಶಕ್ತಿಗಳಲ್ಲಿ ಸಾಮರಸ್ಯವನ್ನು ತೋರಿಸಲು ಯತ್ನಿಸಿರುವನು. ವಿಶ್ವಗತವಾದೀ ಶಕ್ತಿಗೆ ತಾನೆ ತಾನಾದ ಇರುವಿಕೆ ಇಲ್ಲ' ವಿಶ್ವೋತ್ತೀರ್ಣವಾದುದು ಒಂದುಗೂಡಿದಾಗ ಅದು ಶಕ್ತಿ ಎಂದು ಹೆಸರುಗೊಳ್ಳುವದು. ಈ ಕೇಂದ್ರೀಕರಣದ ದೆಸೆಯಿಂದ ಅದು ಸತ್ಯಕ್ಕಿಂತ ಅಸತ್ಯವಾಗಿಯೇ ಹೆಚ್ಚಾಗಿ ತೋರುವದು.

ಆದರೆ ಅದೂ ಸತ್ಯವೇ! ಬೇಕಾದರೆ ಅದು ಸೋಪಾಧಿಕ ಸತ್ಯವೆನ್ನಿ. ಆದುದರಿಂದ ಈ ಶಕ್ತಿಯು ಬ್ರಹ್ಮಾಂಡ(Cosmological view-point) ದೃಷ್ಟಿಯಿಂದ ಕರ್ತೃ ಸೃಷ್ಟಿ-ಸ್ಥಿತಿ-ಲಯ ಕಾರಣವೆಂದೂ, ದೇವಜ್ಞಾನ ದೃಷ್ಟಿಯಿಂದ (Theoloigcal viewpoint) ಅನುಗ್ರಾಹಕನೆಂದೂ, ಮತ್ತು ಸ್ವಾನುಭವ (Epistemological view point) ದೃಷ್ಟಿಯಿಂದ ವಿಷಯಾತೀತನೆಂದೂ ಕರೆಯಿಸಿಕೊಳ್ಳುತ್ತದೆ. ಶಿವನು ಅಂತರ್ಗತವಾದ ಘನವೆತ್ತ ಶಕ್ತಿಯು ಆಚೆಗಿರುವನು. ಅವನಿಗೆ ಅನಂತವಾದ ಪ್ರಕಾಶಮಯ ಪರಮಶಾಂತಿ—ಅಖಿಲ ವಸ್ತುಜಾತದ ಒಡಲೊಳಿಹ ನೀರವ ಶಾಂತಿ ಎಂದು ಕರೆಯಬಹುದು. ಎಲ್ಲವನ್ನೂ ಬೆಳಗುವವನು ಅವನೇ,! ಆದರೂ ನಮ್ಮ ತಿಳಿಗೆ ನಿಲುಕನವನು! ಅರುಹು ಇರುಹುಗಳನ್ನು ವ್ಯಾಪಿಸಿದುದೂ ಈ ಶಾಂತಿಯೇ! ಸರ್ವಸ್ವತಂತ್ರದ ಆನಂದವೆಂದರೂ ಇದೇ! ಈ ಅನಂತವಾದ ಪ್ರಕಾಶಮಯ ಪರಮಶಾಂತಿಯು— ಈ ಮಹಾಲಿಂಗವು 'ತೃಪ್ತಿಯಿಲ್ಲದ ಸಂತೃಪ್ತಿಯೂ, ಹುಟ್ಟು ಬೆಳವಣಿಗೆಗಳಿಲ್ಲದ ಪೂರ್ಣತೆಯೂ, ಎಡೆತಡೆಗಳಿಲ್ಲದ ಸರ್ವ ಸ್ವತಂತ್ರವೂ' ಆಗಿದೆ. ಶಕ್ತಿಯು ಈ ಪ್ರಕಾಶಮಯ ಪರಮಶಾಂತಿಯ ಗತಿಯಲ್ಲಿ ಗಮನಗೊಳ್ಳುವುದು, ಅರುಹಿನ ಪರಾಕಾಷ್ಠತೆಯಲ್ಲಿ ಪ್ರಸರಣಗೊಳ್ಳುವುದು. ಆದುದರಿಂದ ಇದು ಪರಮನಿಂದ ಹೊರಚಲ್ಲಿ ಹರಿಯುವ ಪ್ರವಾಹವು, ಶಾಶ್ವತದಿಂದ ಸೂಸುವ ದಿವ್ಯಗತಿಯ ಗಮನವು, ಅನಾದ್ಯನಂತದ ಒಡಲಿನಿಂದ ಹೊರಹೊಮ್ಮುವ ವಿಶ್ವವ್ಯಾಪಕವು. ಆದಿಭೌತಿಕ ಶಾಸ್ತ್ರದ ದ್ರವ್ಯ ಮತ್ತು ಗುಣ, ಹಾಗು ಆಧ್ಯಾತ್ಮಿಕ ಶಾಸ್ತ್ರದ ವಿಷಯ ಮತ್ತು ವಿಷಯಿ ಇವು ಈ ದಿವ್ಯಶಕ್ತಿಯ ದ್ವಿವಿಧ ರೂಪಗಳು. ಮಾನವನ ಸ್ಥೂಲ-ಸೂಕ್ಷ್ಮ-ಕಾರಣ ಮತ್ತು ಮಹಾಕಾರಣ ಪಿಂಡಗಳಲ್ಲಿ ಅನಂತ ಶಕ್ತಿಗಳು ಹುಗಿದಿವೆಯಷ್ಟೇ! ಈ ಶಕ್ತಿಗಳನ್ನು ಕ್ರಮಬದ್ಧವಾಗಿ ಸೂಕ್ಷ್ಮಾತ್ ಸೂಕ್ಷ್ಮತರ ಸ್ವರೂಪಗಳನ್ನಾಗಿ ವ್ಯಕ್ತಗೊಳಿಸುವದಾದರೂ ಈ ದಿವ್ಯಶಕ್ತಿಯೇ!

ತನು-ಮನ ಪ್ರಾಣಗಳನ್ನು ಮಹಾಲಿಂಗದ ಅರುವಿನ ಅನುಸಂಧಾನದಿಂದ ಮತ್ತು ಅವುಗಳ ಕಾರ್ಯಕಲಾಪಗಳನ್ನು ಚೈತನ್ಯ ಶಕ್ತಿಯ ಇರುಹಿನ ಅನುಸಂಧಾನದಿಂದ ಮಾರ್ಪಡಿಸುವದರಲ್ಲಿ ವೀರಶೈವ ತತ್ವಜ್ಞಾನದ ಘನತೆಯು ಒಡೆದು ಕಾಣಿಸುವದು. ಆದಿಭೌತಿಕ (Matter) ವನ್ನು ಆಧ್ಯಾತ್ಮದಲ್ಲಿ ನೆಲಿಸಲು ಲಿಂಗವಂತ ಧರ್ಮವು ಮುಂದುವರಿದಿದೆ. ಗ್ರೀಕ ತತ್ವಜ್ಞಾನಿಯಾದ ಪ್ಲೇಟೊ ಅವನು ಅತ್ಯಂತ ಸೂಕ್ಷ್ಮವಾದವಿಚಾರ (Ideas) ಸಾಮ್ರಾಜ್ಯದಲ್ಲಿ ಅತ್ಯಧಿಕವಾದ ಆನಂದವನ್ನು ಅನುಭವಿಸುವನು. ಯಾಕಂದರೆ ಅವನಿಗೆ ಆತ್ಮನ ಮೇಲೆ ಪ್ರಕೃತಿಯ ಪ್ರಭಾವವಿದೆ ಎಂಬ ಮಾತಿನಲ್ಲಿ ಒಪ್ಪಿಗೆಯಿಲ್ಲ. ಬಾಯ್‌ಬಲ್ ಮಾನವ ಸ್ವಭಾವದಲ್ಲಿ ಸ್ಪಷ್ಟವಾದ ಇತ್ತೆರವಿದೆ ಎಂದು ಹೇಳುತ್ತ ಪ್ರಕೃತಿಯು ಮಿಥ್ಯವೆಂದೂ ಪುರುಷನು (Spirit) ಸತ್ಯವೆಂದೂ ಸೂಚಿಸಿ ಅವು ಎಂದೆಂದೂ ಹೊಂದಿಕೆಗೊಳ್ಳವೆಂದು ತಿಳಿಸುತ್ತದೆ. ಅದರಂತೆ ಸಾಂಖ್ಯ ಮತ್ತು ವೇದಾಂತ ದರ್ಶನಗಳೂ ಸಹ ಅವಿದ್ಯೆಯ

ವ್ಯಾಪಾರವನ್ನು ಇಳಿಕೆಗೆಯ್ದು ತುರೀಯದಲ್ಲಿ ತೃಪ್ತಿಗೊಳ್ಳುತ್ತವೆ. ಜೀವನದ ವ್ಯಾಪಾರಗಳನ್ನು ಆತ್ಮನ ಮುಖಾಂತರವಾಗಿ ಅರಿತುಕೊಳ್ಳುವುದಿದೆ ಎಂದು ವೇದಾಂತವು ಬೋಧಿಸುವುದನ್ನು ಅಲ್ಲಗಳೆಯಲಾಗದಿದ್ದರೂ ಅದು ಸೋಪಾದಿಕ ಜಗತ್ತು ಮತ್ತು ನಿರುಪಾಧಿಕ ಜಗತ್ತು ಮತ್ತು ನಿರುಪಾದಿಕ ಬ್ರಹ್ಮ ಇವುಗಳಲ್ಲಿ ವಿಂಗಡಿಕೆಯನ್ನು ತೋರಿಸಿ ಇವುಗಳ ಕೂಡಿಕೆಯು ಎಂದೆಂದೂ ಆಗದೆಂದು ಅರಹುತ್ತದೆ. ಪರಬ್ರಹ್ಮ ಮತ್ತು ಅದರ ಸಾಕ್ಷಾತ್ಕಾರ ಇವುಗಳ ವೈಶಿಷ್ಟ್ಯವನ್ನು ಒತ್ತಿಹೇಳಿ ಅಧ್ಯಾತ್ಮಿಕ ಕ್ರಾಂತಿ ತುರೀಯದಂತೆ ಇವುಗಳನ್ನು ಮೇಳೈಸುವುದಿಲ್ಲ. ಆಗಮಕಾರರೂ ಸಹ ಶಿವನು ಜೀವನದ ಆತ್ಯಂತಿಕ ಪರಿಪೂರ್ಣತೆಯು ಲಕ್ಷ್ಯವೆಂದು ನಿರೂಪಿಸಿರುವರು. ಮತ್ತು ಇಂದ್ರಿಯಾತೀತವಾದುದು ಇಂದ್ರಿಯಗೋಚರವಾದುದರ ಸಮತೂಕವೆಂದುಸುರಿ ಪ್ರಕೃತಿ ಪುರುಷರಲ್ಲಿ ವಿಂಗಡಿಕೆಯನ್ನು ತೋರಿಸಿರುವರು. ಆದರೆ ವೀರಶೈವರ ಸರ್ವಸಮನ್ವಯ ( Synthetic ) ತತ್ವಜ್ಞಾನದಲ್ಲಿ ಶಿವಶಕ್ತಿ ಸಂಪುಟವು ಈ ತರಹದ ಪ್ರಕೃತಿ ಪುರುಷರಲ್ಲಿಯ ವಿಂಗಡಿಕೆಯನ್ನು ಮನ್ನಿಸುವುದಿಲ್ಲ. ಆದುದರಿಂದ ಲಿಂಗವಂತರಿಗೆ ಜೀವಪ್ರಪಂಚವು ಶಿವಪ್ರಪಂಚವಾಗಬೇಕೆಂಬುದೇ ಜೀವನದಲ್ಲಿಯ ಆತ್ಯಂತಿಕ ಗುರಿಯಾಗಿದೆ.

ಪ್ರಕೃತಿ ಮತ್ತು ಪುರುಷ—ಇಂದ್ರಿಯಗೋಚರವಾದುದು, ಮತ್ತು ಇಂದ್ರಿಯಾತೀತವಾದುದು—ಇವುಗಳಲ್ಲಿಯ ವಿಂಗಡಿಕೆಯ ನಿರಸನವು ಆಧ್ಯಾತ್ಮಿಕ ಜೀವನದಲ್ಲಿ ಮತ್ತು ಪರಮಾರ್ಥದಲ್ಲಿ ನೂತನವಾದ ಒಂದು ಉದ್ದೇಶವನ್ನೇ ಮುಂದಿಸಿರವುದು. ಪ್ರಕೃತಿಯು ನಿರಂತರವಾಗಿ ರೂಪುಗೊಳ್ಳುವ ಕ್ರಮಕ್ಕೊಳಗಾದುದು; ಮತ್ತು ಆತ್ಮನ ಸೋಂಕಿನಿಂದ ಅದರ ಒರಟುತನವಡಗಿ ಅದರಲ್ಲಿ ನಯವು ಕಂಗೊಳಿಸುವುದು; ಅಂದರೆ ಆಧ್ಯಾತ್ಮಿಕ ಪ್ರಕಟತೆಗೆ ಅದೊಂದು ಉತ್ತಮವಾದ ಉಪಕರಣವಾಗುವುದು. ವಸ್ತುತಃ ಪ್ರಕೃತಿಯ ಬುದ್ಧಿಯು ಭ್ರಾಂತಿಯೇ ಸರಿ; ಜೀವನದ ದೃಷ್ಟಿಯಿಂದ ಪ್ರಕೃತಿಯೆಂಬುದಿಲ್ಲವೇ ಇಲ್ಲ. ಅಲ್ಲಿ ಇರುವದು ವಿವಿಧ ತರಗತಿಗಳಲ್ಲಿ ಗೋಚರವಾಗುವ ಆತ್ಮನ ಲೀಲೆಯೊಂದೇ! ತನುಮನಗಳಲ್ಲಿ ಭೇಧವನ್ನು ಕಲ್ಪಿಸುವದು ಭ್ರಾಂತಿಯ ಒಂದು ಲಕ್ಷಣವಾಗಿರುವುದು. ಮಾನವಕೋಟಿಯೆಲ್ಲ ಇಂದಿನವರೆಗೂ ಈ ಭ್ರಾಂತಿಯಲ್ಲಿಯೇ ಕೊಳೆಯುತ್ತ ಬಂದಿದೆ. ಈ ತೋರಿಕೆಯಲ್ಲಿ ಉನ್ಮನಿಯಾದ ಚಿತ್‌ಶಕ್ತಿಯೊಂದೇ ಸತ್ಯವಾದುದು. ವಿವಿಧ ವಿಚಾರವಾಹಿನಿಗಳಿಂದ ನರನಾಡಿಗಳ ಮೇಲೆ ಪರಿಣಾಮವುಂಟಾಗಿ ದೇಹದ ಸ್ವರೂಪವೇ ಬದಲಾಗುವದನ್ನು ಒಪ್ಪಿದೆವಾದರೆ ಪರಾಶಕ್ತಿಯು ಪ್ರಕೃತಿಯನ್ನು ಪಾರಮಾರ್ಥಿಕಗೊಳಿಸಿ ಪ್ರಾಪಂಚಿಕ ಭಾವನೆಯನ್ನು ಪಲ್ಲಟಗೊಳಿಸುವುದರಲ್ಲಿ ಆಶ್ಚರ್ಯವಿಲ್ಲ! ಪರಮಾರ್ಥವು ಸತ್ಯವಾದುದು, ಪ್ರಪಂಚವೆಲ್ಲ ಮೂಲತಃ ಪರಮಾರ್ಥವಾದುದೇ-ಬುದ್ಧಿಯ ಅಳಿಗೋಲನ್ನು ನೆಚ್ಚಿ ವಿಚಾರಕ್ಕೆ ರೂಢಿಗೊಂಡಿರುವ ನಮಗೆ ದ್ವಂದ್ವದ ದಂದುಗದಲ್ಲಿ ಸಿಲುಕಿ ಸಾಯುತ್ತಿರುವುದು ಸ್ವಾಭಾವಿಕವಾದುದು. ಅಸ್ತಿತ್ವದಲ್ಲಿದ್ದು

ಗತಿಗೊಳ್ಳುತ್ತಿರುವುದನ್ನು ಬುದ್ಧಿಯು ಸ್ಥಿತಿಯಲ್ಲಿ ರೂಪಿಸುವುದೆಂದು ಹೇಳ್ರಿ ಬರ್ಗ ಸನ್ನನು ಹೇಳುವ ಮಾತು ನಿಜವಾಗಿ ಸತ್ಯವಾಗಿರುವುದು. ಬುದ್ಧಿಯನ್ನು ನಂಬು-ವದಕ್ಕಿಂತ ಭಾವನೆಯನ್ನು ನಂಬಿ ನಡೆವುದಾದರೆ ಜೀವನದ ಇರುವಿಕೆಯೇ ಸಮೂಲವಾಗಿ ಬದಲಿಸುವುದು ಬರ್ಗಸನ್ನನು ಭಾವನಾವಾದದ (Intuitionisn) ಮುಂದಾಳು. ಆದುದರಿಂದ ಜೀವನವನ್ನು ಭಾವನೆಯ ದೃಷ್ಟಿಯಿಂದ ನಿರೀಕ್ಷಿಸ ಬೇಕೆಂದು ಎಚ್ಚರಿಸಿರುವನವನು. ಹೀಗೆ ಜೀವನವನ್ನು ನೋಡುವುದರಿಂದ ಆಗುವವದಾದರೂ ಏನು ? ಪ್ರಕೃತಿಗೆ ಉಳಿವೆ ಇಲ್ಲದಂತಾಗುವುದು ! ಈ ಜಾಡ್ಯ-ವನ್ನು ಬದಿಗಿರಿಸುವುದರಲ್ಲಿ ನಮಗೆ ಗೆಲವು ಉಂಟಾಗುವುದಾದರೆ ಜೀವಪ್ರಪಂಚವು ಅಳಿದು ಜೀವನವೆಲ್ಲ ಶಿವಪ್ರಪಂಚವೆಂಬ ತಿಳಿಯುಂಟಾಗುವುದು. ಪ್ರಕೃತಿಯನ್ನು ಪಾರಮಾರ್ಥಿಕಗೊಳಿಸುವ ಈ ಶಕ್ಯತೆಯು ಇಹ-ಪರಗಳಲ್ಲಿಯ ಸಂಬಂಧವನ್ನು ನಿಕಟವಾಗಿ ಸಮೀಪಗೊಳಿಸುವುದು ದೇವರಾಜ್ಯವು ಇಲ್ಲಿಂದಾಚೆಗಿಲ್ಲ; ಅದು ಇಲ್ಲಿಯೇ ಇದೆ. ಆದುದರಿಂದ ಅಚ್ಚ ಅಧ್ಯಾತ್ಮಸಾಧನೆಯು ಇಲ್ಲಿಂದಾಚೆಗಿನ ಬಾಳುವೆಯನ್ನು ಗಳಿಸುವುದರಲ್ಲಿ ಮಾತ್ರವಲ್ಲ— ಪ್ರಕೃತಿಯನ್ನು ಪುರುಷನ ಪ್ರಕಟನೆಗೆ ಸಾಧನವಾಗುವಂತೆ ಮಾಡುವುದರಲ್ಲಿ ಸಹ ಅದು ಒಡಮೂಡಬೇಕು.

ಇಹಪರ ಭ್ರಾಂತಿಯುಳ್ಳನ್ನಕ್ಕ ಶರಣೆನಲೇಕಯ್ಯಾ
ಮರ್ತ್ಯಲೋಕವೆಂಬುದೊಂದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮ ದೇವಾ

(ಭಕ್ತನಜ್ಞಾನಿ-೪೨)

ಎಂಬ ಬಸವಣ್ಣನವರ ವಚನಗಳ ಮರ್ಮವನ್ನಿಲ್ಲಿ ಅರಿಯಬೇಕು. ಜೀವನದ ವ್ಯವ ಹಾರವೆಲ್ಲ ಪರಾಶಕ್ತಿಯನ್ನವಲಂಬಿಸಿದುದು. ಹೀಗೆ ಅವಲಂಬಿಸಿದುದರಿಂದಲೇ ಅದು ಪೂರ್ಣತೆಯಲ್ಲಿ ಪ್ರಕಟಗೊಳ್ಳುವದು. ಆದುದರಿಂದ ಚಿಕ್ಕ ಪುಟ್ಟ ಪ್ರಸಂಗ ಗಳಿಗೂ ಸಹ ವಿಶ್ವಜೀವನದಲ್ಲಿ ಸ್ಥಾನಮಾನವಿದೆ. ಜೀವನವು ನಿರರ್ಥಕವಾದುದು; ಭ್ರಾಂತಿಯಿಂದ ಬೆರೆತುದು. ಎಂಬ ವಿಚಾರಕ್ಕೆ ಲಿಂಗವಂತರಲ್ಲಿ ಅವಕಾಶವಿಲ್ಲ; ಅದು ಸತ್ಯವಾದುದು, ಸಂಪತ್ತಿಯಿಂದ ಕೂಡಿದುದು ಎಂದೇ ಅವರ ನಂಬುಗೆ; ಜೀವನದಲ್ಲಿ ಯಾವುದೂ ವ್ಯರ್ಥವಲ್ಲ, ಯಾವುದೂ ಉದ್ದೇಶರಹಿತವಾಗಿಲ್ಲ. ಯಾಕಂದರೆ ಪ್ರತಿಯೊಂದು ಕ್ಷಣವೂ ಪರಮಾನಂದ ಪರಮಮುಕ್ತಿಯ ಸ್ವರೂಪ ವನ್ನು ವ್ಯಕ್ತಗೊಳಿಸುವುದು. ಜೀವನದ ದಿವ್ಯ ಉದ್ದೇಶವನ್ನು ಅರಿಯಲಾಗದ ನಮಗೆ ಅದು ಕ್ಷಣಿಕವಾದುದು, ದುಃಖಪರವಾದುದು ಎಂಬ ಭಾವನೆಗೆ ಅವಕಾಶ ವನ್ನಿತ್ತಿದೆ. ಅಖಿಲ ಸನ್ನಿವೇಶದಿಂದ ಅದನ್ನು ಬೇರ್ಪಡಿಸಿದುದೇ ಈ ಎಲ್ಲ ತೊಂದ ರೆಗೆ ಕಾರಣವು.

ಶರಣನು ಸತ್ಯದಲ್ಲಿ ದಿವ್ಯ ಶಕ್ತಿಯನ್ನೂ ದಿವ್ಯ ಚಾರಿತ್ರ್ಯವನ್ನೂ ಅರಿತಿ ಹನು. ಅಂತರಂಗದ ದಿವ್ಯ ಸ್ಫುರಣೆಯಿಂದೊಡಗೂಡಿದ ಸತ್ಯವು ತನ್ನಿಂದ ಅಖಿಲ

ವಿಶ್ವವನ್ನೇ ರೂಪಿಸಿರುವುದು. ಮತ್ತು ಹೀಗೆ ರೂಪಿಸುವ ಕ್ರಮದಲ್ಲಿ ಜೀವನದ ವಿವಿಧ ಅಂಗ ಪ್ರತ್ಯಂಗಗಳಲ್ಲಿ ಅದು ತನ್ನ ದಿವ್ಯ ಉದ್ದೇಶವನ್ನೂ ಪ್ರಕಟಗೊಳಿಸಿರುವುದು. ಇಟಲಿಯ ತತ್ವಜ್ಞಾನಿಗಳಾದ ಕ್ರೋಸ್ ಮತ್ತು ಜಂಟಾಯಿಲ್ ಅವರೂ ಸಹ ಇಂಥ ಅಭಿಪ್ರಾಯವನ್ನೇ ಮಂಡಿಸಿರುವರು. ಯಾಕಂದರೆ ವಿಶ್ವಾತ್ಮನಗೆ (World-Spirit) ಒಡನಾಟದಿಂದ ಪ್ರಗತಿಪರವಾದ ಸ್ವಾನುಭಾವಸಂಪಾದನೆ ಆವಶ್ಯವಾದ ಕಾಲದ ಅತ್ಯಂತಿಕ ಸತ್ಯ— ಆದುದರಿಂದಲೇ ಚಾರಿತ್ರ್ಯದ ಅತ್ಯಂತಿಕ ಘನತೆ ಇವುಗಳನ್ನೇ ಅವರು ಪ್ರತಿಪಾದಿಸಿರುವರು. ಈ ದೆಸೆಯಿಂದ ವೀರಶೈವ ತತ್ವಜ್ಞಾನದಲ್ಲಿ ವಿಶ್ವಗತಿಯು ಭ್ರಾಮಕವಲ್ಲ; ಅದೊಂದು ಅಖಂಡ ಲೀಲೆಯಾಗಿಹುದು. ಹೀಗೆ ಅತ್ಯಂತಿಕ ಸತ್ಯದ ಜೊತೆಗೆ ಅಖಂಡ ಲೀಲೆಯ ಕಲ್ಪನೆಯನ್ನು ಮಂಡಿಸುವದರಲ್ಲಿ ಶರಣನ ಸ್ಥಾನವು ವಿಶಿಷ್ಟವಾಗಿರುವುದು. ಅದು ಪರಬ್ರಹ್ಮನು ಪ್ರಪಂಚಾತೀತನೆಂಬ ವಾದವನ್ನು ಮಂಡಿಸುವ ಶಂಕರ ಮತ್ತು ಈಶ್ವರ ಪ್ರಾಧಾನ್ಯವಾದವನ್ನು ಮಂಡಿಸಿರುವ ರಾಮಾನುಜ ಹಾಗೂ ಚೈತನ್ಯ ಇವರ ಸ್ಥಾನಗಳಿಗಿಂತ ಭಿನ್ನವಾದುದು ಶಂಕರನ ಮತದಲ್ಲಿ ಲೀಲೆಯು ದೇವಜ್ಞಾನ ದೃಷ್ಟಿಗೆ ಸಲ್ಲುವ ವಿಶೇಷ ತರಹದ ಗ್ರಹಿಕೆಯಾಗಿದೆ. ವೈಷ್ಣವರಲ್ಲಿ ಲೀಲೆಯಲ್ಲಿ ಅಂತರಂಗ ಬಹಿರಂಗವೆಂಬ ಬಗೆಗೆ ಇಂಬುಂಟು. ಶರಣನಿಗೆ ಲೀಲೆಯು ಮಾತ್ರ ಪರಮನ ಕೇವಲ ಪ್ರಾಣವಾಗಿದೆ. ಈ ಲೀಲೆಯು ಅವನ ಅಖಂಡತೆ ಪರಿಪೂರ್ಣತೆ ಇವುಗಳನ್ನು ಪ್ರಕಟಿಸುವ ಶಕ್ತಿಯಾಗಿಹುದು. ಶರಣನು ಜೀವನವನ್ನು ಎಲ್ಲ ಬಗೆಯಿಂದಲೂ ದೃಷ್ಟಿಸಿ ಅದರಲ್ಲಿ ಸೃಷ್ಟಿ ಚೇತನವನ್ನೂ ಪರಿಪೂರ್ಣ ಶಕ್ತಿಯನ್ನೂ ಅರಿಯುವನು. ಪರಿಪೂರ್ಣತೆಯ ಆನಂದವು ಸಾಮರಸ್ಯದ ಆನಂದಕ್ಕಿಂತ ಭಿನ್ನವಾದುದಲ್ಲ; ಯಾಕೆಂದರೆ ಎಂದೆಂದೂ ಪರಿಪೂರ್ಣವಾಗಿರುವ, ಎಂದೆಂದೂ ಸನ್ನಿಹಿತವಾಗಿರುವ ಅನಂತವಾದೀ ಜೀವನದಲ್ಲಿ ಸಾಮರಸ್ಯದರಿವು ಅಳಿದಿರುವದಿಲ್ಲ. ಜೀವನದಲ್ಲಿ ಮಾರ್ಪಾಟಗಳಿದ್ದರೆ—ಅನಂತವಾದ ಜೀವನದಲ್ಲಿ ತೆರಪಿಲ್ಲದ ಮಾರ್ಪಾಟಗಳಿರುವುದೂ ಸ್ವಾಭಾವಿಕವಾದುದೇ!— ಅವೆಲ್ಲ ಸಾಮರಸ್ಯದ ತತ್ವವನ್ನನುಸರಿಸಿಯೇ ಸಂಭವಿಸುವವು

ವೀರಶೈವರು ಕಲ್ಪಿಸಿಕೊಂಡ ಪರಿಪೂರ್ಣವಾದ ಆಧ್ಯಾತ್ಮಿಕ ಶಕ್ತಿಯು ಅತ್ಯಧಿಕವಾದ ಘನತೆಯಿಂದ ಬೆರೆತುದು. ಹಿಂದುಗಳ ವಿಚಾರ ಸರಣಿಯಲ್ಲಿ ಜೀವನದ ವಿವಿಧ ಸಾಮರ್ಥ್ಯಕ್ಕೆ ಸಲ್ಲಬೇಕಾಗಿದ್ದ ಸ್ಥಾನವು ಸಲ್ಲಿಲ್ಲ. ಶಕ್ತಿಯೇ ಜೀವಾಳವಾಗಿರುವ ಮತ್ತು ಆಧ್ಯಾತ್ಮಶಾಸ್ತ್ರದ ಭಾಂಡಾರವೆನಿಸಿದ ತಂತ್ರಗಳಲ್ಲಿಯೂ ಆಗಮಗಳಲ್ಲಿಯೂ ಎಷ್ಟೇ ರಮ್ಯವಾಗಿದ್ದರೂ ಶಕ್ತಿಯ ವಿವಿಧ ಸ್ವರೂಪಗಳನ್ನು ಮರೆಯಿಸುವ ಪ್ರಯತ್ನವಿರುವದು ಕಂಡುಬರುತ್ತದೆ. ಆದರೆ ವೀರಶೈವ ತತ್ವಜ್ಞಾನದಲ್ಲಿ ಆಧ್ಯಾತ್ಮ ಜೀವನದ ತರಗತಿಗೇ ಮಹತ್ವವೀಯಲಾಗಿದೆ. ಶರಣನು ತನ್ನಂಗದ ಮೇಲಿರಿಸಿದ, ತನ್ನಂಗದಿಂದ ಎಂದೆಂದೂ ಅಗಲಿರಲಾದ, ಅನಾದ್ಯನಂತನಾದ ಪರಶಿವನ ಪ್ರತೀಕವೆನಿಸಿದ ಇಷ್ಟಲಿಂಗದ ಅನುಸಂಧಾನದಿಂದ ಜೀವನದ ಪ್ರತಿ

ಯೊಂದು ವ್ಯವಹಾರವನ್ನೂ ಮಾರ್ಪಾಟಗೊಳಿಸಿರುವುದು ನಿಜವಾಗಿಯೂ ಅಸಾದೃಶವಾದುದು. ಇದು ವೀರಶೈವ ಸಿದ್ಧಾಂತವೆನಿಸಿದ ಷಟ್ಸ್ಥಲದಲ್ಲಿ ದಿವ್ಯ ರೂಪಾಂತರದ ಆದರ್ಶವನ್ನೂ ಮತ್ತು ಮುಕ್ತಿಯ ಸ್ಥಾನದಲ್ಲಿ ಜೀವನದ ಬಗೆಬಗೆಯ ಶಕ್ತಿ ಸಾಮರ್ಥ್ಯಗಳ ಆಧ್ಯಾತ್ಮಿಕ ವಿಕಾಸವನ್ನೂ ಒಡಮೂಡಿಸಿದೆ. ಆದುದರಿಂದ ಶರಣನಿಗೆ ಮುಕ್ತಿ, ಬಂಧನದಿಂದ ಬಿಡುಗಡೆ ಇವು ಜೀವನದ ಆದರ್ಶವಲ್ಲ; ಅವನಿಗೆ ಆದರ್ಶವಾದುದು ಕೇವಲ ಜೀವನದ ಮತ್ತು ಆಧ್ಯಾತ್ಮದ ತಳಹದಿಯ ಮೇಲೆ ಅವನ್ನು ಉತ್ತಮಗೊಳಿಸುವಿಕೆ, ಮುಕ್ತಿಯ ಕಲ್ಪನೆಯಲ್ಲಿ ಜೀವನದ ಶಕ್ಯತೆ ಮತ್ತು ಆತ್ಮನ ಶ್ರೇಷ್ಠತೆ ಇವುಗಳಲ್ಲಿ ಕೊನೆಗಾಣದ ಕಲಹದ ಊಹೆಗವಕಾಶವಿದೆ. ಆದುದರಿಂದಲೇ ಇದು ಜೀವನವನ್ನು ನೀರಸಗೊಳಿಸುವುದು. ಅದರಂತೆ ಅದು ಜೀವನದ ರೂಪ ವ್ಯಾಪಾರಗಳ ಅಬ್ಬರದಲ್ಲಿ ವಿಶ್ವಗತ ಸೌಂದರ್ಯ ಗಾಂಭೀರ್ಯಗಳ ತೋರಿಕೆಯ ಸಾಮರ್ಥ್ಯವನ್ನು ತಗ್ಗಿಸುವುದು ಶರಣನು ಸಾಮಾನ್ಯವಾಗಿ ಗ್ರಹಿಸುವ ಮುಕ್ತಿಯ ಕಲ್ಪನೆಯನ್ನು ಅಲ್ಲಗಳೆದರೂ ದಿವ್ಯಾನಂದದ ಸಂಪಾದನೆಯಲ್ಲಿ ಜೀವನಕ್ಕಿರುವ ಘನವಾದ ಯೋಗ್ಯತೆಯನ್ನು ಮರೆತಿರುವುದಿಲ್ಲ ಜೀವನದ ಪ್ರತಿಯೊಂದು ವ್ಯವಹಾರವೂ ಶಿವಮಯವಾಗುವ ಅವಧಿಯನ್ನು, ಅವಕಾಶವನ್ನು ನಿರೀಕ್ಷಿಸುತ್ತಿರುವನವನು. ಮತ್ತು ಆತ್ಮನ ಚಿರ ಪರಮ ಶಾಂತಿಯು ಜೀವನದ ಘನವಾದ ವ್ಯವಹಾರದಲ್ಲಿಯೇ ಅಂಗವಿಸುವುದೆಂದೂ ಅರಿತಿರುವವನು. ನಿರ್ಮಲವಾದ ಪ್ರಕಾಶದಲ್ಲಿ, ನಿಶ್ಚಯವಾದ ಕಾರ್ಯವಿಮರ್ಶೆಯಲ್ಲಿ ಈ ನಿರರ್ಗಳವಾದ ಶಾಂತಿಯನ್ನೈದುವವನು ಸರ್ವಾಂಗ ಲಿಂಗಸ್ಥಲವೆಂದು ಕರೆಯುವ ಈ ಪರಮಾದರ್ಶದಲ್ಲಿ ದಿವ್ಯ ಜೀವನದ ಸೌಂದರ್ಯ-ಸಮರಸಗಳು ಮಾನವನಿಗೆ ಮುಕ್ತದ್ವಾರವಾಗಿರಿಸಲ್ಪಟ್ಟಿವೆ ಮತ್ತು ಜೀವನದ ವ್ಯವಹಾರವೆಲ್ಲ ಶಿವಪ್ರಪಂಚದ ವ್ಯವಹಾರವೆನಿಸಿ ಜೀವನವೆಲ್ಲ ಶಿವಮಯವಾಗುವುದು. ಮಾನವಕೋಟಿಯೆಲ್ಲ ದೇವಕೋಟಿಯಲ್ಲಿ ಪರಿಣಮಿಸುವುದು. ಇದುವೆ ವೀರಶೈವ ತತ್ವಜ್ಞಾನವು ಪ್ರಪಂಚಕ್ಕೆ ನೀಡಿದ ಭರವಸೆಯು.

---

★

# ವೀರಶೈವವು ಎತ್ತ ಸಾಗಿದೆ?

ಸಂಗ್ರಹಕಾರರು: **ಶ್ರೀ. ವೀರಭದ್ರಪ್ಪ ಕೊಪ್ಪಳ** ಎಂ. ಎ., ಬಿ. ಟಿ.
ರಾಜಾ ಲಖಮಗೌಡಾ ಸರದೇಸಾಯಿ ಹಾಯಸ್ಕೂಲ, ಧಾರವಾಡ.

[ ಧಾರವಾಡ ನವಕಲ್ಯಾಣ ಮಠದ ಶ್ರೀ. ಕುಮಾರ ಸ್ವಾಮಿಗಳು ಈ ಸಲ ಅಲಿಗಡ ೧೭ನೆಯ ಅಖಿಲ ಭಾರತ ತತ್ವಜ್ಞಾನ ಸಮ್ಮೇಲನದಲ್ಲಿ ಮಾಡಿದ ಇಂಗ್ಲಿಷ ಭಾಷಣದ ಸಾರಾಂಶವಿದು.]

ಐತಿಹಾಸಿಕ ದೃಷ್ಟಿಯ ವಿವೇಚನೆಯಲ್ಲಿ ವೀರಶೈವಧರ್ಮವು ಶೈವಧರ್ಮದ ಒಂದಂಗವಾಗಿ ತುಂಬಾ ಅರಳಿ ಸದ್ವಾಸನೆ ಬೀರುವ ಸುಮನೋಹರವಾದ ಒಂದು ಹೂವಾಗಿ ಪರಿಣಮಿಸುತ್ತಿದೆ. ಕ್ರಿಸ್ತಶಕಪೂರ್ವದಲ್ಲಿ ೩೦೦೦ ವರುಷಗಳಿಗಿಂತ ಮೊದಲಿನಿಂದಲೇ ಈ ನಮ್ಮ ಭಾರತ ಭೂಮಿಯಲ್ಲಿ ಶೈವಧರ್ಮವು ರೂಢವಾಗಿತ್ತೆಂಬ ಅಚ್ಚರಿಗೊಳಿಸುವ ಮಾತು ಈಚೆಗೆ ದೊರೆತ ಮೊಹೆಂಜೊದಾರೊ ಮತ್ತು ಹರಪ್ಪಗಳ ಅವಶೇಷಗಳಿಂದ ತಿಳಿದು ಬರುತ್ತಿದೆ. ಇವುಗಳನ್ನು ಕುರಿತು ಸ್ವತಂತ್ರವಾಗಿ ಆಳವಾದ ಸಂಶೋಧನ ಮತ್ತು ಅಭ್ಯಾಸ ಮಾಡಿ ಸರ್ ಜಾನ್ ಮಾರ್ಶಲ್ ಅವರು 'ಕಂಚಿನ ಯುಗಕ್ಕಿಂತ (Chaclolithic Age) ಮೊದಲೇ ಶೈವಧರ್ಮವು ಈ ದೇಶದಲ್ಲಿ ಬಳಕೆಯಲ್ಲಿತ್ತು' ಎಂದು ತಿಳಿಸುವ ಸಂಗತಿಯೂ ಡಾಕ್ಟರ ಪ್ರಾಣನಾಥ ಅವರು 'ಶಿವ-ಶಕ್ತಿಗಳ ಉಪಾಸನೆಯು ಅತಿಪ್ರಾಚೀನವಾದುದು' ಎಂದು ತಿಳಿಸುವ ಸಂಗತಿಯೂ ತುಂಬಾ ಗಮನಾರ್ಹವಾಗಿವೆ. ಫಾದರ ಹೆರಾಸ ಮೊದಲಾದ ವಿದ್ವನ್ಮಣಿಗಳ ಅಭಿಪ್ರಾಯದ ಮೇರೆಗೆ ಆರ್ಯರು ಬರುವ ಪೂರ್ವದಲ್ಲಿಯೇ ಈ ದೇಶದ ಮೂಲನಿವಾಸಿಗಳಾಗಿದ್ದ ದ್ರವಿಡರಿಗೆ (Proto-Indians) ಶಿವನೇ ಉಪಾಸನಾ ದೇವತೆಯಾಗಿದ್ದನು. ಈ ಶಿವನಿಗೆ ಅವರು ಲಿಂಗೋದ್ಭವ ಮೂರ್ತಿ ಎಂದು ಕರೆಯುತ್ತಿದ್ದರು. ಭಾರತ ಭೂಮಿಯಲ್ಲೆಲ್ಲ ಕಾಣಬಹುದಾದ ಶೈವರ ಗುಡಿಗಳಲ್ಲಿ ನಮ್ಮ ದೃಷ್ಟಿಗೋಚರವಾಗುವ ಶಿವಲಿಂಗವು ನಿರಾಕಾರ ಶಿವನ ಸಾಕಾರತೆಯನ್ನೂ ಅವನು ಸ್ವಯಂಭೂ ಎಂಬುದನ್ನೂ ಸೂಚಿಸುತ್ತಿದೆ. ಈ ಶಿವಲಿಂಗ ಇಲ್ಲವೆ ಸ್ಥಾವರ ಲಿಂಗವನ್ನು ಗುಡಿಗುಂಡಾರಗಳಲ್ಲಿರಿಸಿ ಪೂಜಿಸುವುದು ಶೈವಧರ್ಮದ ಹೆಗ್ಗುರುತು. ಆದರೆ ವೀರಶೈವಧರ್ಮದ ವಿಶಿಷ್ಟವಾದ ಗುರುತು ಇಷ್ಟಲಿಂಗ ಪೂಜೆಯಲ್ಲಿ ವ್ಯಕ್ತವಾಗುತ್ತಿದೆ. ದೇಹವನ್ನು ದೇವಾಲಯಗೊಳಿಸಿ ಅದರಲ್ಲಿ ದೇವನು ವಾಸಿಸಲು ಅದು ತಕ್ಕುದಾಗಬೇಕೆಂದು ಅನಾದ್ಯನಂತ ಪರಶಿವನ

ಪ್ರತೀಕವಾದ ಆ ಇಷ್ಟಲಿಂಗವನ್ನು ವೀರಶೈವನು ಎಂದೆಂದೂ ಅಗಲದಂತೆ ತನ್ನ ಅಂಗದ ಮೇಲಿರಿಸಿಕೊಳ್ಳುವನು. ಹೀಗೆ ಧರಿಸಿದ ಆ ಇಷ್ಟಲಿಂಗವು ಕಾಣದ ಪರಶಿವನು ಕೈಲಾಸದಲ್ಲಿಲ್ಲ, ಅವನು ಈ ಪ್ರತ್ಯಕ್ಷ ಕಾಯದಲ್ಲಿಹನು ಎಂಬುದನ್ನು ಕುರುಪಿಟ್ಟು ಹೇಳುವುದಲ್ಲದೆ ಮಾನವದೇಹದ ಘನತೆಯನ್ನೂ ಅದು ಸಾರುವದು. ದೇಹವು ದೇವಾಲಯವಾಗಬೇಕು; ಅದು ಮಹಾಕಾಯವೆನಿಸಬೇಕು; ಅಲ್ಲ, ವಿಶ್ವಕಾಯನಿರ್ಮಾಣದ ಸಿದ್ಧತೆಗೆ ಅದು ಎಡೆಗುಡಬೇಕು; ಅದರಲ್ಲಿ ಇಡಿ ಆಧ್ಯಾತ್ಮಜೀವನದ ತಿರುಳು ಮೈದೋರಬೇಕು; ಪರಶಿವನಲ್ಲಿ ಬೆರೆಯಲು ، ಅಂತರಂಗದ ಅನುಭವವು ಅಂಗಕ್ಕೆ ಅಳವಡಬೇಕು; ಪ್ರಭುವಿನ ದಿವ್ಯ ದೃಷ್ಟಿಯಲ್ಲಿ ಗಮನಗೊಳ್ಳುವ ವಿಶ್ವಗತಿಗೆ ಅದು ನಾಟ್ಯರಂಗವಾಗಿ ಲೀಲಾಭೂಮಿ ಎನಿಸಬೇಕು ಎಂಬುದೇ ವೀರಶೈವನು ಅಂಗದ ಮೇಲಿರಿಸಿಕೊಂಡ ಆ ಇಷ್ಟಲಿಂಗದ ರಹಸ್ಯವು.

ಸಿಂಧೂನದಿಯ ಕೊಳ್ಳದಲ್ಲಿ ದೊರೆತ ಚಿತ್ರರೂಪದಲ್ಲಿಯ ಬರೆಹವನ್ನು ಸುಗಮ ಅರ್ಥವಾಗುವ ತೆರದಲ್ಲಿ ನಮ್ಮ ಭಾಷೆಗಿಳಿಸಿದರೆ ದ್ರಾವಿಡರ ಸಂಸ್ಕೃತಿ ಮತ್ತು ನಾಗರಿಕತೆಗಳ ಬಗೆಗೆ ಬೆರಗನ್ನುಂಟು ಮಾಡುವ ಐತಿಹಾಸಿಕ ಪ್ರಕಾಶವು ಪಸರಿಸುತ್ತಿದೆ. ಯಾಕಂದರೆ ಶಿವ ಶರಣ ಶಕ್ತಿ ಮತ್ತು ಸೃಷ್ಟಿ ಇವುಗಳಿಗೆ ಸಮಾನಾರ್ಥವನ್ನು ಕೊಡುವ ಆನ್ ಆನಿಲ್ ಅಮ್ಮಾ ಮತ್ತು ಅತಪ್ ಎಂಬ ಶಬ್ದಗಳು ಆ ಸಂಸ್ಕೃತಿಯಲ್ಲಿ ದೊರೆಯುತ್ತಿವೆ. ಮತ್ತು ಈ ಶಬ್ದಗಳಲ್ಲಿರುವ ಅಪಾರವಾದ ಅರ್ಥಗಾಂಭೀರ್ಯವು ವೀರಶೈವರ ಇಷ್ಟಲಿಂಗದ ಆಳವಾದ ಅನುಭವದ ಘನತೆಗೆ ಕಲಶಪ್ರಾಯವಾಗಿರುತ್ತದೆ. ಲಿಂಗದ ಸ್ವರೂಪ ಮತ್ತು ಕಲ್ಪನೆಗಳ ಬಗೆಗೆ ಪಂಡಿತರು ಅನೇಕ ತರ್ಕಗಳನ್ನು ತಂದೊಡ್ಡಿದ್ದಾರೆ, ಅನೇಕ ಮತಗಳನ್ನು ಮಂಡಿಸಿದ್ದಾರೆ, ಅನೇಕ ಸಿದ್ಧಾಂತಗಳನ್ನು ಮುಂದಿರಿಸಿದ್ದಾರೆ. ಫ್ರೆಂಚ್ ವಿದ್ವನ್ಮಣಿಯಾದ ಜೀನ ಪ್ರಿಲಸ್ಕಿ (Jean Przyluski) ಅವರು 'ಲಿಂಗ'ವು ಲಾಂಗಲ (ನೇಗಿಲ) ಎಂಬ ಶಬ್ದದಿಂದ ಬಂದಿರಬೇಕೆಂದು ಊಹಿಸಿ ಅದರ ಉಗಮವನ್ನು ಆಸ್ಟ್ರೊ-ಏಶಿಯಾದ (ಕೋಲ ಮುಂಡರ) ಸಂಸ್ಕೃತಿಯಲ್ಲಿ ಕಾಣುತ್ತಾರೆ. ಆರ್ಯಸಂಸ್ಕೃತಿಗೆ ಮಾರುವೋದ ಇನ್ನು ಕೆಲವು ಪಂಡಿತರು ಲಿಂಗವು ಯಜ್ಞದ ಅಗ್ನಿಯನ್ನೂ ಗುಡಿಗಳು ಯಜ್ಞಮಂಟಪವನ್ನೂ ಸೂಚಿಸುತ್ತವೆಂದು ಹೇಳುತ್ತಾರೆ. ಮತ್ತು ನಮ್ಮ ಹೃದಯಗಳೇ ಈ ಗುಡಿಗಳೆಂದೂ ಆವುಗಳಲ್ಲಿ ದೇವನು ಲಿಂಗರೂಪದಿಂದ ಮನೆ ಮಾಡಿಕೊಂಡಿರುವನೆಂದೂ ಮತ್ತು ಆ ದೇವನ ದಿವ್ಯ ಪ್ರಭೆಯು ನಮ್ಮ ಆತ್ಮಗಳ ಸೂತ್ರವಾಗಿದೆಯೆಂದೂ ಭಾವಿಸಲಾಗಿದೆ ಬೇರೆ ಕೆಲವರು ಲಿಂಗ ಶಬ್ದವು 'ಲಿಖ್' (ಎಂದರೆ ರೂಪಿಸು, ಬಣ್ಣಕೊಡು) ಎಂಬ ಶಬ್ದದಿಂದ ಬಂದಿತೆಂದು ತಿಳಿಸಿ, ಲಿಂಗವೆಂದರೆ ರೂಪಿಸುವವ, ಬಣ್ಣಕೊಡುವವ ಎಂದೂ ದೇವನು ವಿಶ್ವವನ್ನು ರೂಪಿಸುವನಾದುದರಿಂದ ಅವನೇ ಲಿಂಗ ಎಂದೂ ಊಹಿಸಿರುವರು. ಆಗಮಕಾರರಿಗೆ ಮಾತ್ರ

ಲಿಂಗವು ಅರಳಿಸುವ ಮತ್ತು ಅಡಗಿಸುವ ದ್ವಿವಿಧ ಸಾಮರ್ಥ್ಯವುಳ್ಳ ಮಾಯಾ ಶಕ್ತಿಗೆ ಆಧಾರಭೂತವಾದ ತತ್ವವು. ಆದರೆ ವೀರಶೈವರ ಪರಿಭಾಷೆಯಲ್ಲಿ ಲಿಂಗವು ಕೇವಲ ಒಂದು ಗುರುತು. ಅದು ಶುದ್ಧವಾದ ಮತ್ತು ಸಂಪೂರ್ಣವಾದ ಅರುಹಿನ ಕುರುಹು. ಅರುಹಿನ ಆಳದಲ್ಲಿ ಅಡಕವಾದ ಕಾಣದ ಮತ್ತು ಕಾಣುವ ಸಂಗತಿ ಗಳನ್ನು ಕುರಿತು ತತ್ವಜ್ಞಾನವು (Philosophy) ಚೆನ್ನಾಗಿ ವಿವೇಚಿಸುತ್ತದೆ. ಮತ್ತು ದೇವಜ್ಞಾನವು (Theosophy) ಪ್ರತಿಯೊಂದು ಸ್ಪಷ್ಟವಾದ ವಿಚಾರವು ತನಗೆ ತಕ್ಕುದಾದ ಒಂದು ಸ್ವರೂಪದಿಂದ ಕೂಡಿಕೊಂಡಿರುವುದೆಂಬುವನ್ನು ನಿಶ್ಚಿತ ವಾಗಿ ಸಿದ್ಧಿಸುತ್ತಿದೆ. ಆದುದರಿಂದ ಲಿಂಗವು ದೇವನ ವಿಷಯವಾಗಿ ಸಂಮಿ ಶ್ರಿತವಾದ ಮತ್ತು ಸುಸಂಬದ್ಧವಾದ ವಿಚಾರಕ್ಕೆ ತಕ್ಕುದಾದ ಒಂದು ಸ್ವರೂಪದ ಪ್ರತೀಕವು ಎಂದು ವೀರಶೈವರ ತಿಳಿವಳಿಕೆ.

ಆನ್ ಅಥವಾ ಶಿವನು ಪರಾಸಂವಿತ್ —ಶುದ್ಧವೂ ಸಂಪೂರ್ಣವೂ ಆದ ಅರುಹು ಎಂದು ಹೇಳುತ್ತಾರೆ. ಪಾಶ್ಚಿಮಾತ್ಯ ತತ್ವಜ್ಞಾನದಲ್ಲಿ ಅರುಹು ಮತ್ತು ಮನ ಇವುಗಳಲ್ಲಿ ಪರಸ್ಪರ ಭಿನ್ನತೆಯು ಕಂಡುಬರುವುದಿಲ್ಲ. ಎಷ್ಟೋ ಸಲ ಇವೆರಡೂ ಸಮಾನಾರ್ಥದಲ್ಲಿ ಸೇರುವೆಯಾಗುತ್ತವೆ. ಬರ್ಗಸನ್ (೧೮೫೯-೧೯೪೧) ತತ್ವಜ್ಞಾನಿಯು ಮಾತ್ರ ಇವೆರಡರಲ್ಲಿ ವಿಂಗಡಿಕೆಯನ್ನು ತೋರಿಸಿ ಪ್ರಕೃತಿ-ಮನ ಗಳಲ್ಲಿ ಪರಸ್ಪರ ಸಂಬಂಧವನ್ನು ಸೂಚಿಸಿದವರಲ್ಲಿ ಮೊದಲಿಗನು. ಹಿಂದು ತತ್ವ ಜ್ಞಾನಿಗಳ ಕಲ್ಪನೆಯಲ್ಲಿ ಅರುಹು ಮತ್ತು ಮನ ಇವುಗಳಲ್ಲಿ ಪೂರ್ವ ಪಶ್ಚಿಮ ಗಳಷ್ಟು ಅಭ್ಯಂತರವಿದೆ. ಮನವು ಜಡ, ಮರವೆಗೊಳಗಾದುದು. ಅರುಹು ಸೂಕ್ಷ್ಮವೂ ಚೈತನ್ಯಮಯವೂ ಆದುದು. ಸಂವಿತ್‌ರೂಪವಾದ ಅರುಹು ಮನ ಮತ್ತು ಇಂದ್ರಿಯಗಳಿಗೂ ಹಾಗು ಅವುಗಳ ವ್ಯಾಪಾರಗಳಿಗೂ ಚೈತನ್ಯವನ್ನಿತ್ತು ಬೆಳಕನ್ನು ಬೀರುವ ಶಕ್ತಿಯುಳ್ಳುದು. ಅಂದರೆ ಮನವು ಪ್ರಕೃತಿಯಲ್ಲಿಯೂ, ಅರುಹು ಪುರುಷನಲ್ಲಿಯೂ ಸೇರುವೆಯಾಗುವವು. ಕಣ್ದೆರೆದು ಒಡವೆಗಳನ್ನು ನೋಡಿ ದಾಗ ಕಣ್ಣುಗಳು ಅವನ್ನು ಕಾಣುತ್ತವೆ. ಅದರಂತೆ ಅರುಹು ಮನದ ವ್ಯವ ಹಾರಗಳತ್ತ ಹೊರಳಿದಾಗ ಪುರುಷನು ಅವುಗಳನ್ನು ಕಾಣುತ್ತಾನೆ; ಕಲ್ಪಿಸುವ ದಿಲ್ಲ. ಪ್ರಾಣಿಗಳು ನೋಡಲಿ ನೋಡದಿರಲಿ ಸೃಷ್ಟಿಯು ಇದ್ದೇ ಇರುವಂತೆ ಅರಿವಿನ ಕಣ್ಣಿಗೆ ಬೀಳಲಿ ಬೀಳದಿರಲಿ ಮನದ ವ್ಯವಹಾರಗಳು ನಡೆದೇ ಇರುವವು. ಕಣ್ಣಿನಿಂದ ಸೃಷ್ಟಿಯ ವ್ಯಾಪಾರಗಳ ತಿಳಿಯುಂಟಾಗುವಂತೆ ಅರಿವಿನ ಬೆಳಕಿನಿಂದ ಮನದ ವ್ಯವಹಾರಗಳ ಸ್ವರೂಪವು ತಿಳಿದು ಬರುವದು. ನೈಜವಾದ ಈ ಪ್ರಕಾಶ ಶಕ್ತಿಯಿಂದಲೇ ಪುರುಷನಿಗೆ (ಆತ್ಮನಿಗೆ) ಸ್ವಯಂಪ್ರಕಾಶನೆಂದು ಹೆಸರು. ಅನುಭವಿ ಗಳೆಲ್ಲರೂ ಅನೇಕ ಸಾರೆ ಅರಿವನ್ನು ಸಾಮಾನ್ಯವಾಗಿ ಬೆಳಕಿಗೆ ಹೋಲಿಸಿರುವರು. ನಮಗೆ ಸೂರ್ಯನ ಬೆಳಕು ತನ್ನ ತಾನೇ ತೋರ್ಪಡುವದು. ಮತ್ತು ಆ ಬೆಳಕು

ಒಡವೆಗಳ ಮೇಲೆ ಬಿದ್ದಾಗ ಅವುಗಳ ಇರುವಿಕೆಯನ್ನೂ ಅದು ನಮಗೆ ತಿಳಿಸಿ ಕೊಡುವದು. ಅದರಂತೆ ಆತ್ಮನಿಗೆ ತನ್ನ ಇರುವಿನ ಅರಿವು ಇರುವುದಲ್ಲದೆ ಆ ಅರಿವಿನಿಂದ ತನ್ನ ಒಡನಾಟದಲ್ಲಿದ್ದ ದೇಹ ಮನಗಳನ್ನೂ ಅವನು ಬೆಳಗುವನು. ಈ ಅರಿವಿಲ್ಲದಿದ್ದರೆ ದೇಹ ಮನಗಳ ಇರುವಿಕೆಯೂ ಎಚ್ಚರವೂ, ತಿಳಿಯೂ ತೋರಿಕೆಯೂ ನಮಗಿರುತ್ತಿರಲಿಲ್ಲ. ಮನವಿಲ್ಲದಿರೆ ಪದಾರ್ಥಗಳ ಅಸ್ತಿತ್ವ ಮತ್ತು ಅವುಗಳ ಜ್ಞಾನ ಇವು ನಮಗುಂಟಾಗುತ್ತಿರಲಿಲ್ಲವೆಂದು ಯುರೋಪದ ಧ್ಯೇಯವಾದ(Idealism)ದ ಅಭಿಪ್ರಾಯ. ನಾವು ಗುರುತಿಸುವ ವಸ್ತುಗಳ ಮರೆಯಲ್ಲಿ ವಸ್ತುಜ್ಞಾನವಿರಲಿ ಇಲ್ಲದಿರಲಿ ಇಂದ್ರಿಯಜನ್ಯಜ್ಞಾನವು ಇದ್ದೇ ಇರುವದು. ಮತ್ತು ಈ ಇಂದ್ರಿಯಜನ್ಯಜ್ಞಾನವು ಮಾನಸಿಕ ರೂಪಾಂತರವಾಗಿರುವುದರಿಂದ ಮನವಿಲ್ಲದಿದ್ದರೆ ವಸ್ತುವಿನ ಅಸ್ತಿತ್ವ ಮತ್ತು ಜ್ಞಾನ ಇವುಗಳಿಗೆ ಅವಕಾಶವೇ ಇಲ್ಲವೆಂದು ಯುರೋಪದ ಧ್ಯೇಯವಾದಿಗಳ ಮತ. ಜಾನ್ ಸ್ಟುಆರ್ಟ ಮಿಲ್ (೧೮೦೬–೧೮೭೩) ಮೊದಲಾದ ಇನ್ನು ಕೆಲವು ವಿಧಾಯಕ ಧ್ಯೇಯವಾದಿಗಳು (Constructive Idealists) ವಸ್ತುಜಾತದಿಂದ ಬೇರೆ ಈ ಜಗತ್ತಿನ ಮರೆಯಲ್ಲಿ ಇಂದ್ರಿಯಜನ್ಯ ಜ್ಞಾನಕ್ಕೆ ಇಂಬು ಇದ್ದೇ ಇರುವದೆಂದು ಒಪ್ಪುತ್ತಾರೆ. ಆದರೆ ಬರ್ಕ್ಲೆನ (೧೬೮೪-೧೭೫೩) ಸಂಪೂರ್ಣ ಧ್ಯೇಯವಾದದಲ್ಲಿ (Thorough-going Idealism) ಈ ತರಹದ ಅಭಿಪ್ರಾಯಕ್ಕೆ ಇಂಬಿಲ್ಲ. ಹಿಂದುಗಳ ವಿಚಾರಸರಣಿಯು ಇವುಗಳಿಗಿಂತ ಮೀರಿದುದು, ಗಹನವಾದುದು. ಅಲ್ಲಿ ಪ್ರಕೃತಿ ಮತ್ತು ಮನ ಇವೆರಡು ಆತ್ಮನಿಗೆ ಅನುಭವಗಮ್ಯ ವಿಷಯುಗಳಾಗಿರುತ್ತವೆ. ಇವು ಆತ್ಮನಿಂದ ಆವಿಷ್ಕಾರಗೊಳ್ಳುತ್ತವೆ. ಅವನ ಪ್ರಕಾಶವಿಲ್ಲದಿರೆ ಇವೆಲ್ಲ 'ಅಸತ್' ಎನಿಸಿಬಿಡುವವು. ಆದುದರಿಂದ ಮಾನವನ ಅನುಭವದಲ್ಲಿ ಅರುಹು ಬಹು ಪ್ರಾಮುಖ್ಯವಾದುದು. ಅದು ಇನ್ನಾವುದರಿಂದಲೂ ಮಿರುಗಬೇಕಾಗಿಲ್ಲ, ಮೆರೆಯಬೇಕಾಗಿಲ್ಲ. ಡೆಕಾರ್ಟನ (೧೫೯೬–೧೬೫೦) 'ನಾನು ವಿಚಾರಿಸುತ್ತೇನೆ, ಆದುದರಿಂದ ನಾನು ಇದ್ದೇನೆ' ಎಂಬ ಮಾತಿನ ಬುಡದಲ್ಲಿ ಅನುಭವ ಸಂಪತ್ತಿಯಿಲ್ಲ; ಅರಿವಿನ ಬಗೆಯಿಲ್ಲ. ಆದರೆ 'ನಾನು ಇದ್ದೇನೆ, ಆದುದರಿಂದ ನಾನು ಇದ್ದೇನೆ' ಎಂಬ ಹಿಂದುಗಳ ನುಡಿಯ ಒಡಲಲ್ಲಿ ಅದು ಅಡಗಿದೆ.

ಮಾನವನ ಅನುಭವದ ಅಂತಿಮ ಗುರಿಯಾದ ಈ ಆಳವಾದ ಅರಿವಿನ ಬಗೆಯು ಮೂಲತಃ ಏಕಮೇವ ಅಖಂಡವಾದುದು. ಆದರೆ ಸ್ವಾನುಭವಗೊಳ್ಳುವಾಗ ಇದು ಅನಂತವಾದ ನಾನಾತ್ವವನ್ನು ತಾಳುವ ಸಾಮರ್ಥ್ಯವುಳ್ಳುದು ಎಂಬುದನ್ನೂ ಮರೆಯಕೂಡದು. ಒಂದರಲ್ಲಿ ಹುದುಗಿಕೊಂಡು ಹಲವಾಗುವ ಈ ಕಾರ್ಯಕ್ಕೆ ಸೃಷ್ಟಿ, ಜಗತ್ತು, ಆಗುಹೋಗು ಇಲ್ಲವೆ ದ್ರವಿಡರ ಪಾರಿಭಾಷೆಯಲ್ಲಿ ಅತಮ್ ಎಂದು ಹೆಸರು. ಈ ಆಗುಹೋಗುಗಳ ಸಂಚಾಲಕ ವಸ್ತುವಿಗೆ ತನ್ನ

ಅರಿವು ತನಗೆ ಯಾವಾಗಲೂ ಇದ್ದೇ ಇರುತ್ತದೆ. ತನ್ನಲ್ಲಿ ಹುದುಗಿದ ಹಲ ವನ್ನು ತನ್ನಿಂದ ಹೊರಹೊಮ್ಮಿಸುವ ಅರುವಿಗೆ ಯಾವ ಸಾಮರ್ಥ್ಯವಿದೆಯೋ ಅದಕ್ಕೆ ಅಮ್ಮಾ ಇಲ್ಲವೆ ಚಿತ್‌ಶಕ್ತಿ ಎಂದು ಹೆಸರು. ಮತ್ತು ತನ್ನರಿವು ತನಗೆ ಇರುವುದರಿಂದಲೇ ಇದು ನೆನಹುಗೊಳ್ಳುವದರೊಳಗಾಗಿಯೇ ಅಘಟಿತ ಘಟನೆ ಯನ್ನು ಮಾಡುವ ಸಾಮರ್ಥ್ಯವುಳ್ಳದಾಗಿರುವದು. ಆದರೆ ನಮ್ಮೆಲ್ಲರ ತಿಳಿವಳಿಕೆ ಯಲ್ಲಿರುವ ನೆನಹಿಗೆ ಇಂಥ ಸಾಮರ್ಥ್ಯವಿರುವದಿಲ್ಲ. ಯಾಕಂದರೆ ಇಂಥ ನೆನ ಹಿಗೂ ಇದರ ಅಳವಿಗೆ ನಿಲುಕುವ ಒಡವೆ ಮತ್ತು ತನ್ನಿಂದ ಭಿನ್ನವಾದ ಭೌತಿಕ ವಸ್ತುಜಾತ ಇವುಗಳ ಮುಖಾಂತರವಾಗಿ ಎಸಗುವ ಕಾರ್ಯಕ್ಕೂ ಯಾವ ತರಹದ ಮೇಳವಿಲ್ಲ. ‘ ತಾನೊಂದೆಣಿಸಿದರೆ ದೈವವೊಂದೆಣಿಸಿತು’ ಎಂದು ಹೇಳುವ ಮಾತಿನ ರಹಸ್ಯವಾದರೂ ಇದೇ! ನೆನಹು (Will) ಚಿತ್ ಶಕ್ತಿಯ ಇಚ್ಛಾಪ್ರವೃತ್ತಿಯು; ಇದು ವಸ್ತುವಿನಲ್ಲಿ ಮತ್ತು ಅದರಿಂಹೊಗೆದು ತೋರಿಕೆಯಲ್ಲಿ ರೂಪಗೊಳ್ಳುವ ಆಗು ಹೋಗುಗಳಲ್ಲಿ ಸಹಜವಾಗಿ ಸೇರುವೆಯಾಗಿಹುದು; ಇರುವಿಕೆಯ ಸಾಗುವಳಿಯಲ್ಲಿ ಬೆರೆತು ಹೊಂದಿಕೆಯಾಗಿಹುದು. ಈ ಇಚ್ಛಾಶಕ್ತಿಯು ತನ್ನನ್ನು ತಾನು ತಿಳಿಯುವು ದಲ್ಲವೆ ತನ್ನಿಂದ ಇತರವಾದ ಎಲ್ಲವನ್ನೂ ತಿಳಿಯುವದು. ಆನ್ ಅಥವಾ ಶಿವನಲ್ಲಿ ಸಹಜವಾಗಿರುವ ಪ್ರಕಾಶಶಕ್ತಿಯಾದ ಈ ಅಮ್ಮಾ ಅಥವಾ ಚಿತ್ ಶಕ್ತಿಯಿಂದ ಲೋಕಾಲೋಕಗಳು, ಸಚರಾಚರಗಳು ರಚನೆಗೊಳ್ಳುವವು. ಅಗ್ನಿ ಅಗ್ನಿಯಲ್ಲಿಯ ದಾಹಕಶಕ್ತಿ, ಸೂರ್ಯ ಸೂರ್ಯನಲ್ಲಿಯ ಪ್ರಕಾಶಶಕ್ತಿ, ಚಂದ್ರ ಚಂದ್ರನಲ್ಲಿಯ ಶೈತ್ಯಶಕ್ತಿ ಇವುಗಳಲ್ಲಿ ಅವಿನಾಭಾವ ಸಂಬಂಧವಿರುವಂತೆ ಆನ್ ಅಥವಾ ಶಿವನಲ್ಲಿ ಅಮ್ಮಾ ಅಥವಾ ಚಿತ್‌ಶಕ್ತಿಯು ಬಿಚ್ಚಿ ಬೇರಾಗದ, ಬೆರಸಿ ಒಂದಾಗದ ರೀತಿಯ ಲ್ಲಿರುವದು. ಶಿವನ ಆತ್ಮವೆಂದರೆ ಈ ಶಕ್ತಿಯಲ್ಲದೆ ಬೇರಿಲ್ಲ. ಈ ಶಕ್ತಿಗೆ ‘ ಜಾತ ವೇದಸ್ ’ ಎಂತಲೂ ಹೆಸರು. ಆದುದರಿಂದಲೇ ಇದಕ್ಕೆ ಹುಟ್ಟು-ಹೊಂದು ವಿಕೆಗಳ ಸಮ್ಯಕ್ ಜ್ಞಾನವಿರುತ್ತದೆ; ಬೇರ ಬೇರೆ ಜನ್ಮಗಳಿಗಿರುವ ಸಂಬಂಧದ ತಿಳಿವಳಿಕೆಯೂ ಇದಕ್ಕಿರುತ್ತದೆ. ಇಂಥ ಜನ್ಮಗಳ ಗೊತ್ತು ಗುರಿ, ರೀತಿ ನೀತಿ, ಭಿನ್ನತೆ ಏಕರೂಪತೆಗಳ ಜ್ಞಾನವೂ ಇವಕ್ಕಿರುತ್ತವೆ. ವಿಶ್ವದ ಗತಿಯು ಗಮನ ಗೊಳ್ಳುವುದಾದರೂ ಈ ದಿವ್ಯ ಶಕ್ತಿಯಿಂದಲೇ. ವಿಶ್ವಪ್ರೇರಕವಾದುದೂ ಈ ಶಕ್ತಿಯೇ ! ಆದುದರಿಂದ ಈ ಶಕ್ತಿಯನ್ನು “ ಸರ್ವಕರ್ತೃ ಸರ್ವಭೋಕ್ತೃ ಸರ್ವ ನಿಯಮಳು ” ಎಂದು ವರ್ಣಿಸಿದುದರಲ್ಲಿ ಆಶ್ಚರ್ಯವಿಲ್ಲ.

ಅಮ್ಮಾ ಅಥವಾ ಚಿತ್ ಶಕ್ತಿಯು ಇಲ್ಲವೆ ಪರಾಪ್ರಕೃತಿಯು ಆನ್ ಅಥವಾ ಶಿವನ ಅನಂತವಾದ ತ್ರಿಕಾಲಾಬಾಧಿತವಾದ ಅರುಹು ಅಲ್ಲದೆ ಬೇರಿಲ್ಲ. ವಿಶ್ವದ ಪ್ರಪಂಚಗಳೆಲ್ಲ ರೂಪಕ್ಕೆ ಬರುವುದಾಗಲಿ, ಇಲ್ಲವೆ ಕಾಲಾತೀತವಾದುವುಗಳು ಕಾಲಗತಿಯಲ್ಲಿ ಬರುವುದಾಗಲಿ ಇದರಿಂದಲೇ ಎಂದು ಹೇಳಿದುದೂ ಆಯಿತು.

ಆದರೆ ಅನೇಕಮುಖವಾದ ಈ ಪ್ರಪಂಚಕ್ಕೆ— ಈ ಆಗುಹೋಗುಗಳಿಗೆ ಆಧ್ಯಾತ್ಮಿಕ ತಳಹದಿಯು ಬೇಕು. ಅದನ್ನು ಒದಗಿಸಲೋಸುಗ ಆನ್ ಅಥವಾ ಶಿವನು ತನ್ನ ಸಹಜವಾದ ದಿವ್ಯಶಕ್ತಿಯ ಇಲ್ಲವೆ ಆಮ್ಮನ ಯೋಗದಿಂದ ಆನಿಲ್ ಅಥವಾ ಶರಣನಾಗುವನು. ಶಿವನ ನೆನಹಿನಿಂದ ರೂಪಗೊಂಡ ಈ ತೋರಿಕೆಯಲ್ಲಿ ಆನಿಲ್ ಅಥವಾ ಶರಣನು ವಿವಿಧ ಪ್ರಪಂಚಕ್ಕೆ ಸಾಕ್ಷೀಭೂತನಾಗಿರುವನು. ತನ್ನ ಸ್ವರೂಪದ ಅರುಹಿನಲ್ಲಿ ಶಿವನೊಡನೆ ಒಂದಾಗಿದ್ದರೂ ತೋರಿಕೆಯಲ್ಲಿ ವ್ಯಕ್ತವಾಗಿರುವ ಶಕ್ತಿಯಿಂದ ಶರಣನು ಬೇರೆಯಾಗಿರುವನು. ಶಿವಶಕ್ತಿಗಳೊಡನಿರುವ ಈ ಸಂಬಂಧದಿಂದ ಶರಣನು ಕಾಲಗತಿಯಲ್ಲಿ ತಲೆಯೆತ್ತಿದ ಒಬ್ಬ ಜೀವನೆಂದು ಭಾವಿಸಲಾಗದು. ಜೀವನು ವಿವಿಧ ಪ್ರಪಂಚಕ್ಕೆ ತಳಹದಿಯಾಗಿಹನು. ನಮ್ಮ ಅನುಭವಕ್ಕೆ ಗೋಚರವಾಗುವ ಅನೇಕತ್ವದ ಪ್ರಾಣವೆಂದರೂ ಈ ಜೀವನೇ! ಈ ಜೀವನಿಗೆ ಗೀತೆಯು ಬಣ್ಣ ಬದಲಿಸುವ, ಭಾಗವಾಗುವ, ಎರಡರ ಎಡೆಯಾಟದಲ್ಲಿ ಓಡಾಡುವ ಕ್ಷರ ಪುರುಷನೆಂದು ಕರೆಯುತ್ತದೆ. ಆದರೆ ಆನಿಲ್ ಅಥವಾ ಶರಣನು ಅಕ್ಷರಪುರುಷನು. ಅವನೇ ನಮ್ಮ ನಿರ್ವಿಕಾರ ನಿಜಾತ್ಮನು. ದೇವನೊಡನೆ ದಿವ್ಯ ಸಮರಸಿಯಾಗಲಿರುವ, ಅನಿತ್ಯವಾದ ಮತ್ತು ಬದಲಾಗುತ್ತಿರುವ ಸಂಗತಿಗಳಿಂದ ಬಿಡುಗಡೆ ಹೊಂದಲಿರುವ, ಅವಿಚ್ಛೇದಿಯಾದ ಆ ನಮ್ಮ ಆತ್ಮನು ಅವನೇ! ಆನಿಲ್ ಅಥವಾ ಅಕ್ಷರಪುರುಷನೊಡನೆ ನಮ್ಮ ಪುದುವಾಳ್ತೆಯನ್ನು ಪಡೆಯುವದರಲ್ಲಿಯೇ ನಮಗೆ ಮರವೆಯಿಂದ, ಕಾಮನೆಯಿಂದ ಮತ್ತು ವಿಧಿಬದ್ಧವಾದ ಕರ್ಮಗಳ ಕತ್ತರೆಯಿಂದ ಬಿಡುಗಡೆಯುಂಟಾಗುತ್ತದೆ. ತಂದೆಯು ತಾಯ ಸಂಗದಿಂದ ಮಗನಾಗಿ ಜನಿಸುವನು ಎಂಬ ಅರ್ಥಪೂರಿತವಾದ ಅನುಭವದ ಮಾತೊಂದಿದೆ. ದಾಸನಲ್ಲ, ದೇಸಿವಡೆವ ಮಗನಾಗಬೇಕೆಂಬುದನ್ನು ಸಿದ್ಧಿಸುವುದೇ ಸಾಕ್ಷಾತ್ಕಾರದ ರಹಸ್ಯವು. ವೀರಶೈವರು ಈ ಮಗನಿಗೆ ಶರಣ ಅಥವಾ ಅಂಗ ಎಂದು ಕರೆಯುವರು. ಯಾಕೆಂದರೆ ಇಳಿಕೆಯ ಕ್ರಮದಲ್ಲಿ ಶಿವನು ಚಿತ್ ಶಕ್ತಿಯಿಂದ ಶರಣನಾಗಿ ಹೊರಹೊಮ್ಮುವನು. ಹುದುಗಿದುವನ್ನು ಹೊರಹೊಮ್ಮಿಸುವ ಇಲ್ಲವೆ ಅಡಗಿದುದನ್ನು ಅರಳಿಸುವ ಈ ಘನವಾದ ಪ್ರಯೋಗದಲ್ಲಿ (Dynamis) ಆನ್-ಆನಿಲ್, ಶಿವ-ಶರಣ, ಲಿಂಗ-ಅಂಗ ಇವರ ಸಂಗ ಸಮರಸವು ದೊರೆಕೊಳ್ಳುವದು. ಅಂಗ-ಲಿಂಗಗಳ ಈ ಸಂಗದಲ್ಲಿ, ಆತ್ಮ-ಪರಮಾತ್ಮರ ಈ ಸೇರುವೆಯಲ್ಲಿ ಬಿಚ್ಚಿಬೇರಾಗದ ಬೆರೆಸಿ ಒಂದಾಗದ ದಿವ್ಯಾನುಭವವು ಒಡಮೂಡಿದೆ ಎಂಬುದೂ ಸ್ಪಷ್ಟವಾದುದು. ಎರಡಳಿದು ಏಕಾದ ಬಗೆಯು ಸತ್ಯವೂ ನಿತ್ಯವೂ ಆದುದಾದರೆ ಎರಡರ ಈ ಬಗೆಯು —ದ್ವಂದ್ವದ ಈ ಕಲಹವು ಸಹ ಒಂದೇ ಸವನೆ ತಲೆಯೆತ್ತಿ ಕುಣಿದಾಡುವಂತಹದೂ ಅಹುದು. ಆತ್ಮ ಪರಮಾತ್ಮರಲ್ಲಿಯ ಸಂಬಂಧವು ಒಬ್ಬರು ಇನ್ನೊಬ್ಬರಲ್ಲಿ ನೆನಹಿನಿಂದ ಸೇರುವೆಯಾದ ಸಂಬಂಧವು (Will-union); ವ್ಯಕ್ತಿತ್ವವನ್ನು ಕಂದಿಸುವ ಕುಂದಿಸುವ ಸಂಬಂಧವದಲ್ಲ.

ಯಾಕಂದರೆ ಆತ್ಮನಿಗೆ ಪರಮಾತ್ಮನಲ್ಲಿ ಹೊಂದಿಕೆಯಾದರೂ ತಾಯ ಒಡಲ ಕೂಸಿನ ವ್ಯಕ್ತಿತ್ವದಂತೆ ಆವನ ವ್ಯಕ್ತಿತ್ವಕ್ಕೆ ಅಸ್ತಿತ್ವವಿದೆಯೆಂದು ವೀರಶೈವರು ತಿಳಿಯುತ್ತಾರೆ. ಆತ್ಮ-ಪರಮಾತ್ಮರಲ್ಲಿಯ ಬೆರೆತು ಬೇರಾಗಿ ಕಾಣುವ (Union-in-separateness) ಈ ಗೂಢವು ಸರ್ವಸಮ್ಮತವಾದ ಅತ್ಯವಶ್ಯವಾದ ಅನುಭವದ ತತ್ವವಿದೆ. ಆದುದರಿಂದ ಅನಿಲ್ ಅಥವಾ ಅಂಗನು ಅನ್ ಅಥವಾ ಲಿಂಗದಲ್ಲಿ ಒಬ್ಬರಲ್ಲೊಬ್ಬರು ಹೊಂದಿಕೆಗೊಳ್ಳುವ ಹೋಲುವೆಯ (Identity-in-adaptability) ತೆರದಲ್ಲಿ ಸೇರುವೆಯಾಗಿರುತ್ತಾನೆ.

ಪರಶಿವನ ಪ್ರಕಟಿತೆಗೆ ಯೋಗ್ಯವಾದ ಲಿಂಗಲೀಲೆಗೆ ಭೋಗ್ಯವಾದ ಕಾರ್ಯ ಕ್ಷೇತ್ರ ನಿರ್ಮಿತಿಗೆ ಅಪಾರವಾದ ಅಂತರಂಗದ ಅರಿವಿನಿಂದ ಪ್ರಚೋದಿತವಾಗಿ ಅವ್ಮಾ ಅಥವಾ ಚಿತ್‌ಶಕ್ತಿಯು ಆತಮ್ ಅಥವಾ ಸೃಷ್ಟಿಯಾಗುವದು. ಯಾಕಂದರೆ ವಸ್ತುಗಳ ಮೊತ್ತವೆಲ್ಲ ಶಿವನ ಸ್ವಸ್ವರೂಪದಿಂದ ಹೊರಹೊಮ್ಮಿ ರೂಪಗೊಂಡು ಸೃಷ್ಟಿಯಲ್ಲಿ ಪರಿಣಾಮಗೊಂಡುದು. ಶಿವನಿಗೆ ಲಿಂಗ-ಅಂಗವೆಂದು ಇತ್ತೆರನಾಗಿ ತತ್ವಗೊಳ್ಳುವದು ಸೈಜವಾಗಿರುವಂತೆ ಶಕ್ತಿಗೆ ದೃಷ್ಟಿ ಮತ್ತು ಸೃಷ್ಟಿ ಎಂಬ ಇಬ್ಬಗೆಯಾದ ತತ್ವದಲ್ಲಿ ರೂಪಗೊಳ್ಳುವುದು ಸ್ವಾಭಾವಿಕವಾದುದು. ಯುರೋಪ ದವರು ಯಾವುದಕ್ಕೆ ಪ್ರಕೃತಿ (Nature) ಎಂದು ಕರೆಯುವರೋ ಅದು ಕೇವಲ ಆತಮ್ ಅಥವಾ ಸೃಷ್ಟಿಯು. ಆತಮ್ ಅವ್ಮಾ ಇವುಗಳೊಳಗಿನ ಆಳವಾದ ಮತ್ತು ನೀಳವಾದ ಮೇಲು ಕೀಳುಗಳ ದೆಸೆಯಿಂದಲೇ ಮತ್ತು ಅಧಃಪ್ರಕೃತಿ ಊರ್ಧ್ವಪ್ರಕೃತಿ ಇವುಗಳೊಳಗಿನ ಹೆಚ್ಚು ಕಡಮೆಯ ದೆಸೆಯಿಂದಲೇ ವೀರಶೈವನು ವ್ಯಕ್ತಿ ಮತ್ತು ವಿಶ್ವಗಳೊಳಗಿನ ಕೊನೆಗಾಣಿಸಲು ಬಾರದ ಈ ಕಲಹವನ್ನು ಕಿತ್ತೊಗೆಯಲು ಶಕ್ತನಾಗಿಹನು. ಅವನಿಗೆ ನಾನಾತ್ವದಲ್ಲಿ ಅಥವಾ ದ್ವೈತದಲ್ಲಿ ಅಲ್ಪ ಸತ್ಯವೂ ಏಕತ್ವದಲ್ಲಿ ಅಥವಾ ಅದ್ವೈತದಲ್ಲಿ ಮಹಾಸತ್ಯವೂ ತೋರುವುದು. ಅವನಿಗೆ ಹಲವು ಮತ್ತು ಒಂದು ಈ ಎರಡೂ ಸತ್ಯವೇ! ಯಾವುದೂ ಮಾಯೆಯಾಗಿ, ಮಾಟವಾಗಿ, ಮರುಳಾಗಿ ತೋರದು. ಯಾಕಂದರೆ ಆತಮ್ ಅಥವಾ ಸೃಷ್ಟಿಯು ಶಿವನ ನೆನಹಿನಿಂದ ಹೊರಹೊಮ್ಮಿದುದು, ಅದರಲ್ಲಿ ದೈವೀಪ್ರೇರಣೆಯ ದಿವ್ಯ ಉದ್ದೇಶವೊಂದಿದೆ, ಅದನ್ನು ಕಂಡುಹಿಡಿದು ಅದನ್ನು ಕೊನೆಮುಟ್ಟಿಸಬೇಕೆಂಬುದೇ ಅವನ ಗೊತ್ತುಗುರಿ. ಇದನ್ನು ಸಾಧಿಸಿಕೊಳ್ಳಲು, ಸಂಕುಚಿತ ದೃಷ್ಟಿಯ ನೆನಹನ್ನು ತಿದ್ದಿ ಸರಿಪಡಿಸಿಕೊಳ್ಳಲು, ಸಮ್ಯಕ್ ದೃಷ್ಟಿಯ-ಸುಜ್ಞಾನ ದೃಷ್ಟಿಯ ಅಥವಾ ಅನಿಮಿಷದೃಷ್ಟಿಯ ಆನಂದಪ್ರತೀತಿಯನ್ನು ಪಡೆಯಲು ಮತ್ತು ಆ ಆನಂದ ಜ್ಯೋತಿಯಲ್ಲಿ ಕಾಮನೆಗಳ ಕತ್ತಲೆಯನ್ನು ಪರಿಹರಿಸಿಕೊಳ್ಳಲು ಆತಮ್ ಅಥವಾ ಸೃಷ್ಟಿಯು ಒಂದು ಕಾರ್ಯರಂಗವೆಂದು ವೀರಶೈವನು ಭಾವಿಸಿಕೊಳ್ಳುವನು.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮದೇವಾ.

ವೀರಶೈವವು ಎತ್ತ ಸಾಗಿದೆ ಎಂಬುದನ್ನು ತಿಳಿದುಕೊಳ್ಳುವ ಹದಕ್ಕೆ ನಾವೀಗ ಬಂದಿಹೆವು. ವೀರಶೈವವು ಎತ್ತ ಸಾಗಿದೆ ಎಂಬ ಪ್ರಶ್ನೆಗೆ ಆನ್ ಆನಿಲ್ ಅವ್ಮಾ ಮತ್ತು ಅತಮ್ ಅಥವಾ ಶಿವ ಶರಣ ಶಕ್ತಿ ಮತ್ತು ಸೃಷ್ಟಿ ಈ ನಾಲ್ಕು ತತ್ವಗಳಿಂದ ಅನುಭವಿಗಳೆಲ್ಲರ ಅನುಭವಸಮ್ಮತವಾದ ಹೊಂದಿಕೆಯ ಜೀವನವು ಹೊರ ಹೊಮ್ಮಿರುವದೆಂಬ ಈ ಸಿದ್ಧಾಂತವನ್ನು ಮಂಡಿಸುವದರಲ್ಲಿ ಮತ್ತು ಇಂಥ ಜೀವನದ ವಿಕಾಸವನ್ನು ಕಂಡುಕೊಳ್ಳುವದರಲ್ಲಿ ವೀರಶೈವವು ಮುಂದುವರಿದಿದೆ ಎಂಬ ಮಾರು ತ್ತರವನ್ನು ಹೇಳಬಲ್ಲೆವು. ಅನುಭವದ ಘನತೆಯಿಂದ ಬೆರೆತ ಈ ನಾಲ್ಕು ಪದ ಗಳಲ್ಲಿ ಅಗಲಿಸಲಾಗದ ಮೇಳವಿದೆ ಎಂಬುದು ಸ್ಪಷ್ಟವಾದುದು. ಇವುಗಳ ಸಂಯೋಗದಲ್ಲಿ ವಿಭಾಗದ ಸ್ವರೂಪವಿಲ್ಲ ಎಂಬುದೂ ಸ್ಪಷ್ಟವಾದುದು. ಆದರೂ ಈ ಪದಗಳ ತಾತ್ವಿಕ ವಿವೇಚನೆಯಲ್ಲಿ ಇಂಥದೊಂದು ವಿಂಗಡಿಕೆಯನ್ನು ಅಂಗೀಕರಿಸ ಬೇಕಾಯಿತು. ಈ ನಾಲ್ಕರ ತತ್ವವಿವರಣೆಯಲ್ಲಿ ಇಷ್ಟಲಿಂಗದ ಕಲ್ಪನೆಯು ಪ್ರತಿ ಬಿಂಬಿತವಾಗಿ ಈ ತತ್ವಗಳನ್ನೊಳಗೊಂಡ ಸಿದ್ಧಾಂತವು ವೀರಶೈವ ಸಿದ್ಧಾಂತವೆಂದು ಕರೆಯಿಸಿಕೊಂಡಿದೆ ಎಂದು ಹೇಳಬೇಕಾದರೆ ಕಾರಣವಿಲ್ಲದೆ ಇಲ್ಲ. ಉದ್ದ ಅಗಲ ಎತ್ತರ ಇಲ್ಲವೆ ಮೇಲೆ ಕೆಳಗೆ, ಎಡ ಬಲ,ಹಿಂದೆ ಮುಂದೆ ಈ ಮೂರು ಮಾತು ಗಳು ದೇಶ (ಅವಕಾಶ) ವರ್ಣನೆಯನ್ನು ಮಾಡುತ್ತವೆ. ಆದರೆ ಕಾಲದ ಸಂಬಂಧ ವಿಲ್ಲವೆ ಅವಕಾಶದ ವರ್ಣನೆಯು ಪೂರ್ಣತೆಗೊಳ್ಳದು ಎಂಬುದನ್ನು ಮರೆಯಲಾಗದು. ಅವಕಾಶವು ಅನಂತವಾದುದು; ಅದರಂತೆ ಕಾಲವೂ ಅನಂತವಾದುದು. ವಸ್ತುವಿನ ಅಸ್ತಿತ್ವವನ್ನು ವಿವರಿಸಲು ಅನಂತವಾದ ಈ ಕಾಲ-ಅವಕಾಶಗಳ ಸಂಬಂಧ ಸಿದ್ಧಾಂತವು (The Theory of Relativity) ಅತ್ಯವಶ್ಯವೆಂದು ಮಂಡಿಸಿದ ಅಲ್ಬರ್ಟ ಈನಸ್ಟನ್‌ನ (ಜನ್ಮ ೧೮೭೯) ಅಭಿಪ್ರಾಯವು ಪದಾರ್ಥವಿಜ್ಞಾನಶಾಸ್ತ್ರದಲ್ಲಿ ಕ್ರಾಂತಿಯನ್ನೆಬ್ಬಿಸಿ ಗಣಿತಶಾಸ್ತ್ರದ ಭ್ರಾಂತಿಯನ್ನು ಅಡಗಿಸಿದಂತೆ ಹಸುಗೆಗೆ ಎಡೆ ಯಿಲ್ಲದಂತೆ ಬೆಸುಗೆಯಾಗಿರುವ ಈ ನಾಲ್ಕು ತತ್ವಗಳ ಸಿದ್ಧಾಂತವು ತತ್ವ ಜ್ಞಾನದ ಬುಡವನ್ನು ಅಲ್ಲಾಡಿಸಿ ತಿದ್ದುಪಡೆಯನ್ನು ಉಂಟುಮಾಡುವುದಲ್ಲದೆ ಅನುಭವ ಕಲೆಗೆ ಕೇಂದ್ರವಾಗಿದೆಯೆಂದು ಅರಿಯಬಹುದು.

ಇಷ್ಟಲಿಂಗದ ಕಲ್ಪನೆಯಲ್ಲಿ ಹಸುಗೆಯಿಲ್ಲದ ಬೆಸುಗೆಯಿಂದ ಕೂಡಿದ ಈ ನಾಲ್ಕು ತತ್ವಗಳು ಅದು ಹೇಗೆ ಅಡಕವಾಗಿವೆ ಎಂಬುದನ್ನು ಆಕೃತಿಗಳಿಂದ ಈಗ ತಿಳಿಸಿದರೆ ತೀರಿತು; ಇಷ್ಟ ಲಿಂಗದ ರಹಸ್ಯವನ್ನು ಹೇಳಿದಂತಾಯಿತು. ಅತಮ್ ಅಥವಾ ಸೃಷ್ಟಿಯನ್ನು ಗೀತೆಯು ಅಪರಾಪ್ರಕೃತಿಯೆಂದೂ ಆಗಮವು ಅಧಃ

ಸೃಷ್ಟಿಯೆಂದೂ ಕರೆಯುತ್ತವೆ. ಯಾಕಂದರೆ ಒಂದರಲ್ಲಿ ಹಲವು ಬಗೆಯಾಗಿ ರೂಪಗೊಳ್ಳುವುದೇ ಈ ಅಧಃ ಸೃಷ್ಟಿಯ ಲಕ್ಷಣವು. ಒಂದರ ಹುದುಗದಲ್ಲಿ ಹುದುಗಿದ ಹಲವನ್ನು ಹಲವಾಗಿ ಒಗೆವಂತೆ ಮಾಡುವದು ಒಂದರ ಲೀಲೆ. ಹೀಗೆ ಒಂದು ತನ್ನತನದಲ್ಲಿ ಬದಲಾಗುವದರಿಂದ ಮತ್ತು ಜೀವನದ ದೃಷ್ಟಿಕೋನದಲ್ಲಿ ವಿಂಗಡಿಕೆಗೆ ಅವಕಾಶವನ್ನು ಕಲ್ಪಿಸಿಕೊಡುವುದರಿಂದ, ಇದು ಅರುವಿನ ಅನೇಕ ಕೇಂದ್ರಗಳುಳ್ಳವೆಂದೂ ಮತ್ತು ವಿಶ್ವಗತಿಯಲ್ಲಿ ವ್ಯಕ್ತವಾಗುವ ಅನಂತ ಶಕ್ತಿಗಳಲ್ಲಿ ಹಂಚಿಕೆಗೊಂಡು ಇದು ನೆಲೆಸಿರುವದೆಂದೂ ಹೊಳೆಯುತ್ತದೆ. ಈ ಅಪರಾಪ್ರಕೃತಿಯು ವಿಶ್ವಗತಿಯ ಉದ್ದೇಶಕ್ಕೆ ಸಾಧನವಾಗಿಹುದು. ಮತ್ತು ಅಪಾರವಾದ ತುರೀಯ ಆನಂದವನ್ನು ಎಡೆವಿಡದೆ ಪ್ರಕಟಗೊಳಿಸುವ ದಿವ್ಯಶಕ್ತಿಯ ಪ್ರಗತಿಪರ ಆವಿರ್ಭಾವಕ್ಕೆ ಅನುಕೂಲವಾಗಿಹುದು ಎಂದು ವೀರಶೈವನು ತಿಳಿಯುತ್ತಾನಷ್ಟೇ! ಇನ್ನು ಈ ಜೀವ-ಮನಗಳನ್ನು ಕುರಿತು ಒಂದಿಷ್ಟು ಆಲೋಚಿಸುವಾ. ಹರಿದಾಟವಿರುವಲ್ಲೆಲ್ಲ ಜೀವ-ಮನಗಳು ಅಡಗುವ ಮತ್ತು ಅರಳಿಸುವ ಸಾಮರ್ಥ್ಯದಿಂದ ಕೂಡಿಕೊಂಡು ಇದ್ದುದು ಕಂಡಬರುತ್ತದೆ. ಮತ್ತು ಜೀವ-ಮನಗಳು ಮೊದಲ ಕಾರ್ಯಪ್ರವೃತ್ತಿಗೆ ಅನುಕೂಲಿಸುವಂಥ ಒಂದು ಪ್ರಾಕೃತ ರೂಪದಿಂದ ಕೂಡಿಕೊಂಡಿರುವವು. ಈ ಅಧಃ ಸೃಷ್ಟಿಯಲ್ಲಿ ಪ್ರಕೃತಿ-ಜೀವ-ಮನ ಎಲ್ಲವೂ ಪ್ರಾಕೃತ ಅಂಶಗಳೇ. ಪಾಶ್ಚಿಮಾತ್ಯ ತತ್ವಜ್ಞಾನಿಗಳ ಈ ವಿಚಾರವಾಗಲಿ, ಸಾಮಾನ್ಯವಾಗಿ ಇವಕ್ಕೇ ಹಿಂದು ತತ್ವಜ್ಞಾನಿಗಳು ಕರೆಯುವ ಸತ್ವ-ರಜ-ತಮ ಗುಣಗಳ ವಿಚಾರವಾಗಲಿ ಪ್ರಾಕೃತ ಸೃಷ್ಟಿಗೆ ಸಂಬಂಧಪಟ್ಟುದು. ಸತ್ವ-ರಜ-ತಮಗಳು ಸಮತೂಕದಲ್ಲುಳಿಯಬೇಕು; ಅಂದರೆ ಅತಮ್ ಅಥವಾ ಅಧಃ ಸೃಷ್ಟಿಯು ಹಿಡಿತದಲ್ಲುಳಿಯುವದು ಎಂದು ತತ್ವಜ್ಞಾನಿಗಳು ಹೇಳುತ್ತಾರೆ. ಸಮತೂಕಕ್ಕಿಳಿದ ಈ ಸೃಷ್ಟಿಯನ್ನು ಒಂದು ಸಮಭುಜ ತ್ರಿಕೋಣದಿಂದ △ ಹೀಗೆ ರೂಪಿಸಬಹುದು.

ಅಮ್ಮಾ ಅಥವಾ ಚಿತ್ ಶಕ್ತಿಗೆ ಗೀತೆಯು ಪರಾಪ್ರಕೃತಿಯೆಂದು ಕರೆಯುತ್ತದೆ; ಆಗಮಗಳು ಊರ್ಧ್ವಸೃಷ್ಟಿಯೆಂದು ಕರೆಯುತ್ತವೆ. ಇದು ಕೇವಲ ಒಂದರ (Unity) ಅರಿವಿನಿಂದ ಕೂಡಿದುದು. ಒಂದು ಎನ್ನುವುದು ಪ್ರಾಮುಖ್ಯವಾದ ಸತ್ಯವು. ಇದು ಇಲ್ಲದಿದ್ದರೆ ಹಲವು ಎನ್ನುವದು ಅಸತ್ಯವೇ ಸರಿ. ಅನೇಕತ್ವವು ಏಕತ್ವದಲ್ಲಿ ಸ್ಪಷ್ಟವಾಗಿಯಾಗಲಿ, ಇಲ್ಲವೆ ಅಸ್ಪಷ್ಟವಾಗಿಯಾಗಲಿ ಇದ್ದೇ ಇರುತ್ತದೆ. ಇದು ಇಲ್ಲದಿದ್ದರೆ ಏಕತ್ವವು ಏನೂ ಇಲ್ಲದ ಬಚ್ಚಬರಿಯ ಬಯಲು (Void of non-existence) ಎನಿಸುವದು ಇಲ್ಲವೆ ಶಾಂತಿಯುಕ್ತ ಶೂನ್ಯವೆನಿಸುವದು (State of blank repose). ಈ ಏಕತ್ವದ ಅರಿವಿನಲ್ಲಿ "ಎಲ್ಲವೂ ನೀನೆ ಇರುವೆ, ಎಲ್ಲರೊಳು ನೀ ವ್ಯಾಪಿಸಿರುವೆ" ಎಂಬ ಭಾವವು ಬಲಿತಿರುವದು. ಅದರಲ್ಲಿ ಕಲ್ಪನೆಯ ಕೈಚಳಕವಾಗಲಿ ಕಣ್ಣಾರಿಕೆಯ ಕೋಟಲೆಯಾಗಲಿ ಇರದು. ಒಂದರ ಈ ಅರಿವಿ

ನಿಂದ ಆತ್ಮನು ಶುದ್ಧವಾದ ಇರುವಿಕೆಯಲ್ಲಿ, ಶುದ್ಧವಾದ ಎಚ್ಚರಿಕೆಯಲ್ಲಿ ಮತ್ತು ಶುದ್ಧವಾದ ಹಿಗ್ಗುವಿಕೆಯಲ್ಲಿ ವ್ಯಕ್ತಗೊಳ್ಳುವನು; ಸಚ್ಚಿದಾನಂದಮಯನಾಗಿ ತೋರುವನು. ಪ್ರಭುವಿನ ಪ್ರಾಣವಾಗಿರುವ ಈ ಅಮ್ಮಾ ಅಥವಾ ಪರಾಪ್ರಕೃತಿಯು ಸಹ ಸಚ್ಚಿದಾನಂದಮಯಿಯಾಗಿರುವಳು. ಅರಿವಿನ ಈ ಪರಾಕಾಷ್ಠತೆಯನ್ನು ರೂಪಿಸಲು ಇನ್ನೊಂದು ಸಮಭುಜ ತ್ರಿಕೋಣವು ಬೇಕು. ಯಾಕಂದರೆ ಸತ್ ಚಿತ್ ಆನಂದ ಇವುಗಳಲ್ಲಿ ಆವುದು ಕಿರಿದು ಆವುದು ಹಿರಿದು ಎಂದು ಹೇಗೆ ಹೇಳುವದು? ಆದರೆ ಅಲ್ಲಿ ಅಮ್ಮಾ ಮತ್ತು ಅತಮ್ ಇವುಗಳಲ್ಲಿಯ ಸೂಕ್ಷ್ಮವಾದ ಅರ್ಥಗೌರವದ ಅಭ್ಯಂತರವನ್ನು ಮಾತ್ರ ಗಮನಿಸಬೇಕು. ಅಮ್ಮಾ ಸಚ್ಚಿದಾನಂದಮಯಿಯಾದರೆ ಅತಮ್ ಸತ್ವರಜಸ್ತಮೋಮಯಿಯಾಗಿಹುದು. ಅಮ್ಮಾ ಪರಾಪ್ರಕೃತಿಯಾದರೆ ಅತಮ್ ಅಪರಾಪ್ರಕೃತಿಯಾಗಿಹುದು. ಅಮ್ಮಾ ಅಧ್ಯಾತ್ಮಿಕ ಊರ್ಧ್ವಸೃಷ್ಟಿಯಾದರೆ ಅತಮ್ ಭೌತಿಕ ಅಧಃ ಸೃಷ್ಟಿಯಾಗಿಹುದು. ಆದರೂ ಇವು ಒಂದರಿಂದ ಇನ್ನೊಂದು ಬೇರೆಯಾಗಿಲ್ಲ. ಒಂದಕ್ಕೊಂದು ಹೊಂದಿಕೆಯಾದ ತೆರದಲ್ಲಿರುವವು. ಅವನ್ನು ಚಿತ್ರಿಸುವ ತ್ರಿಕೋಣಗಳು ಅವುಗಳಂತೆಯೇ ತೋರಿಕೆಯಲ್ಲಿ ಒಂದೇ ಆದರೂ ಇರುವಿಕೆಯಲ್ಲಿ ಭಿನ್ನವಾಗಿವೆ. ಯಾಕಂದರೆ ಗುಣತ್ರಯವನ್ನು ಚಿತ್ರಿಸುವ ತ್ರಿಕೋಣದ ವಿರುದ್ಧ ದಿಶೆಗೆ ಮಾರ್ಪಾಟಾದ ಅವಸ್ಥೆಯನ್ನು, ಸಚ್ಚಿದಾನಂದಲಕ್ಷಣತ್ರಯವನ್ನು, ಚಿತ್ರಿಸುವ ತ್ರಿಕೋಣವಿರಬೇಕಾಗುವದು. ಇಂತು ಚಿತ್ರಿಸಿದಾಗ ಅವುಗಳ ಆಕಾರವು X ಹೀಗೆ ಆಗುವದು.

ಅಧಃಸೃಷ್ಟಿ ಊರ್ಧ್ವಸೃಷ್ಟಿ ಇವೆರಡರ ನಡುವೆ ಇವೆರಡನ್ನು ತಳಕು ಹಾಕುವ ಸೃಷ್ಟಿಯೊಂದಿದೆ. ಇದು ಅರುಹಿನ ಸೃಷ್ಟಿಯು. ಇದಕ್ಕೆ ವಸ್ತುಗಳ ಯಥಾರ್ಥಜ್ಞಾನವೇ ತಳಹದಿಯು. ಶಾಸ್ತ್ರದಲ್ಲಾಗಲಿ ಸೊಬಗಿನಲ್ಲಾಗಲಿ, ತತ್ವದಲ್ಲಾಗಲಿ ತೋರಿಕೆಯಲ್ಲಾಗಲಿ ಸತ್ಯವನ್ನು ಶೋಧಿಸುವ ಮಾನವನ ಹರಿದಾಟಗಳಲ್ಲೆಲ್ಲ —ಜ್ಞಾನಸಂಪಾದನೆಯ ಈ ಪ್ರಯತ್ನಗಳಲ್ಲೆಲ್ಲ ಒಳ್ಳೇ ಜೀವನದ ಹೋರಾಟವು ಒಡಮೂಡಿದೆ. ಇವು ಒಂದು ಕಲೆಯ ಕಾಂತಿಯ ರಚನೆಗಾಗಿ ಇರಲಿ ಇಲ್ಲವೆ ಒಂದು ಸೊಬಗಿನ ಸವಿಯ ಸೇವನೆಗಾಗಿ ಇರಲಿ —ಇವೆಲ್ಲ ನೀತಿಯ ಹೊದಕೆಯಲ್ಲಿ ಒಡೆದುಕಾಣುವ ಎಂದೆಂದೂ ಮಸುಳಿಸಲು ಬಾರದ ಉತ್ತಮಜೀವನದ ಇಂಪನ್ನು ಸೊಂಪನ್ನು ಪೆಂಪನ್ನು ನಿರೂಪಿಸುತ್ತಿವೆ. ಜೀವಿತವಲ್ಲೆಲ್ಲ ಮಾನವನು ತಾನು ಪರವಸ್ತುವಿನ ಸನ್ನಿಧಿಯಲ್ಲಿರುವಂತೆ ತದಿತರವಾದ ಬೇರೊಂದು ವಸ್ತುವಿನೊಡನೆ ತಾನು ಸಂಬಂಧವನ್ನಿಟ್ಟುಕೊಂಡಂತೆಯೂ ತಿಳಿಯುತ್ತಾನೆ. ಈ ತರಹದ ತಿಳಿವಳಿಕೆಗೆ ಅಂತಃಕರಣಗಳಾಗಲಿ ಬಹಿಃಕರಣಗಳಾಗಲಿ ಕಾರಣೀಭೂತವಾಗಿರಬೇಕು. ಈ ತರಹದ ಒಳಹೊರಗಿನ ತಿಳಿಯು ಈ ತರಹದ ಜ್ಞಾತೃಜ್ಞೇಯ ಜ್ಞಾನವು ಪ್ರತಿಯೊಂದು ಅನುಭವಜೀವನದಲ್ಲಿ ಪ್ರಾಮುಖ್ಯ

ವಾದುದು. ಅಧ್ಯಾತ್ಮಸಾಧನೆಯ ಈ ಕಾರ್ಯಗಳಲ್ಲಿ, ಜ್ಞಾನಾನುಭವ ಸಂಪಾದನೆಯ ಈ ಕಾರ್ಯಗಳಲ್ಲಿ ನಮ್ಮಿಂದ ಇತರವಾದುದು ಕೇವಲ ಇತರವಲ್ಲ, ಅದು ನಮ್ಮದು ಎಂಬ ನಂಬುಗೆಗೆ ಇಂಬಿರುವದು. ಅರುಹಿನ ಸೃಷ್ಟಿಯ ಒಡನಾಡಿಗೆ ಅನಿಮಿಷ ದೃಷ್ಟಿಯ ಸಂಪಾದಕನಿಗೆ ಸಮ್ಯಕ್‌ಜ್ಞಾನ ಸಂಪಾದಕನಿಗೆ ಅಥವಾ ಸುಜ್ಞಾನಿಗೆ ಈ ನಂಬುಗೆಯು ಅತ್ಯವಶ್ಯ ಇರಬೇಕಾದುದು. ಅಂದರೇನೇ ಅದು ನಮ್ಮ ಅಂತರಂಗದ ಮಾತಿಗೆ-ಮಾರುತ್ತರವನ್ನ ಪೇಕ್ಷಿಸುವ ನಮ್ಮ ಒಳುನುಡಿಗೆ-ಪ್ರತ್ಯುತ್ತರವಾದಿಯಾಗುತ್ತದೆ. ಮಾರುತ್ತರವೀವ ಈ ದಿವ್ಯದೃಷ್ಟಿಯು ನಮ್ಮ ಆಧ್ಯಾತ್ಮಿಕ ಕಾರ್ಯಕಲಾಪಗಳಲ್ಲೆಲ್ಲ ವ್ಯಾಪ್ತಿಗೊಂಡು ಒಡೆನುಕಾಣುತ್ತಿದೆ. ಈ ದೃಷ್ಟಿಯಿಂದ ವಿಚಾರಿಸಲು ಮಾರ್ಮ್ನಡಿಗುಡುವ ಈ ತಿಳಿಗಣ್ಣನ್ನು ತುಂಬ ಅರಳಿಸುವಂತೆ ಮಾಡುವ ಕಾರ್ಯವೇ ಅನುಭವ ಸಂಪಾದನೆ ಎನಿಸುತ್ತದೆ. ಈ ದೆಸೆಯಿಂದಲೇ ಇದು ಇನ್ನೊಂದು ನಾಲ್ಕನೆಯ ತುರೀಯ ಸೃಷ್ಟಿಯ ಶಕ್ಯತೆಯನ್ನು ಸೂಚಿಸುತ್ತಿದೆ.

ಹಿಂದು ತತ್ವಜ್ಞಾನಿಗಳು ಈ ಸೃಷ್ಟಿಗೆ ಮಹರ್ಲೋಕವೆನ್ನುವರು. ಯಾಕೆಂದರೆ ಇದು ಅಪಾರವಾದ ಅರುಹಿನ ಸೃಷ್ಟಿಯು. ಈ ಮಹರ್ಲೋಕದ ರಹಸ್ಯವು ಬುದ್ಧಿಗಮ್ಯವಾದ (Intellect) ವಿಷಯವಲ್ಲ; ಭಾವಗಮ್ಯವಾದ (Intuition) ವಿಷಯವು. ಬುದ್ಧಿಗಮ್ಯ ವಿಷಯವು ಆಕಾರವನ್ನು ಕಾಣುವದಲ್ಲದೆ ಕಂಡ ಆಕಾರದಲ್ಲಿ ತನ್ನ ಸ್ವರೂಪವನ್ನೂ ನಿಶ್ಚಯಿಸುವದು. ಹೀಗೆ ಒಮ್ಮೆ ಸ್ವರೂಪ ನಿಶ್ಚಯವಾಗಲು ಇದು ಇನ್ನುಳಿದ ಎಲ್ಲ ಬುದ್ಧಿಗಮ್ಯವಿಷಯುಗಳಿಗಿಂತ ಭಿನ್ನವಾಗಿ ತೋರುವದು. ನಿರ್ದಿಷ್ಟವಾದ ಭಾವಗಮ್ಯ ವಿಷಯವು ವಸ್ತುವಿನಲ್ಲಿ ತನ್ನ ತಾ ಕಾಣುವದಲ್ಲದೆ ವಸ್ತುನಿಷ್ಪನ್ನವಾದ ಈ ಸೃಷ್ಟಿಯಲ್ಲಿಯೂ ತನ್ನ ತಾ ಕಾಣುವದು. ಇದು ಒಂದು ಕುರುಹಿನಲ್ಲಿ ಪ್ರತಿಬಿಂಬಿಸುವ ಈ ಪ್ರಪಂಚದೊಡನೆ ತನ್ನ ಸ್ವರೂಪವನ್ನು ಹೊಂದಿಸಿಕೊಂಡಿರುವದು. ಆದುದರಿಂದಲೇ ಸ್ವರೂಪದ ಮರೆಯ ಸತ್ಯದ ಜ್ಞಾನವನ್ನು ಇದು ಯಾವಾಗಲೂ ತನ್ನಲ್ಲಿ ಬೆರಸಿಕೊಂಡಿರುವದೆಂದು ಹೇಳಬೇಕಾಗುವದು. ಇದರ ಧರ್ಮವು ದೃಷ್ಟಿ —ಇದ್ದಕ್ಕಿದ್ದಂತೆ ಕಾಣುವದು —ಕಲ್ಪಿಸುವದಲ್ಲ. ಇಂಥ ದೃಷ್ಟಿಯನ್ನು, ಇಂಥ ಸಮ್ಯಕ್ ದೃಷ್ಟಿಯನ್ನು ಸಂಪಾದಿಸಿದ ಮಹಾಂತನು ಅನಿಲ್ ಅಥವಾ ಶರಣ ಇಲ್ಲವೆ ಮಹರ್ಷಿಯು. ಇವನನ್ನು ರೂಪಿಸುವದು ಒಂದು ನೆಟ್ಟನೆಯ ಗೆರೆಯಿಂದ. ಯಾಕೆಂದರೆ ಶರಣನು ಜನನ ಮರಣಾತ್ಮಕ ಸಂಸಾರ ಚಕ್ರಕ್ಕೆ— ಪೂರ್ವಾಶ್ರಯದ ಹುರುಳಿಲ್ಲದ ಪೂರ್ಣತೆಗೆ ಎದುರಾಗಿ ಸಾಗಿದವನು. ಆದುದರಿಂದ ಈ ಮೂರನೆಯ ಮೆಟ್ಟಲಿನಲ್ಲಿ ಲಿಂಗದ ಕಲ್ಪನೆಯ ವಿಕಾಸಕ್ಕೆ X ಈ ರೂಹು ಉಂಟು. ಶರಣನಲ್ಲಿ ಸಮ್ಯಕ್ ದೃಷ್ಟಿಯ ವ್ಯವಹಾರಗಳು ಬಲಗೊಳ್ಳುವದರಿಂದ ಮತ್ತು ಆವನ ಜೀವನವೆಲ್ಲ ಶುದ್ಧವಾದ ಇರುವಿಕೆಯಲ್ಲಿ ಸಾಗಿರುವದರಿಂದ ಸತ್ ಇದನ್ನು ರೂಪಿಸುವ ರೇಖೆಯಲ್ಲಿ ಬಲಕ್ಕೆ ಶರಣನನ್ನು ರೂಪಿಸುವ ರೇಖೆಯನ್ನು ಬೆಳೆಸಿದೆ. ಶರಣನು ಚಿತ್ ಶಕ್ತಿಯ ಒಡಲಿನಿಂದೊಗೆದವನಲ್ಲವೇ ?

ಕೊನೆಯದಾಗಿ ನಾವು ರೂಪಿಸಬೇಕಾದುದು ಆನ್ ಅಥವಾ ಶಿವನನ್ನು. ಶಿವನು ತುರೀಯ ಸತ್ಯವಸ್ತುವು, ಜ್ಞಾನಮಯನು, ಏಮೃಶಕ್ತಿಯುತನು, ವಿಶ್ವಾತೀತನು, ಅನಂತನು. ಇವನನ್ನು ಆಸ್ತಿಕ ಮತವಾದಿಗಳು ಸಚರಾಚರದ ರಚನೆಗೆ ಬಾರದ, ವಾಚಾಮಗೋಚರವಾದ ಪ್ರಕಾಶನೆಂದು ( Ineffable and uncreated Light ) ಪ್ರಶಂಸಿಸುವರು. ಕ್ರೈಸ್ತ ಅನುಭವಿಗಳು ದೇವ, ದಿವ್ಯಕತ್ತಲೆ, ಗಹನವಾದ ಗುಹೆ (God-head, the Divine Dark, the Deep Abyss ) ಎಂದು ಕರೆಯುವರು. ವೀರಶೈವ ಶರಣರು ಅನಾದ್ಯನಂತ ಪ್ರಕಾಶಮಯ ಸ್ಥಿರ ನಿಃಶಬ್ದ ಬ್ರಹ್ಮ ( The infinite luminous Silence ) ಎಂದು ಹೊಗಳುವರು. ಸೂಫಿ ಅನುಭವಿಗಳು ಬಚ್ಚ ಬರಿಯ ಬೆಳಕು ( The Dawn of Nothing ) ಎಂದು ವರ್ಣಿಸುವರು. ಇಂಥ ಶಿವನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ ಜಗವ ಹುಟ್ಟಿಸಲೂ ಬಲ್ಲ, ಜಗವ ಹೊಂದಿಸಲೂ ಬಲ್ಲ; ತನ್ನಿಂದ ಒಕ್ಕು ಮಿಕ್ಕು ಪ್ರಸಾದವೆನಿಸುವ ಈ ವಿಶ್ವದಲ್ಲಿ ತಾನೆ ತೊಟ್ಟಿಲವಾಗಿ, ತಾನೆ ಶಿಶುವಾಗಿ, ತಾನೆ ಮಲಗಿ, ತಾನೆ ಎಚ್ಚತ್ತು ತನ್ನ ತಾನೆ ನೋಡಿ ಲೀಲೆಯನಾಡಿ ನಗಿಸುವನೊಮ್ಮೆ, ಅಳಿಸುವನೊಮ್ಮೆ! ಇಂಥ ಶಿವನು ಅಳತೆಗೆ ನಿಲುಕನು, ಯಾಕಂದರೆ ಅವನು ಅವನ್ನು ಮೀರಿದವನು. ಅವನಿಗೆ ಎರಡೆಂಬುದಿಲ್ಲ, ಯಾಕಂದರೆ ಒಂದೂ ಅವನೇ ಹಲವೂ ಅವನೇ ಏನೂ ಇಲ್ಲದ ನಿರವಯಲೂ ಅವನೇ! ಇಂಥವನನ್ನು ರೂಪಿಸುವುದು ಹೇಗೆ? ಶಬ್ದಗಳಿಗೆ ಶಕ್ತಿ ಸಾಲದು; ವ್ಯಾಖ್ಯೆ ವಿವರಣೆಗಳ ಅಳವಿಗೆ ನಿಲುಕದು. ಇಂಥವನನ್ನು ರೂಪಿಸಲು ಮಾನವನ ಕೈಸೋತ ಪ್ರಯತ್ನವೆಲ್ಲ ಕೊನೆಗೆ ಪೂಜೆಯಲ್ಲಿ ಪರಿಣಮಿಸುವದು; ಶೂನ್ಯತೆಗೊಳ್ಳುವದು. ಶ್ರುತಿತತಿಯು ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನೆಂದು ಅವನನ್ನು ವರ್ಣಿಸುವುದಿಲ್ಲವೇ? ಸೃಷ್ಟಿ, ಶಕ್ತಿ, ಶರಣ ಇವುಗಳ ಅನುಭವವನ್ನು ಮೀರಿ ಆಚೆಗೆ ಅವನಿರುವದರಿಂದ ಅವನಿಗೆ ಮೂರನೆಯ ಮೆಟ್ಟಲಿನಲ್ಲಿ ಹೇಳಿದ ಚಿತ್ರದಲ್ಲಿ ಮೇಲಿನ ಸ್ಥಾನವಿದೆ. ಈ ಕೊನೆಯ ಮೆಟ್ಟಲಿನಲ್ಲಿ ಆ ಇಷ್ಟಲಿಂಗದ ಆಕಾರವು X ಇಂತಾಗುವದು. ದೇವರ ವಿಷಯವಾದ ಸರಿಯಾದ ಮತ್ತು ಸಂಪೂರ್ಣವಾದ ವಿಚಾರಕ್ಕೆ ತಕ್ಕುದಾದ ಒಂದು ಆಕಾರವಿದೆ; ಅದನ್ನು ರೂಪಿಸುವುದು ಅತ್ಯವಶ್ಯವಾದುದು ಎಂದು ಹೇಳಿದೆಯಷ್ಟೇ! ಇದೇ ಆ ಆಕಾರವು! ಸಭ್ಯರೇ, ವೀರಶೈವರಲ್ಲಿ ಲಿಂಗದ ಕಲ್ಪನೆಯು ಅದೆಷ್ಟು ಗಾಢವೂ ಗೂಢವೂ, ಗಹನವೂ ಗಂಭೀರವೂ, ಶುದ್ಧವೂ ಸಂಪೂರ್ಣವೂ ಆಗಿದೆ ಎಂಬುದನ್ನು ಆಲೋಚಿಸಿರಿ. ಇಂಥ ಒಂದು ಸುಸಂಬದ್ಧವಾದ ಸಂಪೂರ್ಣವಾದ ಸತ್ಯದ ಸ್ವರೂಪವನ್ನು ತಿಳಿಸುವುದರ ಕಡೆಗೆ ವೀರಶೈವವು ಸಾಗಿದೆ ಎಂಬುದು ಸ್ಪಷ್ಟವಾದುದು. ವೀರಶೈವವು ಎತ್ತ ಸಾಗಿದೆ ಎಂಬ ಮಾತಿಗೆ ಉತ್ತರವಿದು.

(೩-೩-೧೯೪೭)

# ಲಿಂಗವಂತ ಧರ್ಮಸಾರಸರ್ವಸ್ವ.

ಅನುವಾದಕರು:—ಶ್ರೀ ವೀ. ರು. ಕೊಪ್ಪಳ ಎಂ. ಎ., ಬಿ. ಟಿ. ಧಾರವಾಡ.

( ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರ ಸ್ವಾಮಿಗಳು ಇಂಗ್ಲಿಷಿನಲ್ಲಿ ಬರೆದ ಒಂದು ವಿಮರ್ಶಾತ್ಮಕ ಲೇಖದ ಅನುವಾದವು. )

ಧರ್ಮಕ್ಕೆ ಅಂತರ್ಬಾಹ್ಯ ಸ್ವರೂಪಗಳೆರಡುಂಟು. ಅವುಗಳಲ್ಲಿ ಗಹನವಾದ ಮತ್ತು ಗೂಢವಾದ ಆಂತರಿಕ ಸ್ವರೂಪವು ಜೀವನದ ವೈಶಿಷ್ಟ್ಯವನ್ನು ವಿವರಿಸುತ್ತದೆ. ಗುಹ್ಯವಾದ ಈ ಆಂತರಿಕ ಸ್ವರೂಪವನ್ನು ಸೂಚಿಸುವ ಲಿಂಗವಂತ ಧರ್ಮದ ತಿರುಳು ದೇವ-ಜೀವರ ಅವಿರಳವಾದ ಅವಿನಾಭಾವ ಸಂಬಂಧವನ್ನು ತೋರಿಸುವ ಲಿಂಗಾಂಗ ಸಾಮರಸ್ಯದಲ್ಲಿ ಸೇರುವೆಗೊಂಡಿದೆ. ಮತ್ತು ಷಟ್‌ಸ್ಥಲ ಶಾಸ್ತ್ರವು ಈ ಲಿಂಗಾಂಗ ಸಾಮರಸ್ಯವನ್ನು ತಿಳಿಯಪಡಿಸುವ ವಿಶಿಷ್ಟವಾದ ಒಂದು ಸಾಧನ ಕ್ರಮವಾಗಿದೆ.

ಇಂದು ನಮಗೆ ತಿಳಿದು ಬಂದಿರುವ ಮಟ್ಟಿಗೆ ಮಾನವ ಜನಾಂಗದ ಐತಿಹ್ಯದ ಇಲ್ಲವೆ ಅದರ ವಿಕಾಸದ ಮೊದಲನೆಯ ಮೆಟ್ಟಲಿನಲ್ಲಿ ಭೌತ ಶರೀರದ ಕ್ರಮವಾದ ಬೆಳವಣಿಗೆಯು ಹೇಗೆ ಸಾಗಿತೆಂಬುದು ಮಾತ್ರ ಗೊತ್ತಾಗುವದು. ನಿರ್ಜೀವ ಸೃಷ್ಟಿಯಿಂದ ಸಜೀವ ಕೋಟಿಯ ಉಗಮ ಮತ್ತು ಸಸ್ಯ ಹಾಗು-ಪ್ರಾಣಿವರ್ಗದಿಂದ ಮಾನವ ವರ್ಗದ ವರೆಗಿನ ಕ್ರಮವಾಗಿ ಬೆಳೆಯುತ್ತಿರುವ ತೊಡಕಾದ ದೇಹರಚನೆ ಇವು ಪ್ರಾಣಿಶಾಸ್ತ್ರದ ನಿರೂಪಣೆಗೆ ಅಡಿಗಲ್ಲಾಗಿರುತ್ತವೆ. ಆಧುನಿಕ ವಿಜ್ಞಾನವು ಭೌತಶಾಸ್ತ್ರದ ನೀತಿಯನ್ನು ಪ್ರಾಣಿಶಾಸ್ತ್ರದ ರೀತಿಯನ್ನು ಬಳಸಿಕೊಂಡಿರುವುದಷ್ಟೇ! ಪ್ರಪಂಚದಲ್ಲಿ ಪರಿಸ್ಥಿತಿಯು ಒಂದು ಒತ್ತಡವಿದೆ; ಮತ್ತು ಪ್ರಪಂಚವನ್ನು ಪಸರಿಸಿಕೊಂಡು ಪ್ರಮಾಣಕ್ಕೆ ನಿಲ್ಲದ ಒಂದು ನಿಯಮವೂ ಇದೆ ಎಂಬ ಈ ಮಾತು ಭೌತಶಾಸ್ತ್ರವೇ ಉದ್ದೇಶವಾಗಿರುವ ಮತ್ತು ಪ್ರಾಣಿಶಾಸ್ತ್ರವೇ ಕಾರ್ಯಕ್ಷೇತ್ರವಾಗಿರುವ ಆಧುನಿಕ ವಿಜ್ಞಾನಕ್ಕೆ ಹಿಂದಿನಿಂದ ನಿಲುಕಿದುದು. ವಿಕಾಸವಾದದ ಎರಡನೆಯ ಮೆಟ್ಟಲಿನಲ್ಲಿ ಹೊರಹೊಮ್ಮಿ ನಮ್ಮೆದುರಿಗೆ

ತೋರಿದುದು ಮನಸ್ಸು. ಮೊದಮೊದಲು ಈ ಮನಸ್ಸು ಭೌತಶರೀರಕ್ಕೆ ಅವಶ್ಯವೆನಿಸಿದ ನಿಕಟವಾದ ಸಂಗತಿಗಳಿಗೆ ಮಾತ್ರ ಹೊಂದಿಕೊಂಡು ಸಹಜ ಬುದ್ಧಿಯೆನಿಸಿತು. ( *Instinctive knowledge* ) ಬರಬರುತ್ತ ಅದು ತರ್ಕಬದ್ಧವಾಗಿ ತರ್ಕಶುದ್ಧವಾಗಿ ವಿಶಾಲವಾದ ಬುದ್ಧಿಯಲ್ಲಿ (*Rational mind or intellect*) ಪರಿಣಮಿಸಿತು. ಮಾನವನು ಭೌತಶರೀರದ ಬೇಡಿಕೆಗಳಿಂದ ಬುದ್ಧಿಯ ಬಯಕೆಗಳತ್ತ ತಿರುಗಿದಂತೆ ಅವನು ತತ್ವವಿವೇಚನೆಗೆ ಅಣಿಯಾಗುವನು. ಯಾಕಂದರೆ ಈ ಸ್ಥಿತಿಯಲ್ಲಿ ಘನವಾದ ಜೀವನ ಮತ್ತು ಆಳವಾದ ಅರಿವು ಇವುಗಳ ಬಗೆಯನ್ನಳೆಯುವದರಲ್ಲಿ ಅವನ ಆ ವಿಶಾಲವಾದ ಬುದ್ಧಿಗೆ ಗತಿಯಿರುವುದು. ಈ ಮೇರೆಗೆ ಬಾಹ್ಯ ಮತ್ತು ವ್ಯಕ್ತವಾದ ಸಂಗತಿಗಳ ಕಾರ್ಯಗಳಿಂದ ಆಂತರಿಕ ಮತ್ತು ವೈಯಕ್ತಿಕ ಕಾರಣಗಳನ್ನು ಕಾಣುವುದರಲ್ಲಿ ಮಾನವನ ಆ ದೃಷ್ಟಿಯು ಹೊರಳುತ್ತದೆ. ಆದರೆ ಹೀಗೆ ದೃಷ್ಟಿಕೋನವನ್ನು ಬದಲಿಸುವುದೇ ಕೊನೆಯ ಗುರಿಯೂ ಅಲ್ಲ; ಅಥವಾ ಅದು ಮಾನವ ಜೀವನದ ಹಿರಿದಪ್ಪ ಲಕ್ಷಣವೂ ಅಲ್ಲ. ಇದಕ್ಕಿಂತ ಮುಂದಿನ ಮೆಟ್ಟಲಾಗಿ ಮಾನವನಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯು ಹುಟ್ಟು ಬೆಳವಣಿಗೆಗಳು ಮೂಡುವವು. ( ಈ ದೃಷ್ಟಿಯು ನಮ್ಮನ್ನು ಬಳಸಿರುವ ಮತ್ತು ನಮ್ಮನ್ನು ತನ್ನ ಒಂದು ಅಂಗವನ್ನಾಗಿ ಆಳಿದಿರುವ ಅನಂತವಾದ ವಿಶ್ವಕ್ಕೂ ಮತ್ತು ವ್ಯಕ್ತಿಗೂ ನಡುವಿರುವ ಒಂದು ಸೂತ್ರ ಸಂಬಂಧದಿಂದ ಅಂಕುರಗೊಳ್ಳುವದು. ) ಈ ದೃಷ್ಟಿಯು ಕೇವಲ ಆದಿಭೌತಿಕ ಸಂಗತಿಗಳ ಸಮ್ಮೇಳನಕ್ಕಿಂತ ಮಿಗಿಲಾದ ಮತ್ತು ಅಗಾಧವಾದ ಒಂದು ಸಮ್ಮೇಳನದ ದರುಶನ ಸ್ಪರುಶನದಿಂದ ಕ್ರಮವಾಗಿ ರೂಪುಗೊಳ್ಳುವದು. ಈ ಆಂತರಿಕ ದೃಷ್ಟಿಗೆ ಇಲ್ಲವೆ ಜೀವನದ ಹಿರಿದಪ್ಪ ಈ ಲಕ್ಷಣಕ್ಕೆ ಧರ್ಮವೆಂದು ವ್ಯಾಪಕವಾಗಿ ಹೇಳಲಾಗುವುದು. ಇಂತಹ ಧರ್ಮದಲ್ಲಿ ನೈತಿಕ ಬಗೆ, ಕರ್ತವ್ಯದ ಕಲ್ಪನೆ, ತ್ಯಾಗವೃತ್ತಿ. ಸದ್ಗುಣಗಳ ಸಮೂಹ ಇವೆಲ್ಲಕ್ಕಿಂತಲೂ ಮೇಲಾದ ಸಮ್ಯಕ್ ಜ್ಞಾನಿಯ ಅರುಹು ಇವು ಮೊಳಕೆಯೊಡೆದು ಬೆಳಸಾಗುವವು.

ಹೀಗೆ ಒಂದು ರೀತಿಯಿಂದ ವಿಜ್ಞಾನಕ್ಕಿಂತ ತತ್ತ್ವಜ್ಞಾನವು, ತತ್ತ್ವಜ್ಞಾನಕ್ಕಿಂತ ಧರ್ಮವು ಉತ್ತರೋತ್ತರ ಉನ್ನತವೆಂದು ಹೇಳಬಹುದು. ಇವುಗಳಲ್ಲಿ ಪ್ರತಿಯೊಂದು ಇನ್ನೊಂದರಿಂದ ತುಂಬಲಾಗದ ಜೀವನದ

ಲಕ್ಷಣವನ್ನು ವ್ಯಕ್ತಗೊಳಿಸುವದು, ಮತ್ತು ನಮ್ಮ ಸ್ಥಿತಿಯಲ್ಲಿ ಆಳವಾದ ಮತ್ತು ನಮ್ಮ ಪ್ರಗತಿಯಲ್ಲಿ ನೀಳವಾದ ಒಂದು ಲಕ್ಷಣವನ್ನೂ ವಿವರಿಸುವುದು. ವಿಜ್ಞಾನದ ಪರಿಮಿತಿಯು ವಸ್ತುಸ್ಥಿತಿಗಳನ್ನು ಕಲೆಹಾಕಿ, ಲಕ್ಷಪೂರ್ವಕವಾಗಿ ಅವನ್ನು ನೋಡಿ, ಪರಿಣಾಮವನ್ನು ಬರೆದಿಟ್ಟು, ವಿಂಗಡಿಸಿ ತೋರಿಸುವುದರಲ್ಲಿದೆ. ಯಾವ ವಿಭಾಗದಲ್ಲಿಯೇ ಆಗಲಿ ವಸ್ತುಗಳಲ್ಲಿಹ ಪರಸ್ಪರ ಸಂಬಂಧ ಸೇರುವೆಗಳ ಯಥಾರ್ಥವಾದ ಮತ್ತು ಲಕ್ಷಿಸಿ ಪ್ರಯೋಗದಿಂದ ಕಂಡ ಪ್ರತ್ಯಕ್ಷ ಜ್ಞಾನವು ವಿಜ್ಞಾನವೆನಿಸುವದು. ಈ ವಿಜ್ಞಾನವು ಭೌತಸೃಷ್ಟಿಯ ಸಂಗತಿಗಳನ್ನು ನಿಯಾಮಿಸುವ ಕಟ್ಟಳೆಗಳನ್ನು ರೂಪಿಸಲು ಯತ್ನಿಸುವದು; ಆದರೆ ಇದು ನಮ್ಮ ಜೀವನ ಮತ್ತು ಅರಿವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬದಿಗಿರಿಸಿರುವದು. ವಿಜ್ಞಾನವು ಬೆಳಕಿಗೆ ತಂದ ಸಂಗತಿಗಳನ್ನು ತತ್ತ್ವಜ್ಞಾನವು ಕೈಯಲ್ಲಿ ತೆಗೆದುಕೊಂಡು ಅವನ್ನು ಹೆಚ್ಚು ವ್ಯಾಪಕವಾಗಿ ವಿವರಿಸುವದು. ಅದು ಅಂತರಂಗದ ಅರುಹಿನ ಸೃಷ್ಟಿ ಮತ್ತು ಬಹಿರಂಗದ ಕುರುಹಿನ ಸೃಷ್ಟಿ ಇವುಗಳ ಪರಸ್ಪರ ಸಂಬಂಧವನ್ನು ಹಾಗು ಜ್ಞಾತೃ ಮತ್ತು ಜ್ಞೇಯ ಇವುಗಳ ಸೊಬಗನ್ನು ಕುರಿತು ವಿವೇಚಿಸುವದು. ಆದರೆ ಧರ್ಮದ ಮಾತು ಹೀಗಲ್ಲ! ಅದು ವಿಶ್ವಗತಿಯ ಆಗುಹೋಗುಗಳ ಬಗೆಗೆ ತನಗುಂಟಾದ ಅಂತರಂಗದ ಸ್ಫುರಣೆಯಿಂದ ತನ್ನ ಇರುವಿಕೆಯನ್ನು ಮುಂದುಮಾಡಿ ಜ್ಞಾತೃ ಜ್ಞೇಯಗಳನ್ನು ಒಂದುಗೂಡಿಸುವದು. ಮಾನವನ ಘನವಾದ ಸತ್ಯಾನ್ವೇಷಣದಲ್ಲಿ ವಿಜ್ಞಾನ ಮತ್ತು ತತ್ತ್ವಜ್ಞಾನ ಇವು ಯಾವಾಗಲೂ ಸ್ಪಷ್ಟಗೊಳ್ಳುವದು ಈ ಆಳವಾದ ಮತ್ತು ಅನಿರ್ವಾಚ್ಯವಾದ ಅಂತಃಸ್ಫುರಣೆಯಿಂದಲೇ! ಧರ್ಮದ ಬಗೆಗೆ ಇರುವ ಈ ಅಂತಃಸ್ಫೂರ್ತಿಯು ಮಾನವನ ಸ್ವಭಾವದಲ್ಲಿ ಎಲ್ಲಕ್ಕೂ ಆಳವಾಗಿಹುದೆಂಬುದನ್ನು ಇಲ್ಲಿ ಅರಿತರೆ ಸಾಕು! ಹಾಗಾದರೆ ಧರ್ಮವೆಂದರೇನು ಎಂಬುದು ತಿಳಿಯಬೇಕಲ್ಲವೇ? ಜೀವಾತ್ಮನು ತಾನು ಅಚ್ಚ ಅರಿವಿನ ಇರವಿನಿಂದ ದೂರಾಗಿರುವೆನೆಂಬ ಭಾವನೆದುಂಬಿ ಆ ಇರವಿನ ಮೂಲವನ್ನು ಕಂಡು ಅದನ್ನು ಸಾಧಿಸಲು ಎಡವಿಡದೆ ಹಂಬಲಿಸಿ ಮುಂಬರಿವನು. ಅವನಲ್ಲಿ ನೈಜವಾಗಿಹ ಒಂದು ಲಕ್ಷಣವು ಆ ಹಂಬಲವನ್ನು ಹುರಿದುಂಬಿಸಿ ಕಾರ್ಯಪ್ರವೃತ್ತಿಯನ್ನುಂಟುಮಾಡುವದು. ಈ ಲಕ್ಷಣವೇ ಅವನ ಧರ್ಮವೆನಿಸುವದು. ಅಂತಃಸ್ಫೂರ್ತಿಯ ಸಮ್ಯಕ್ ಜ್ಞಾನವೆನಿಸಿದ ಇದು ಬಲವಾ

ದಷ್ಟು ಮಟ್ಟಿಗೆ ಮಾನವನಲ್ಲಿ ನೀತಿ ಕರ್ತವ್ಯ ತ್ಯಾಗ ಪ್ರೇಮ ಸಜ್ಜನಿಕೆ ಮೊದಲಾದ ಕಲ್ಯಾಣಗುಣಗಳಲ್ಲಿ ವಿಶಾಲವಾಗಿ ರೂಪಗೊಳ್ಳುವದು. ಯಾವುದಾದರೊಂದು ಕಟ್ಟಳೆಯಿಂದ ಈ ಗುಣಗಳು ಮೂಡುವದಿಲ್ಲ, ಆದರೆ ಇವು ಆತ್ಮನ ಮೂಲ ಸ್ವಭಾವದಿಂದ ಸೆಲೆಯೊಡೆದು ಅಡೆತಡೆ ಗಳಿಲ್ಲದೆ ಹೊರಸೂಸುವವು. ವ್ಯಕ್ತಿ ಮತ್ತು ಸಮಾಜಗಳ ಸುಖಮಯ ವಾದ ಜೀವನ ಕ್ರಮಕ್ಕೆ ಇವು ತಳಹದಿಯಾಗಿರುವವು. ಇವಕ್ಕೆ ಚ್ಯುತಿ ಯುಂಟಾದಾಗ ಧರ್ಮದ ಆದರ್ಶದಲ್ಲಿ ಸಡಿಲುಂಟಾಗಿ ಅದು ಮಸುಳಿಸ ತೊಡಗುವದು. ಆಗ ವ್ಯಕ್ತಿಯಿರಲಿ, ಸಮಾಜವಿರಲಿ, ರಾಷ್ಟ್ರವಿರಲಿ ಅದು ಅದು ಪತನೋನ್ಮುಖವಾಗಿದೆ ಎಂದೇ ತಿಳಿಯಬೇಕು.

ಲಿಂಗವಂತರದು ನಿಜವಾಗಿಯೂ ಒಂದು ಧರ್ಮವು. ಅದರ ತಿರು ಳನ್ನು ಲಿಂಗಾಂಗ ಸಾಮರಸ್ಯ ಮತ್ತು ಅದನ್ನು ಸಶಾಸ್ತ್ರವಾಗಿ ತಿಳಿಸುವ ಷಟ್‌ಸ್ಥಲ ಇವುಗಳಿಂದ ಅರಿಯಬೇಕೆಂದು ಹಿಂದೆಯೇ ತಿಳಿಸಿದೆ; ಪಂಚಾಚಾರ ಅಷ್ಟಾವರಣಗಳಿಂದ ಅದನ್ನು ಅರಿಯಲು ಬರುವಂತಿಲ್ಲ; ಯಾಕಂದರೆ ಇವು ಧರ್ಮದ ಐತಿಹಾಸಿಕ ಸ್ವರೂಪಗಳನ್ನು ಮಾತ್ರ ವ್ಯಕ್ತ ಗೊಳಿಸುವವು. ಇಂತಹ ಸ್ವರೂಪಗಳ ಮೂಲಕ ಧರ್ಮಬುದ್ಧಿಯು ಆತ್ಮನ ನಿಗೂಢವಾದ ಲಕ್ಷಣವು ಮತ ಪಂಥ ಛಲ ಆರಾಧನೆ ಪೂಜೆ ಪುರ ಸ್ಕಾರ ಮೊದಲಾದವುಗಳಲ್ಲಿ ರೂಪುಗೊಳ್ಳುವದು. ಪರಿಸ್ಥಿತಿಗನುಗುಣ ವಾಗಿ ತೋರ್ಪಡುವ ಈ ಸ್ವರೂಪಗಳಲ್ಲಿ ಅಪೂರ್ಣತೆಯೂ ಅಸ್ಥಿರತೆಯೂ ಇರುವದು ಸ್ವಾಭಾವಿಕವಾಗಿರುವದು. ವಿಜ್ಞಾನ ಮತ್ತು ತತ್ತ್ವಜ್ಞಾನ ಗಳು ಪರಿಪೂರ್ಣವುಳ್ಳವುಗಳು ಅವುಗಳಲ್ಲಿ ಮಾರ್ಪಾಟಾಗುವದು ಅಸಂಭವವು ಎಂದು ಹೇಳುವಷ್ಟೇ ಹುಚ್ಚುತನವು ಇವು ಪರಿಪೂ ರ್ಣವಾದವುಗಳು ಎಂದು ಹೇಳುವುದರಲ್ಲಿದೆ. ಯಾಕಂದರೆ ಬರಿಯ ಮನಶ್ಶಕ್ತಿಯಿಂದ ಹೊರಹೊಮ್ಮಿ ತೋರಿರುವ ಸಂಗತಿಗಳು ಕೇವಲ ಸಂಬಂಧಾತ್ಮಕ ಸತ್ಯ ಸಂಗತಿಗಳಾಗಿರುವವು. ಅಸತ್ಯವಾದವುಗಳೆಂದು ಅವಕ್ಕೆ ಹೇಳಲಾಗದಿದ್ದರೂ ಅಲ್ಪ ಸತ್ಯ ಇಲ್ಲವೆ ಮಹಾಸತ್ಯದಿಂದ ಕೂಡಿದ ವುಗಳೆಂದು ಹೇಳಲು ಅವಕಾಶವುಳ್ಳವುಗಳು. ಆದರೆ ಅತ್ಯಂತಿಕ ಸತ್ಯತೆ ಯಿಂದ ಬೆರೆತವುಗಳು ಮಾತ್ರ ಎಂದೂ ಆಗವು. ಈ ದೃಷ್ಟಿಯಿಂದ ಲಿಂಗಾಂಗ ಸಾಮರಸ್ಯ ಮತ್ತು ಅದರ ಶಾಸ್ತ್ರವೆನಿಸಿದ ಷಟ್‌ಸ್ಥಲ ಇವನ್ನು ಕುರಿತು ಆಲೋಚಿಸಿದರೆ ಇವೂ ಸಹ ಬರಿಯ ಮನಸ್ಸಿ

ಕಲ್ಪಿಸಿಕೊಂಡ ಸಂಗತಿಗಳೇ ! ಯಾಕಂದರೆ ಆತ್ಯಂತಿಕ ಧರ್ಮವು ರೂಪರಹಿತವಾದುದು. ಮತ ತತ್ವ ಅರ್ಚನೆ ಪೂಜನೆಗಳ ಕಟ್ಟಿಗೆ ಅದು ಒಳಪಡದು. ಮಾನವನ ಹಂಗಿಗೆ ಒಳಪಡದಿಹ ಏಕಮೇವ ಜೀವನದಲ್ಲಿ ಅದೂ ಒಂದು ಅಂಗವಾಗಿಹುದು. ಆದರೆ ಅಧಿಕಾರಯುತ ಧರ್ಮೋಪದೇಶಕರು ಬಿತ್ತರಿಸುವ ಪರಿಷ್ಕಾರವನ್ನು ಪಡೆದ ಆ ಧರ್ಮವು ತರ್ಕಬದ್ಧವಾಗಿ ತರ್ಕ ಶುದ್ಧವಾಗಿ ಮನಸ್ಸಿಗೆ ಒಪ್ಪಿಗೆಯಾಗುವ ತೆರದಲ್ಲಿ ಇರಬೇಕೆಂಬುದೇ ಈಗಿನ ಮನ್ವಂತರದ ಅತಿ ಸ್ಪಷ್ಟವಾದ ಅತಿ ಸ್ಫುಟವಾದ ಅತಿ ಆಗತ್ಯವಾದ ಅತಿ ಸತ್ಯವಾದ ಬೇಡಿಕೆಯು. ಇದರಿಂದ ಸೃಷ್ಟಿಯುಲ್ಲಿಯ ಮತ್ತು ಅನುಭವಕ್ಕೆ ವೇದ್ಯವಾಗುವ ಸಂಗತಿಗಳಿಗೆ ಅವಿರೋಧವಾದ ರೀತಿಯಲ್ಲಿ ಆ ಧರ್ಮವು ಬಿತ್ತರಿಸಲ್ಪಡಬೇಕೆಂಬುದು ಮಾತ್ರ ವ್ಯಕ್ತವಾಗುತ್ತದೆ.

ಧರ್ಮದ ಹಳೆಯ ಮತ್ತು ಹಿಂದಿನ ನಂಬುಗೆಗಳು ಇಂದು ಪುನರ್ವಿವರಣೆಗೊಳ್ಳಬೇಕು, ಇಲ್ಲವೆ ಅವು ಪುನರುಜ್ಜೀವನಗೊಳ್ಳಬೇಕು ಎಂಬುದರಿಂದ ತೀರಲಿಲ್ಲ. ಆ ಕೇಳಿಕೆಯಲ್ಲಿ ಒಂದು ವಿಶಿಷ್ಟತೆಯಿದೆ. ಸಂಪ್ರದಾಯ ಬದ್ಧವಾದ ಧರ್ಮದ ಪದ್ಧತಿಗೆ ಸಂಪೂರ್ಣವಾಗಿ ತಿಲಾಂಜಲಿಯನ್ನೀಯಬೇಕೆಂಬ ಹಂಬಲವು ಅಲ್ಲದೆ. ಧರ್ಮವೆಂಬುದಕ್ಕೆ ಸಾರ್ಥಕವಾದ ಯಾವುದೇ ಧರ್ಮವು ಇತಿಹಾಸದ ಭದ್ರವಾದ ತಳಹದಿಯ ಮೇಲೆ ನಿಂತಿರಬೇಕೆಂಬ ಮಾತನ್ನು ಈಗ ಎಲ್ಲರೂ ಒಪ್ಪುವರು; ಅದರಂತೆಯೇ ಆ ಧರ್ಮವು ಮಾನವ ವಿಚಾರದ ವಿಕಾಸವನ್ನು ಆಶ್ರಯಗೊಂಡಿರಬೇಕು, ಸಟೆಯಿರಲಿ ದಿಟವಿರಲಿ ಹಲಕೆಲವು ವಿಶಿಷ್ಟ ಸಂಗತಿಗಳ ಆಶ್ರಯದಲ್ಲಿ ಮೂಡಿ ಅದು ಬೆಳೆದಿರಕೂಡದು ಎಂಬುದೂ ಸಹ ಈಗ ಎಲ್ಲರ ಒಪ್ಪಿಗೆಗೆ ಮಾನ್ಯವಾಗಿದೆ. ವೈಯಕ್ತಿಕ ದರ್ಶನಗಳು ಕೆಲವು ವಿಶಿಷ್ಟ ಸಂಗತಿಗಳ ಆಧಾರದ ಮೇಲೆ ರಚಿತವಾಗಿರಬಹುದು. ಆದರೆ ಅವು ಬುದ್ಧಿವಿಕಾಸಕ್ಕೆ ಮತ್ತು ಶುದ್ಧ ತರ್ಕಕ್ಕೆ ಬೇಕಾಗಿರುವದಿಲ್ಲ. ಸೃಷ್ಟಿಯು ಸೊಬಗನ್ನೂ ಐತಿಹಾಸಿಕ ಸತ್ಯವನ್ನೂ ವಿಶಾಲವಾದ ಮತ್ತು ವೈಭವಶಾಲಿಯಾದ ದೃಷ್ಟಿಯಿಂದ ಕಾಣುವವರು ಅನೇಕರಿರುವರು. ವಿಶ್ವವ್ಯಾಪಕವಾದ ತತ್ತ್ವಗಳು ಎಂದೆಂದಿಗೂ ಸತ್ಯವಾಗಿರುವವೆಂಬುದನ್ನು ಅವರು ಬಲ್ಲರು; ಮತ್ತು ಬೇಕಾದಾಗ ಪ್ರಯೋಗಪೂರ್ವಕವಾಗಿ ಅವನ್ನು ಅರಿಯಬಹುದು, ಅರುಹಬಹುದು ಎಂಬುದನ್ನೂ ಅವರು ಬಲ್ಲರು. ಇಂತಹವರಿಗೆ ಆ ಉದಾತ್ತ

ತತ್ತ್ವಗಳಿಗೆ ಚ್ಯುತಿಯುನ್ನೊಡ್ಡುವ ಯಾವ ಮಾತುಗಳೂ ಒಪ್ಪಿಗೆಯಾಗವು, ಮತ್ತು ಅವರ ಬೇಡಿಕೆಯನ್ನು ಪೂರ್ತಿಗೊಳಿಸವು. ಆದುದರಿಂದ ನಮ್ಮ ಆಧ್ಯಾತ್ಮ ಜೀವನ ಮತ್ತು ಅದರ ಶಕ್ತಿ ಸಾಮರ್ಥ್ಯಗಳು ಅದರಂತೆಯೇ ಭೌತ ಸ್ವಭಾವ ಮತ್ತು ಪರಿಸ್ಥಿತಿ ಇವುಗಳ ವಿಷಯವಾಗಿ ಪ್ರತ್ಯಕ್ಷ ಜ್ಞಾನಕ್ಕೋಸುಗ ಈಗ ಮಾನವನ ಹಂಬಲವಿದೆ. ವ್ಯಕ್ತಿಗಳನ್ನು ಸುರಕ್ಷಿತವಾಗಿ ಸ್ವರ್ಗಕ್ಕೆ ಸೇರಿಸುವ ಸಾಧನೆಯೆಂದೆನಿಸಿದ ಧರ್ಮದ ಹಂಬಲವು ಈಗಿರುವದಿಲ್ಲ. ಆದರೆ ಅಖಿಲ ಬ್ರಹ್ಮಾಂಡದೊಡನೆ ಬೆರೆತು ಒಂದಾಗಬಯಸುವ ನಮ್ಮ ಸ್ವಭಾವದಲ್ಲಿ ಹುದುಗಿದ ಮತ್ತು ನಮ್ಮವೇ ಆಗಿರುವ ದಿವ್ಯಶಕ್ತಿಗಳನ್ನು ಇಲ್ಲಿಯೇ ಈಗಲೇ ನಮ್ಮಲ್ಲಿ ಅರಿತು ಅಳವಡಿಸಿಕೊಳ್ಳಲು ಅನುಕೂಲಿಸುವ ಧರ್ಮದ ಹಂಬಲು ಈಗಿದೆ. ಪುರುಷನು ಪರಮಾತ್ಮನೊಡನೆ, ಪರಮಾತ್ಮನು ಪ್ರಕೃತಿಯೆನಿಸಿಹ ವಿಶ್ವದೊಡನೆ ಬೆರೆತು ಒಂದಾಗುವ ಈ ಲೀಲೆಯನ್ನು ನಮ್ಮ ಪ್ರತ್ಯಕ್ಷವಾದ ಅರಿವಿನಲ್ಲಿ—ನಮ್ಮ ಜೀವನದ ಈ ಲಕ್ಷಣದಲ್ಲಿ ಅನುಭವಿಸಲು ಅನುಕೂಲತೆಯನ್ನುಂಟುಮಾಡಿಕೊಡುವ ಧರ್ಮದ ಹಂಬಲು ಈಗಿದೆ. ಈ ವಿಶಾಲವಾದ ವೈಭವಸಂಪನ್ನವಾದ ದೃಷ್ಟಿಕೋನದಿಂದ ರೂಪುಗೊಂಡು ನಿಂತಿಹ ಲಿಂಗವಂತ ಧರ್ಮವನ್ನು ಕುರಿತು ವಿವೇಚಿಸಬೇಕಾಗಿದೆ.

ಲಿಂಗವು ಲಿಂಗವಂತರಿಗೆಲ್ಲ ಒಂದು ವಿಶಿಷ್ಟವಾದ ಚಿನ್ಹವಾಗಿದೆ. ಲಿಂಗಧಾರಣಚಂದ್ರಿಕೆಯು ಈ ಲಿಂಗವನ್ನು ಅಂಗದ ಮೇಲೆ ಧರಿಸಿಕೊಳ್ಳುವದರ ಹಿರಿಮೆಯನ್ನು ವಿವೇಚಿಸಲು ರಚಿತವಾದ ಗ್ರಂಥವು. ನಂದಿಕೇಶ್ವರನು ಲಿಂಗದ ಅಂತರ್ಬಾಹ್ಯ ಸ್ವರೂಪದ ಪ್ರತಿಪಾದನೆಯಿಂದ ಅದನ್ನು ಪ್ರಾರಂಭಿಸುವನು.

೧ ಜ್ಯೋತಿರ್ಲಿಂಗಾನುಸಂಧಾನರೂಪಾಂತರ್ಲಿಂಗ ಧಾರಣ ಪ್ರತಿಪಾದನಮ್.

೨ ಇಷ್ಟಲಿಂಗ ರೂಪ ಬಾಹ್ಯಲಿಂಗಧಾರಣ ಪ್ರತಿಪಾದನಮ್.

ನಂದಿಕೇಶ್ವರನು ನಿರೂಪಿಸಿರುವ ಲಿಂಗದ ವಿವೇಚನೆಯು ವಿಶ್ವಕ್ಕೆ ( ಪ್ರಕೃತಿಗೆ ) ಸಂಬಂಧಿಸಿದ ಇಷ್ಟವೆಂದು, ವ್ಯಕ್ತಿಗೆ ( ಪುರುಷನಿಗೆ ) ಸಂಬಂಧಿಸಿದ ಪ್ರಾಣವೆಂದು ಇತ್ತೆರನಾಗಿಹುದು. ವಿಶ್ವಕ್ಕೆ ಸಂಬಂಧಿಸಿದ ಲಿಂಗದ ವಿವೇಚನೆಯಲ್ಲಿ ಶೈವರ, ವೀರಶೈವರ ಇಲ್ಲವೆ ಶಾಕ್ತರ

೩೬ ತತ್ತ್ವಗಳ ನಿರೂಪಣೆಯಿದೆಯೆಂದು ಭಾವಿಸಕೂಡದು. ಆದರೆ ಅದರಲ್ಲಿ ವಿಜ್ಞಾನ, ತತ್ತ್ವಜ್ಞಾನ ಮತ್ತು ಧರ್ಮ ಇವುಗಳಿಂದ ಪ್ರಕಟಗೊಂಡು ಪ್ರಸಿದ್ಧವಡೆದಿರುವ ಪ್ರಕೃತಿ ಪ್ರಾಣ ಮತ್ತು ಪರ (*Matter, Life and Spirit*) ಈ ಮೂವರ ನೆಲೆಯಿಂದ ನಾಮರೂಪಾತ್ಮಕ ಈ ವಿಶ್ವದ ನಿಲವನ್ನಳೆಯುವ ಸವಿ ಸೊಬಗಿನ ನಿರೂಪಣೆಯಿದೆ. ಪ್ರಕೃತಿ ಎನ್ನುವಲ್ಲಿ ರೂಪವುಂಟು; ಪ್ರಾಣವನ್ನು ವಿವರಿಸದ ರೂಪವಿಲ್ಲ. ಪರಬ್ರಹ್ಮ ಎನ್ನುವಲ್ಲಿ, ಪ್ರಾಣವುಂಟು; ರೂಪದಿಂದ ಪರಿಮಿತವಾಗದಿಹ ಪ್ರಾಣವಿಲ್ಲ; ಆದುದರಿಂದ ರೂಪುಗೊಂಡು ಈ ತೋರಿಕೆಯಲ್ಲಿ ಕಾಂಬ ವಿಶ್ವಕ್ಕೆ ಕುರುವು ಎಂದು ಕರೆಯಲಾಗಿದೆ. ವಿಶ್ವದ ರೂಪವು ಪ್ರಾಣದಿಂದ ಬೆರೆತು ಪರಬ್ರಹ್ಮನಿಂದ ವ್ಯಾಪಿಸಲ್ಪಟ್ಟಿದೆ.

ಪರಬ್ರಹ್ಮವು ವಿಶ್ವದ ಅನಂತವಾದ ಅನಿರ್ವಾಚ್ಯವಾದ ಆತ್ಮವಾಗಿಹುದು. ಪರಬ್ರಹ್ಮನ ಸತ್ ಸ್ವರೂಪವನ್ನು ವ್ಯಕ್ತಗೊಳಿಸುವ ಈ ಆತ್ಮನಿಗೆ ಇರುಹು ಎಂದು ಹೆಸರು; ಗುಣವಿಶಿಷ್ಟವಿದು, ಪರಿಮಿತಿಯು ಇದಕ್ಕುಂಟು. ಇಲ್ಲವೆ ರೂಪಗಳ ರಾಶಿಯು ಇದರಲ್ಲುಂಟು. ಆ ರೂಪಗಳಿಗೆ ಆಧಾರವನ್ನಾದರೂ ಇದರಲ್ಲಿ ಅರಿಯಬಹುದು ಎಂದು ಆತ್ಮನ ಬಗೆಗೆ ಹೇಳಲೂ ಬರುವಂತಿಲ್ಲ. ಗುಣ ರಾಶಿ ರೂಪಗಳು ನಾಶವಾದರೂ ಇದರ ಅಸ್ತಿತ್ವಕ್ಕೆ ಚ್ಯುತಿಯಿಲ್ಲ. ಗುಣ ರಾಶಿ ರೂಪರಹಿತವಾದ ಅಸ್ತಿತ್ವವು ಸಾಧ್ಯವಿದೆ ಎಂಬುದು ಮಾತ್ರವಲ್ಲ, ಇಂದ್ರಿಯಗೋಚರವಾಗಿರುವ ಈ ತೋರಿಕೆಗಳ ಮರೆಯಲ್ಲಿ ಇಂತಹದೊಂದು ಅಸ್ತಿತ್ವವು ಅಡಗಿಹುದು ಎಂಬುದು ಸಹ ಬುದ್ಧಿಗ್ರಾಹ್ಯವಿಷಯವಾಗಿದೆ. ಇಂತಹದೊಂದು ಅಸ್ತಿತ್ವವು ಗುಣ ರಾಶಿ ರೂಪರಹಿತವಾಗಿದೆ ಎಂಬ ಮಾತಿನಲ್ಲಿ ಅದು ಅವುಗಳನ್ನು ಮೀರಿ ಆಚೆಗಿಹುದು; ಆ ಅವಸ್ಥೆಯಲ್ಲಿ ತೋರಿಕೆಯಲ್ಲಿ ಪ್ರತ್ಯಕ್ಷವಾಗಿ ಕಾಣಿಸುವ ಗುಣ ರೂಪ ಪರಿಮಿತಿಗಳು ವಿಂಗಡಿಸಿ ತೋರಿಸಲಿಕ್ಕೆ ಬಾರದಂತೆ ಬೆರೆತುಕೊಂಡು ಹೋಗುವವು. ಈ ತೋರಿಕೆಯಲ್ಲಿಯ ಎಲ್ಲ ಪದಾರ್ಥಗಳೂ ಎಲ್ಲ ಸ್ಥಿತಿಗತಿಗಳೂ ಯಾವ ಒಡವೆಗೋಸುಗ ತೋರಿರುವವೋ ಆ ಮೂಲ ಸ್ಥಾನದಲ್ಲಿ ಬೆರೆತು ವ್ಯವಹಾರದಲ್ಲಿ ಬಳಕೆಗೊಳ್ಳುವ ಶಬ್ದಗಳಿಂದ ಬಣ್ಣಿಸಲಸಾಧ್ಯವಪ್ಪಂತೆ ಅಜ್ಞೇಯವಾಗುವವು ಎಂಬ ಅಭಿಪ್ರಾಯವಿದೆ. ಆದುದರಿಂದ ಸತ್ ಎನಿಸಿದ ಇರುಹು ಆತ್ಯಂತಿಕವಾಗಿಹುದು ಮತ್ತು ಸಾಮಾನ್ಯ ವಿಚಾರಕ್ಕೆ ನಿಲುಕದಿಹುದು. ಪರಮಾಯೆಗಳಲ್ಲಿ

ಅದನ್ನನುಭವಿಸಬಲ್ಲೆವು. ಆದರೆ ಮನಕ್ಕೆ ಮೀರಿದ ಅದು ಮಾತಿಗೆ ನಿಲು ಕದು. ಇದು ಕಾರಣ ಶುದ್ಧವಾದ ಸದ್ ರೂಪವು ಸರ್ವವ್ಯಾಪಿಯುಹ ಪರಬ್ರಹ್ಮವೆನ್ನಬೇಕಾಗುವದು. ನಮ್ಮ ಜೀವನವು ಆತ್ಯಂತಿಕವಿರಲಿ, ಸಂಬಂಧಸೂಚಕವಿರಲಿ, ಸ್ವರ್ಗೀಯುವಿರಲಿ, ಮರ್ತ್ಯವಿರಲಿ ಅದಕ್ಕೆಲ್ಲ ಈ ಪರಬ್ರಹ್ಮವೇ ಸತ್ಯಸಾಕ್ಷಿಯಾಗಿಹುದು. ಪರಬ್ರಹ್ಮವು ಕೇವಲ ತಾನೆ ತಾನಾಗಿಹುದು. ಅನೇಕ ಪಡಿಪದಾರ್ಥಗಳ ಮೊತ್ತವೆನಿಸದಿದು. ಈ ಕೇವಲ ಸ್ಥಿತಿಗತಿಯು ಮಾತಿಗೆ ಮೀರಿಹುದು. ಮಾನವ ಬುದ್ಧಿಯಿಂದ ಅದನ್ನರಿಯುಬಯುಸಿದರೆ ನಮಗೊದಗುವ ಅನೇಕಾನೇಕ ಅನುಭವ ಊಹೆಗಳಿಂದ ಅದು ಸಾಗದೆ ಗತ್ಯಂತರವಿಲ್ಲ. ಆದರೆ ಕೊನೆಗೆ ನಮ್ಮ ಅಪಾರವಾದ ಅನುಭವವನ್ನೂ ಊಣೆಯುವಿಷ್ಟದ ಊಹೆಗಳನ್ನೂ ಅಲ್ಲ ಗಳೆದು ಪರಬ್ರಹ್ಮವು ಬರಿಯು ವ್ಯಾಖ್ಯೆ ವಿವರಣೆಗಳಿಗೆ ಮೀರಿಹುದು ಎಂದು ಖಂಡಿತವಾಗಿ ಹೇಳಬೇಕಾಗುವದು. ಇದರಿಂದ ಪರಬ್ರಹ್ಮದಿಂದ ಮಾರ್ಪಾಟಗಳು ಮೂಡಿ, ಪರಬ್ರಹ್ಮದಲ್ಲಿ ಮಾರ್ಪಾಟಗಳು ತೋರಿ, ಪರಬ್ರಹ್ಮದಲ್ಲಿ ಮಾರ್ಪಾಟಗಳು ಅಡಗುವವೆಂಬ ಕೊನೆಯು ಸಿದ್ಧಾಂತಕ್ಕೆ ನಾವು ನಿಲುಕುವೆವು. 'ನೇತಿ' ವಾದನೆಲ್ಲ ಪರಬ್ರಹ್ಮದ 'ಇತಿ' ವಾದ ವನ್ನು ಬಹು ವಿಶಾಲವಾಗಿ ವಿವರಿಸುವುದನ್ನೇ ಗುರಿಯಾಗಿಟ್ಟುಕೊಂಡಿ ರುವದು. ವಿರೋಧ ವಾದದ ತತ್ವವೆಲ್ಲ ಒಂದು ಇನ್ನೊಂದನ್ನು ಎದುರಿ ಸುವುದರಲ್ಲಿ ಮುಂದುಗೊಳ್ಳಬಹುದು. ಆದರೆ ವಿರೋಧವಾಗಿರುವ ವಿವಿಧ ಸ್ವರೂಪಗಳಲ್ಲಿಯೂ ಒಂದು ಸತ್ಯವನ್ನು ಕಾಣಲು ಮತ್ತು ಅವುಗಳಲ್ಲಿಯು ಪರಸ್ಪರ ಒಂದು ಸಮನ್ವಯುವನ್ನು ಕಾಣಲು ಆ ವಾದ ದಲ್ಲಿ ಉದ್ದೇಶವಿರುವುದು. ಅದುದರಿಂದ ಶುದ್ಧವಾದ ಸತ್ ಅಖಂಡ ವಾಗಿಹುದು. ಅದನ್ನು ಹೊರತುಪಡಿಸಿ ಯಾವುದೂ ಇರದು. ಇರುಹು ಸರ್ವಕ್ಕೆಲ್ಲ ಗತಿಮತಿಯಾಗಿಹುದು ಎಂದು ಸ್ಪಷ್ಟವಾಗುವದು.

ತತ್ತ್ವಜ್ಞಾನವು ಪ್ರಪಂಚದ ಪರದೆಯ ಮರೆಯಲ್ಲಿರುವ ಮೂಲ ಭೂತ ಸತ್ಯಾನ್ವೇಷಣವೆಂದು ಹೇಳುವರು. ಅದು ಬುದ್ಧಿಪ್ರಧಾನವಾಗಿ ಸಾಗುವದು. ಗಡುಸಾದ ಪೆಡಸಾದ ವಿಚಾರಗೂಢದಿಂದ ಸಾಗುವ ಈ ಶೋಧವು ಸದ್ ರೂಪವು ಅಖಿಲ ಪ್ರಪಂಚದ ಆತ್ಮವೆಂಬುದನ್ನು ಸಿದ್ಧಿಸುವುದರಲ್ಲಿ ಶಿಖರವೇರಿತು. ಸತ್ಯವನ್ನು ಕುರಿತು ಬುದ್ಧಿಪ್ರಧಾನವಾದ ಅನ್ವೇಷಣವೇ ತತ್ತ್ವಜ್ಞಾನವಾದರೆ, ಸತ್ಯವನ್ನು ಕುರಿತು ಬೆಳಸಿಕೊಂಡಿ

ರುವ ಶ್ರದ್ಧೆಯು ಮಾನವ ದೇಹವನ್ನು ಆಶ್ರಯಿಸಿದ ಆತ್ಮದಲ್ಲಿ ಆ ಸತ್ಯವನ್ನು ಸಾಕ್ಷಾತ್ಕಾರಗೊಳಿಸುವ ಪ್ರಯತ್ನವಾಗುವದು. ಇಷ್ಟಲಿಂಗವನ್ನು ಎಡೆಬಿಡದೆ ಅಂಗದ ಮೇಲಿರಿಸಿಕೊಳ್ಳುವದು ಲಿಂಗವಂತನ ಒಂದು ವೈಶಿಷ್ಟ್ಯವಷ್ಟೇ! ಶಿವಶರಣರು ಕಂಡಿರುವ ಲಿಂಗವು ಪರಶಿವನ ಸದ್ರೂಪವನ್ನು ನಾಮರೂಪಗಳಲ್ಲಿ ವ್ಯಕ್ತಗೊಳಿಸುವದು 'ಇಷ್ಟ' ಎಂದರೆ ಪೂಜೆ. ಆದುದರಿಂದ ಪರಶಿವನೆನಿಸಿದ ಕೇವಲ 'ಸತ್' ಮಾತ್ರ ಪೂಜೆಗೆ ಯೋಗ್ಯವಾಗಿಹುದು. ದೇಹದಲ್ಲಿ ಕ್ರಮವಾಗಿ ದೇವನ ಆವಾಸವುಂಟಾಗಬೇಕೆಂಬ ಹಿರಿಯ ಹಂಬಲ ಪೂರ್ತಿಗಾಗಿ ಅಂಗದ ಮೇಲೆ ಅಗಲಲಾರದಂತೆ ಲಿಂಗವನ್ನಿರಿಸಿಕೊಳ್ಳುವ ತತ್ವವು ಒಡಮೂಡಿತು. ಸರ್ವವ್ಯಾಪಿಯಾದ ಪರಶಿವನ ಅನುಸಂಧಾನದ ಪರಿಣಾಮವು ಮಾನವ ದೇಹದ ನರನಾಡಿಗಳಲ್ಲಿ ತುಳುಕಾಡಹತ್ತಿದರೆ ಅದುವೆ ಲಿಂಗರೂಪವಾಗುವದು, ಎಂದು ಲಿಂಗವಂತನ ಒಂದು ನಂಬುಗೆಯಾಗಿರುವದು.

ಲಿಂಗದ ಅಂತರ್ಬಾಹ್ಯ ಸ್ವರೂಪದ ಕಲ್ಪನೆಯು ವಿಶಿಷ್ಟ ರೀತಿಯಲ್ಲಿ ಗಮನಕ್ಕೆ ಪಾತ್ರವಾಗಿದೆ. ಸದ್‌ರೂಪವು ಪ್ರಪಂಚದ ಸರ್ವಸಂಗತಿಗಳ ಆತ್ಮವೆಂಬುದನ್ನೂ ಲಿಂಗದ ಕಲ್ಪನೆಯಲ್ಲಿ ಅದು ಕೇವಲ ಪರಶಿವನೆಂಬುದನ್ನೂ ಈ ಮುಂಚಿತವಾಗಿ ಅರಿತಿರುವೆವು. ಇಂತಹ ಪರಶಿವನಿಗೆ ಆಕಾರವಿರುವದಿಲ್ಲವೋ? ಉಂಟು. ಈ ವ್ಯಕ್ತ ವಿಶ್ವವು ಪರಶಿವನ ಆಕಾರ ಸೂಚಕವಾಗಿದೆ. ಆದುದರಿಂದ ಈ ವಿಶ್ವದ ಆಕಾರದಲ್ಲಿಯೇ ಲಿಂಗದ ರೂಪವಿರಬೇಕು. ಆಕಾರಕ್ಕೆ ಸೀಮೆಯುಂಟು. ಅದು ನಶ್ವರವೂ ಆಹುದು. ಮತ್ತು ತ್ರಿಮಿತಿಗೆ ( *Three dimensions* ) ಒಳಗಾಗಿಹುದು. ಆದರೆ ಲಿಂಗದ ಕಲ್ಪನೆಯು ಮಾತ್ರ ನಿಸ್ಸೀಮವಾಗಿಹುದು ನಾಶರಹಿತವಾಗಿಹುದು. ಇದಕ್ಕೋಸುಗ ಅದು ಚತುರ್ಥಮಿತಿ ( *fourth dimension* ) ಎಂದೆನಿಸಿಕೊಂಡಿಹುದು. ಆದುದರಿಂದ ಖಂಡಿತವಾದ ಕುರುಹು ಅಖಂಡವಾದ ಇರುಹಿನಲ್ಲಿ ಆಸರಗೊಳ್ಳಬೇಕಾಗುವದು. ದ್ರಾವಿಡ ಭಾಷೆಯಲ್ಲಿ 'ಆನ್' ಶಬ್ದಕ್ಕೆ 'ಆಶ್ರಯಿಸು' ಎಂಬ ಅರ್ಥವುಂಟು. 'ಆತಮ್' ಎಂಬ ಶಬ್ದವು ಖಂಡಿತವಾದ ವಿಶ್ವವನ್ನು ಸೂಚಿಸುವದು. ಸಂಸ್ಕೃತ ಭಾಷೆಯಲ್ಲಿಹ 'ಆತ್ಮನ್' ಶಬ್ದವು ದ್ರಾವಿಡ ಭಾಷೆಯಲ್ಲಿ ಸಮಾಸವಾಗಿರುವ 'ಆತಮಾನ್' ಎಂಬ ಪದದ ವಿಕೃತರೂಪವು. ಇದಕ್ಕಾಗಿ ಫಾದರ ಹಿರಾಸ್ ಅವರು "ದ್ರಾವಿಡ ಭಾಷೆಯಲ್ಲಿ ಆತಮ್‌ಆನ್ ಶಬ್ದವು ಸಮಾಸ

ಪದವಾಗಿರಬೇಕು. ಪ್ರಾಚೀನ ತಮಿಳ ಭಾಷೆಯಲ್ಲಿ 'ಅತವು' ಶಬ್ದಕ್ಕೆ 'ಗುಹೆ' ಎಂಬ ಹೆಸರಿದೆ 'ಅನ್' ಎಂಬುದಕ್ಕೆ 'ಈಶ್ವರ' ಎಂಬ ಹೆಸರು. 'ಅತವಾನ್' ಎಂದರೆ 'ಗುಹೇಶ್ವರ.' ಈ ಶಬ್ದವು ಸಂಸ್ಕೃತದಲ್ಲಿ ಸಮಾವೇಶಗೊಳ್ಳುವಾಗ ಎರಡನೆಯ ಹ್ರಸ್ವಸ್ವರವನ್ನು ಕಳೆದುಕೊಂಡು, ಆದರ ಪರಿಣಾಮವಾಗಿ ಮೊದಲನೆಯ ಹ್ರಸ್ವಸ್ವರವು ದೀರ್ಘವಾಗಿ 'ಆತ್ಮನ್' ಎಂದಾಯಿತು." ಎಂದು ಹೇಳುವರು. ಆದುದರಿಂದ ಲಿಂಗವು ಆತ್ಮವೇ ಎಂದು ವಿಸಂಗತದ ಅಂಜಿಕೆಯಿಲ್ಲದೆ ಹೇಳಬಯಸುವೆವು.

ವಿಶ್ವವು ತತ್ತಿಯ ಆಕಾರದಲ್ಲಿಹುದು. ಲಿಂಗವು ಅಂತಹ ವಿಶ್ವದ ಗುರುತು, ಎಂಬ ತಿಳವಳಿಕೆಯು ಬಹು ಪುರಾತನ ಕಾಲದಿಂದ ಬಂದಿರುವದು. ಪ್ರಾಚೀನ ಯುಗದ ಮಾನವನ ಮನಸ್ಸು ಹುಟ್ಟುಹೊಂದುಗೆಗೆ ಆಶ್ರಯವಾದ ಈ ವಿಶ್ವದೊಡನೆ ಆಣಿಯರದಿಂದ ನಕ್ಕು ನಲಿದಾಡುತ್ತಿದ್ದಿತು. ಅವನಲ್ಲಿ ಕಾರಣ ಸೃಷ್ಟಿಯ ಕೌತುಕವನ್ನರಿಯುವ ದಿವ್ಯದೃಷ್ಟಿಯು. ಹೊಳೆಗಣ್ಣು (*Astral vision*) ಅತ್ಯಂತ ಪರಿಸ್ಫುಟವಾಗಿದ್ದ ಮೂಲಕ ವಿಶ್ವದ ಗೂಢವನ್ನು ಚತುರ್ಥಮಿತಿಯನ್ನು ಸಹಜವಾಗಿಯೇ ಅರಿಯುತ್ತಿದ್ದನು. ಇದರಿಂದ ಅವನಿಗೆ ಲಿಂಗವು ಘನಕ್ಕೆ ಘನವಾಗಿಯೂ ಅಣುವಿಗೆ ಅಣುವಾಗಿಯೂ ಇದೆ ಎಂದು ಹೇಳಲು ಶಕ್ಯವಾಗುತ್ತಿತ್ತು. ಆಧುನಿಕ ಖಗೋಲ ಶಾಸ್ತ್ರಜ್ಞರು ಅಖಿಲವಾದ ವಿಶಾಲವಾದ ಈ ವಿಶ್ವವು ಒಂದು ಬಹು ದೊಡ್ಡ ಗೋಲವಾಗಿರುವದು ಮತ್ತು ಇದಕ್ಕೆ ತ್ರಿಮಿತಿಗಳಿಗೆ ನಿಲುಕುವ ಹೊರಮೈಯಿರುವದಾದರೂ 'ಅಪರಿಮಿತವಾದ ಈ ಗೋಲವು ನಿಜವಾಗಿಯೂ ಮೂರಕ್ಕಿಂತ ಹೆಚ್ಚು ಅಳತೆಗಳ ಅಳವಿಗೊಳಪಟ್ಟಿರುವದು ಎಂದು ಸ್ಪಷ್ಟವಾದ ಅಭಿಪ್ರಾಯಕ್ಕೆ ಬಂದಿರುವರು. ಅವಕಾಶವು ವಿಸ್ತೃತವಾಗುತ್ತ ನಡೆದುದರ ಪರಿಣಾಮದಿಂದ ಅಸಂಖ್ಯವಾದ ಚಿಕ್ಕಪುಟ್ಟ ನಕ್ಷತ್ರಗಳ ಪುಂಜವೆನಿಸಿದ ಆಕಾಶಗಂಗೆಯು ಕ್ರಮವಾಗಿ ಹಿಂದೆ ಹಿಂದಕ್ಕೆ ಚಲಿಸುತ್ತ ನಡೆದಿದೆ ಎಂಬುದನ್ನು ಖಗೋಲ ಶಾಸ್ತ್ರಜ್ಞರು ತಿಳಿಯಪಡಿಸುತ್ತಿರುವರು. ವಾಯುರೂಪ ಪದಾರ್ಥವು ವಿಸ್ತಾರವಾಗುವಂತೆ ಅಖಂಡವಾದ ಈ ವಿಶ್ವವು ಕೂಡ ವಿಸ್ತಾರವಾಗುತ್ತಸಾಗಿರುವದು. ಅವಕಾಶದ ಈ ವಿಸ್ತಾರವು ವಿಶ್ವಗೋಲದ ತ್ರಿಜ್ಯದ ಬೆಳವಣಿಗೆಯನ್ನವಲಂಬಿಸಿರುವದು. ಇಂಗ್ಲಂಡಿನ ಸುಪ್ರಸಿದ್ಧ ಖಗೋಲ ಶಾಸ್ತ್ರವಿಶಾರದನಾದ ಸರ್ ಆರ್ಥರ ಎಡಿಂಗಟನ್ ಅವನ ಅಭಿಪ್ರಾಯದ

ಮೇರೆಗೆ ಪ್ರತಿ ೧೩೦೦೦೦೦೦೦೦ ವರುಷಗಳಿಗೊಮ್ಮೆ ನಮ್ಮಿಂದ ತಾರಾ ಪುಂಜವಿರುವ ದೂರದ ಅಳತೆಯು ಇಮ್ಮಡಿಯಾಗುತ್ತದೆ ಮತ್ತು ಫ್ರಾನ್ಸ ದೇಶದ ಪ್ರಖ್ಯಾತ ಖಗೋಲ ಶಾಸ್ತ್ರಜ್ಞನಾದ ಮಿನೂರ ಅವನ ಅಭಿಪ್ರಾಯದಂತೆ ಆ ದೂರದ ಅಳತೆಯು ಪ್ರತಿ ೨೦೦೦೦೦೦೦೦೦ ವರುಷ ಗಳಿಗೊಮ್ಮೆ ಇಮ್ಮಡಿಯಾಗುತ್ತದೆ. ವಿಶ್ವವು ಹೀಗೆ ಅಪರಿಮಿತವಾಗಿ ದೊಡ್ಡದಾಗಿರುವದೆಂಬುದನ್ನು ಖಗೋಲಶಾಸ್ತ್ರವು ದೃಢಗೊಳಿಸಿದರೆ ಪದಾರ್ಥವಿಜ್ಞಾನಶಾಸ್ತ್ರವು ಪರಮಾಣು ಸಿದ್ಧಾಂತದ ಸಹಾಯದಿಂದ ಆ ವಿಶ್ವವು ಕಲ್ಪನೆಗೆ ನಿಲುಕದಷ್ಟು ಸಣ್ಣದಾಗಿರುವದೆಂಬುದನ್ನು ಸಿದ್ಧಗೊಳಿ ಸುತ್ತದೆ. "ಪ್ರತಿಯೊಂದು ಪರಮಾಣುವಿಗೆ ತನ್ನದೇ ಆದ ಒಂದು ಆಂತರಿಕ ರಚನೆಯುಂಟು." ಅದು ಸ್ವತಂತ್ರವಾಗಿ ಶಕೆ ಸಾಮರ್ಥ್ಯ ಇಲ್ಲವೆ ಪ್ರಕಾಶವನ್ನು ಬೀರಬಲ್ಲದು. ತನ್ನಲ್ಲಿ ಅಡಗಿಸಿಕೊಂಡ ಆ ಆಂತ ರಿಕ ರಚನೆಯ ಜಾಗ್ರತೆಯಿಂದ—ಆ ಶಕೆ ಸಾಮರ್ಥ್ಯ ಪ್ರಕಾಶಗಳ ಉಗ್ರತೆಯಿಂದ ಅದೊಂದು ಶಕ್ತಿಯ ಕೇಂದ್ರವಾಗಿರುವದು; ವಿದ್ಯುದ್ ವೈಚಿತ್ರ್ಯದ ಪ್ರಗತಿಪರ ರಂಗವಾಗಿರುವದು; ಚೈತನ್ಯದ ಗರ್ಭವೂ ಆಗಿ ರುವದು. ಲಾರ್ಡ್ ಕೆಲ್‌ವಿನ್‌ನು ತಿಳಿಸುವಂತೆ ಪ್ರತಿಯೊಂದು ಪರಮಾಣು ಸುಳಿಯ ಗತಿಯಲ್ಲಿ ತಿರುಗುವ ಬಳೆಯಾಗಿರುವದು; ವೇಗ ಶಕ್ತಿಯ ಕೇಂದ್ರವಾಗಿರುವದು. ಮತ್ತು ಅದರ ಒಂದು ಅಂಶವೂ ಕೂಡ ಸ್ಪರ್ಶ ಮಾತ್ರದಿಂದ ನಮಗೆ ತಿಳಿಯುವ ಒಡವೆಯಾಗಿರುವದಿಲ್ಲ. ಪದಾರ್ಥದ ಸೂಕ್ಷ್ಮತಮವಾದ ಈ ಕೊನೆಯ ಪರಮಾಣುವಿನಲ್ಲಿ ಸೂರ್ಯನ ಸುತ್ತಲೂ ಗ್ರಹಗಳಿರುವಂತೆ ಪ್ರೋಟಾನ್ ಇಲ್ಲವೆ ಶಕ್ತಿಯ ಧನ ವಿದ್ಯುತ್ ಪಿಂಡ ವೊಂದಿದ್ದು ಅದರ ಸುತ್ತಲೂ ಇಲೆಕ್ಟ್ರಾನ್ ಇಲ್ಲವೆ ಋಣ ವಿದ್ಯುತ್ ಪಿಂಡಗಳ ಮೊತ್ತವಿದೆ. ಪ್ರೋಟಾನದ ಸುತ್ತಲು ತಿರುಗುವ ಇಲೆಕ್ಟ್ರಾನು ಗಳ ಸಂಖ್ಯೆಗೆ ಅನುಗುಣವಾಗಿ ಮೂಲಭೂತಪದಾರ್ಥಗಳಲ್ಲಿ ವಿಂಗಡಿಕೆ ಯಿದ್ದು ಅವು ಒಂದಕ್ಕೊಂದು ಭಿನ್ನವಾಗಿರುವವು. ಮತ್ತು ಸೂರ್ಯನ ಸುತ್ತಲು ಗ್ರಹಗಳು ತಿರುಗುತ್ತಿರುವಂತೆ ವಿದ್ಯುತ್ತಿನ ಕೇಂದ್ರ ಶಕ್ತಿಯಾ ಗಿರುವ ಪ್ರೋಟಾನದ ಸುತ್ತಲೂ ಇಲೆಕ್ಟ್ರಾನುಗಳು ತಿರುಗುತ್ತಿರುತ್ತವೆ. ಪ್ರೊಫೆಸರ ಸೂಡಿ ಅವನು ಹೇಳುವಂತೆ ಪರಮಾಣುವಿನಲ್ಲಿ ಒಂದು ಪರಿಪೂರ್ಣವಾದ ಸೌರಮಾಲೆಯನ್ನೇ ಕಾಣಬಹುದು. ವಿಶ್ವದ ವಿಷಯವಾಗಿ ಖಗೋಲ ಶಾಸ್ತ್ರಜ್ಞರೂ ಪದಾರ್ಥವಿಜ್ಞಾನಿಗಳೂ ಮುಂದು ಮಾಡುವ ಸಿದ್ಧಾಂತಗಳನ್ನು ಲಕ್ಷಿಸಿದರೆ ಲಿಂಗವು 'ಅಣೋರಣೀಯಾನ್ ಮಹತೋ

ಮಹೀಯಾನ್' ಎಂದು ವರ್ಣಿತವಾಗಿರುವ ಸಂಗತಿಯು ತುಂಬ ನ್ಯಾಯವಾದುದೆಂದು ಅರಿಯುಬಹುದು.

ಬಸವಣ್ಣನು ಹಾಡಿರುವ

'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ. ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ, ಅಗಮ್ಯ, ಅಪ್ರಮಾಣ, ಅಗೋಚರ ಲಿಂಗವೆ, ಕೂಡಲಸಂಗಮದೇವ, ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ.'

ಎಂಬ ವಚನವೂ ಇದೇ ತಂತಿಯನ್ನು ಮಿಡಿಯುತ್ತಿರುವದಿಲ್ಲವೇ? "ಮನೋಮಯವಾದ ಈ ಆತ್ಮನು ಹೃದಯಾಂತರಾಲದಲ್ಲಿ ಪ್ರಕಾಶರೂಪವಾಗಿರುವದು. ಅಕ್ಕಿಯ ಕಾಳಿನಂತೆ ಇಲ್ಲವೆ ಜವೆಗೋದಿಯ ಕಾಳಿನಂತೆ ಅದು ಸಣ್ಣದಾಗಿರುವದು. ಎಲ್ಲವನ್ನು ಆಳುವವನೂ ಎಲ್ಲದರ ಒಡೆಯನೂ ಅವನಾಗಿರುವನು. ಪ್ರಪಂಚದಲ್ಲಿ ಯಾವುದೇ ಕಾಣುತ್ತಿರಲಿ ಅದಕ್ಕೆಲ್ಲ ಅವನೇ ನಿಯಾಮಕನಾಗಿರುವನು" ಬಾಯಬಲ್ಲಿನಲ್ಲಿ ದೇವರಾಜ್ಯದ ವಿವರಣೆಯನ್ನು ಕುರಿತು ಚಿಕ್ಕ ಕತೆಗಳ ಅನೇಕ ದೃಷ್ಟಾಂತಗಳಿರುತ್ತವೆ. ಈ ರಾಜ್ಯವು ಭಕ್ತಿಭಾವಿಕರ ಆನಂದ ಸಾಮ್ರಾಜ್ಯವು ಮಾತ್ರವಲ್ಲ. ಅದು ಮಾನವನಲ್ಲಿ ಅಡಕಗೊಂಡ ದಿವ್ಯವಾದ ಆತ್ಮವೂ ಆಗಿರುವದು. ಈ ದೇವರಾಜ್ಯವು ದೊಡ್ಡದರಲ್ಲಿ ದೊಡ್ಡದೂ ಸಣ್ಣದರಲ್ಲಿ ಸಣ್ಣದೂ ಆಗಿರುವದು. ಕ್ರೈಸ್ತನು ಈ ವಿಷಯವಾಗಿ ಕೊಟ್ಟಿರುವ ಚಿತ್ರವಿದು. "ದೇವರಾಜ್ಯವು ಆಲದ ಬೀಜದಂತಿಹುದು. ಬೀಜಗಳಲ್ಲಿ ಚಿಕ್ಕದಾದ ಇದನ್ನು ತೆಗೆದುಕೊಂಡು ಮಾನವನು ಭೂಮಿಯಲ್ಲಿ ಬಿತ್ತುತ್ತಾನೆ; ಅದು ಸಸಿಯಾಗಿ ಬೆಳೆದು ಮರವಾಗುತ್ತದೆ. ಆಗ ಆಗಸದಲ್ಲಿ ಈಸಾಡುವ ಹಕ್ಕಿಗಳು ಅದರ ರೆಂಬೆಗಳಿಗೆರಗಿ ಆಸರವನ್ನು ಹೊಂದುತ್ತವೆ."

ಶಕ್ತಿಯ ಆಕೃತಿಯಲ್ಲಿರುವ ವಿಶ್ವದ ಹೋಲಿಕೆಯಲ್ಲಿ ಲಿಂಗದ ಕಲ್ಪನೆಯಿದೆ ಎಂಬುದನ್ನು ಇನ್ನೊಂದು ಸಂಗತಿಯಿಂದಲರಿತು ಆನಂದಗೊಳ್ಳಬಹುದಾಗಿದೆ. ಪ್ರಾಚೀನ ಯುಗದ ನಮ್ಮ ಹಿರಿಯರಿಗೆ ಈ ನಮ್ಮ ಜಗತ್ತು ಶಕ್ತಿಯ ಆಕಾರದಲ್ಲಿಯೇ ತೋರಿತು. ಬುದ್ಧಿಶಾಲಿನಿಯಾದ ಶ್ರೀಮತಿ ಎಚ್. ಪಿ. ಬ್ಲಾವಟಸ್ಕಿ ಅವಳು ಬರೆದಿರುವ

ಸಿಕ್ರೆಟ್ ಡಾಕ್ಟ್ರಿನ್ ಎಂಬ ಉದ್ಗ್ರಂಥದಲ್ಲಿ ನಾವು ಈ ಮಾತುಗಳನ್ನು ಕಾಣುತ್ತೇವೆ.

ಕಾಲ ನಿರ್ಮಾಣಕದೇವನಾದ ಸೆಬ್ (*Sel*) ಎಂಬಾತನು ವಿಶ್ವವೆಂಬ ತತ್ತಿಯನ್ನಿಟ್ಟನು. ಬೂವನ್ ಎಂದು ಕರೆಯಿಸಿಕೊಳ್ಳುವ ಅಂತರಾಳದ ನೀರಿನಲ್ಲಿ ಅಂದರೆ ಪಕ್ವವಾಗಿಹ ನಿರ್ಗುಣ ತತ್ವದಲ್ಲಿ (*faminine abstract principle*) ಇಹಲೋಕವೆಂಬ ತತ್ತಿಯು ಇರಿಸಲ್ಪಟ್ಟಿತು. ನಿರ್ಘೋಷದ (*Rebellion*) ಬಳಗಕ್ಕೂ ಶೂ (*Shoo*) ಎಂಬವನಿಗೂ, ಸೂರ್ಯಶಕ್ತಿಗೂ ಕಾರ್ಗತ್ತಲೆಯ ಕರಾಳನಿಗೂ ನಡೆದ ಸಂಗರದ ಕಾಲಕ್ಕೆ ಬಲಶಾಲಿಯಾದ 'ರಾ' (*Ra*) ಈತನು ತಾನಿರಿಸಿದ ತತ್ತಿಯಲ್ಲಿ ಉಳಿಯುವವನು, ಎಂದು ಇಜಿಪ್ತ ದೇಶದಲ್ಲಿ ರೂಢವಾಗಿಹ ಸಂಸ್ಕಾರ ಶಾಸ್ತ್ರವು ಉಲ್ಲೇಖಿಸುತ್ತದೆ.

ಆರ್ಫಿಯುಸ್ (*Orpheus*) ಮತ್ತು ಡಾಯೊನಿಸಸ್ (*Dionysus*) ಅವರ ಒಗಟುಗಳಲ್ಲಿ ತತ್ತಿಯ ವಿಚಾರವುಂಟು. ಪೊರ್ಫಿರಿ (*Porphyry*) ಅವನು ಸಹ ತತ್ತಿಯು ಜಗತ್ತಿನ ಕುರುಹು ಎಂದು ತಿಳಿಸುತ್ತಾನೆ. ಆರ್ಫಿಯುಸನ ಮಂತ್ರಗಳಲ್ಲಿ ಈರೊಸ್ ಫೇನ್ಸ (*Eros Phanes*) ಅವನು ಒಂದು ದಿವ್ಯ ಅಂಡದಿಂದ ಉಗಮಗೊಳ್ಳುತ್ತಾನೆ. ಆಯ್‌ಶಿಸ್ (*Isis*) ದೇವತೆಯು ಒಂದು ಕೈಯಲ್ಲಿ ಕಮಲವನ್ನೂ ಇನ್ನೊಂದರಲ್ಲಿ ವರ್ತುಲ ಮತ್ತು ಶಿಲುಬೆ ಇವನ್ನೂ ಹಿಡಿದಿರುವಂತೆ ಚಿತ್ರಿಸಲ್ಪಟ್ಟಿದೆ. ಈ ಆಯ್‌ಶಿಸ್ ದೇವತೆಗೆ ದಿವ್ಯವಾದ ಆ ಅಂಡವು ಪವಿತ್ರವೆನಿಸಿಹುದು.

ಟಿಮೀಯುಸ್ (*Timaeus*) ಗ್ರಂಥದಲ್ಲಿ ಪ್ಲೇಟೊ (*Plato*) ತತ್ವಜ್ಞಾನಿಯು ವಿಶ್ವವು ಗೋಲವಾಗಿದೆ ಎಂದು ಬರೆದಿರುತ್ತಾನೆ. ಈ ಜಗತ್ತಿನಲ್ಲಿ ಡಾಯೋನಿಸಸ್ ಇವನು ಮೊದಲು ಹುಟ್ಟಿದವನು. ಈ ದೇವನು ಇಹಲೋಕವೆಂಬ ತತ್ತಿಯಿಂದ ಹೊರಹೊಮ್ಮಿದನು ಎಂದು ಕೆಲವು ಗ್ರೀಕರು ನಂಬುತ್ತಾರೆ.

ಸ್ಕ್ಯಾಂಡಿನೇವಿಯದವರ ಜಗದುತ್ಪತ್ತಿ ಶಾಸ್ತ್ರದಲ್ಲಿ ವಿಶ್ವವು ಜಿನ್ನುಂಗಗಪ್ (*Ginnungagap*) ಎಂದರೆ ಮೋಹ ಬಟ್ಟಲಲ್ಲಿ, ಮಾಯೆಯಲ್ಲಿ, ಸೀಮಾತೀತವಾದ ಬಯಲಿನ ಆಳದಲ್ಲಿ ಅಡಗಿತ್ತು. ಆ ವಿಶ್ವದ ಮಾಯಿಕ ಬೀಜದಿಂದ ಇಹಲೋಕವೆಂಬ ತತ್ತಿಯು ತಲೆದೋರಿತು ಎಂದು ಹೇಳಲಾಗಿದೆ.

ಮನುಸ್ಮೃತಿಯೂ ಸಹ ಈ ಬ್ರಹ್ಮಾಂಡದ ಬಗೆಗೆ ವರ್ಣನೆಯನ್ನು ಮಾಡುತ್ತಿದೆ. ಸ್ವಯಂಭುವು ತನ್ನಿಂದ ಅನೇಕ ಜೀವರಾಶಿಗಳನ್ನು ನಿರ್ಮಿಸ ಬಯಸಿ ಮೊದಲು ನೀರನ್ನು ರಚಿಸಿದನು. ಅದರಲ್ಲಿ ಬೀಜ ವೊಂದನ್ನಿರಿಸಿದನು. ಈ ಬೀಜದಿಂದ ಬಂಗಾರದಂತೆ ಹೊಳೆವ ತತ್ತಿ ಯೊಂದು ರೂಪುಗೊಂಡಿತು. ಈ ತತ್ತಿಯಿಂದಲೇ ಜೀವರಾಶಿಗೆಲ್ಲ ಜನಕ ನಾದ ಪರಮನು ಬ್ರಹ್ಮನ ರೂಪದಿಂದ ಕಾಣಿಸಿಕೊಂಡನು.

ಪಕ್ಷಿಗಳು ತತ್ತಿಗಳನ್ನಿಡುತ್ತಿರುವ ಕಾರಣದಿಂದ ಧರ್ಮ ಮತ್ತು ಸಾಂಕೇತಿಕ ಶಾಸ್ತ್ರದಲ್ಲಿ ಅವುಗಳಿಗೆ ಮಹತ್ವವನ್ನೀಯಲಾಗಿದೆ. ಭಾರತ ದೇಶದಲ್ಲಿ ಕಾಲಹಂಸ ಮತ್ತು ಇಜಿಪ್ತದೇಶದಲ್ಲಿ ಇಬಿಸ್ (*Ibis*) ಇವು ಇದಕ್ಕೆ ನಿದರ್ಶನವಾಗಿವೆ. ಕ್ರಿಸ್ತ ಜನಾಂಗದಲ್ಲಿ ಇಂದಿಗೂ ಸಹ ಪಾರಿ ವಾಳದಂತಹ ಪವಿತ್ರ ಪಕ್ಷಿಗಳು ಪವಿತ್ರಾತ್ಮನ ಗುರುತುಗಳಾಗಿವೆ.

ಇವೆಲ್ಲ ಸಂಗತಿಗಳನ್ನು ಕುರಿತು ಶ್ರೀಮತಿ ಬ್ಲಾವಟಸ್ಕಿಯು ಹೀಗೆ ಸಮಾರೋಪಗೊಳಿಸಿರುವಳು. "ತತ್ತಿಯ ಉಪಮೆಯು ಯೋಗಶಾಸ್ತ್ರವು ಕಲಿಸುವ ಸಂಗತಿಯನ್ನು ವಿವರಗೊಳಿಸುತ್ತದೆ. ಪರಮಾಣುವಿನಿಂದ ವಿಶ್ವದ ವರೆಗೆ ಮಾನವನಿಂದ ದೇವನ ವರೆಗೆ ತೋರಿದ ವಸ್ತುವಿನ ಮೂಲರೂಪವು ಗೋಲವಾಗಿರುತ್ತದೆ. ಎಲ್ಲ ಜನಾಂಗದವರಿಗೂ ಗೋಲವು ಅನಾದ್ಯನಂತದ ಕುರುಹಾಗಿರುತ್ತದೆ.

ಎಲ್ಲ ಜನಾಂಗಗಳಿಗೂ ಸಮ್ಮತವಾಗಿರುವ ಮತ್ತು ಅನಾದ್ಯನಂತದ ಕುರುಹಾಗಿರುವ ಗೋಲದ ಚಿನ್ಹದಲ್ಲಿ ಲಿಂಗದ ಉಗಮವಿರುವದೆಂಬುದು ಈ ಐತಿಹಾಸಿಕ ವಿವೇಚನೆಯಲ್ಲಿ ತಿಳಿದುಬಂತು. ಪಕ್ಷಪಾತವಿಲ್ಲದ ಉದಾ ರರಾದ ವಿಶಾಲ್ಲನಾದ ಈ ದೃಷ್ಟಿಯಿಂದ ನೋಡಿದರೆ ತಿಮೂರದಿಂದ ಇಲ್ಲವೆ ಭೂಮಧ್ಯಸಮುದ್ರದಿಂದ, ತಿಬೇಟದಿಂದ ಇಲ್ಲವೆ ತಮಿಳನಾಡಿ ನಿಂದ, ಏಸಿಯಾದಿಂದ ಇಲ್ಲವೆ ಅಟಲಾಂಟಿಕದಿಂದ, ಆರ್‍ಯರಿಂದ ಇಲ್ಲವೆ ದ್ರವಿಡರಿಂದ ಲಿಂಗದ ಕಲ್ಪನೆಯು ಉಗಮಹೊಂದಿರಬೇಕೆಂದು ಪಂಡಿ ತರು ತಿಳಿಸುತ್ತಿರುವ ಪ್ರಯತ್ನವು ಕೇವಲ ಬುದ್ಧಿವಾದದ ಫಲವೆನ್ನ ಬೇಕು. ಈ ಪ್ರಯತ್ನವು ಕಂಗಳರು ಕರಿಯನ್ನು ಕಂಡಂತಾಗಿರುವದು.

(ಇದು ಇಷ್ಟಲಿಂಗದ ವಿವೇಚನೆಯು. ಜ್ಯೋತಿರ್ಲಿಂಗದ ವಿವೇಚ ನೆಯು ಮುಂಬರಲಿರುವದು)

---

ಈ ಮೇರೆಗೆ ಕ್ರಮಬದ್ಧವಾದ ವಿಶ್ವದ ದೃಷ್ಟಿಯಿಂದ ಇಷ್ಟಲಿಂಗದ ಸತ್ಯಸ್ವರೂಪವನ್ನರಿತು ಈಗ ವ್ಯಕ್ತಿಗತ ಪ್ರಾಣದ ದೃಷ್ಟಿಯಿಂದ ಜ್ಯೋತಿರ್ಲಿಂಗದ ನಿತ್ಯನಿಲವನ್ನಳಿಯಲು ಸಾಗುವಾ. ಮಾನವನು ಅರುಹಿನಿಂದ ಕೂಡಿದವನು; ಅದುದರಿಂದ ಪ್ರಾಣವ್ಯವಹಾರದ ನಿಜವಾದ ವಿವೇಚನೆಯು ಅವನ ಇರವಿನಲ್ಲಿಯೇ ಸುರುವಾಗುವದು. ಅದರೆ ಮಾನವನ ಸ್ವಭಾವಧರ್ಮವನ್ನರಿಯಲು ಬಯಸುವವರು ಮೊದಲು ಅವನ ಅರುಹಿನ ಬಗೆಯನ್ನರಿತುಕೊಳ್ಳುವದು ಅತ್ಯವಶ್ಯವು. ಯಾಕಂದರೆ ಆ ಅರುಹಿನ ಸತ್ಯತೆಯು ಮಾನವ ಜೀವನಕ್ಕೆ ಒರೆಗಲ್ಲಾಗಿರುವದು. ಇಂದ್ರಿಯಗಳ ಬಳಕೆಯಿಂದುಂಟಾಗುವ ತಿಳಿವಳಿಕೆಯ ಕ್ರಮವು ಪ್ರಾಣಿಮಾತ್ರಕ್ಕೆಲ್ಲ ಸಾಮಾನ್ಯವಾಗಿರುವದು. ಮಾನವನಿಗೆ ಈ ಇಂದ್ರಿಯಗಳ ಬಳಕೆಯಿಂದುಟಾಗುವ ತಿಳಿವಳಿಕೆಯ ಜೊತೆಗೆ ತನ್ನಲ್ಲಿ ಉಂಟಾಗುವ ಮಾನ್ಪಟದ ಅರಿವು ಇರುವದು. ಇನ್ನುಳಿದ ಪ್ರಾಣಿಗಳಿಗೆ ಇಂತಹ ಅರಿವು ಇರುವದಿಲ್ಲ. ಆದುದರಿಂದ ಮಾನವನ ಅರಿವು ನಿಜವಾಗಿ ಅವನ ನಿಚ್ಚಎಚ್ಚರಿಕೆಯ ವಿಷಯವಾಗಿರುವದು. ಮಾನವನ ಅನುಭಾವವೆಲ್ಲ ದೇಹದ ಇಲ್ಲವೆ ಪ್ರಾಣದ ಸಂಗತಿಗಳಿಗೆ—ಘಟನೆಗಳಿಗೆ ಸಂಬಂಧಿಸಿರುವದು ಮಾತ್ರವಲ್ಲ, ಅದು ಇಂತಹ ಸಂಗತಿಗಳ ಅಥವಾ ಇಂತಹ ಘಟನೆಗಳ ಅರಿಕೆಯ ವಿಷಯವೂ ಆಗಿರುವದು. ಆದುದರಿಂದ ನಾವು ಅನುಭವಿಸಿಕೊಳ್ಳುವದು ಬರಿಯ ವಸ್ತು ಸ್ಥಿತಿಯನ್ನಷ್ಟೇ ಅಲ್ಲ, ಅರಿತ ವಸ್ತುಸ್ಥಿತಿಯ ಇರವನ್ನೂ ಅನುಭವಿಸಬೇಕಾಗುವದು. ಹಾಗೆ ಅರಿತ ವಸ್ತುಸ್ಥಿತಿಯಿಂದ ಜ್ಞಾತೃ ಜ್ಞೇಯ ಸಂಬಂಧವಾದ ಸ್ವಾನುಭಾವದಲ್ಲಿ ತೋರುವ ತರಗತಿಗಳಲ್ಲಿ ಸಮನ್ವಯ ತತ್ವವೊಂದಿರುವದೆಂಬುದು ಧ್ವನಿತವಾಗುತ್ತದೆ. ಕಾಶ್ಮೀರ ಶೈವದ ಪ್ರತ್ಯಭಿಜ್ಞಾ ದರ್ಶನವು ಈ ಮಾತನ್ನು ಅತಿ ಸ್ಪಷ್ಟವಾಗಿ ಸಿದ್ಧಗೊಳಿಸುತ್ತದೆ. ವಿಕಾಸವಾದದ ಕಲ್ಪನೆಯಲ್ಲಿ ನಿಗೂಹನ ಶಕ್ತಿಯ ಬಗೆಯು ಅಡಗಿರುವಂತೆ ಜ್ಞಾನದಲ್ಲಿ ಪ್ರತ್ಯಭಿಜ್ಞಾನವೂ ಅಡಗಿಕೊಂಡಿದೆ. ಆದುದರಿಂದ ಮಾನವನು ವಸ್ತುವೊಂದನ್ನು ಅರಿಯುವ ಸಾಹಸದಲ್ಲಿ ತನ್ನ ನಿಜಸ್ಥಿತಿಯನ್ನೂ ಅರಿತುಕೊಳ್ಳುವನು ಎಂಬುದು ಸ್ಪಷ್ಟವಾಗುವದು. ಅಂದರೆ ಭೌತ ಸಂಗತಿಗಳಿಗೆ ಇಲ್ಲವೆ ಪ್ರಾಣವ್ಯಾಪಾರಕ್ಕೆ ಸಂಬಂಧಿಸಿರುವ ವಿಷಯವನ್ನು ಅರಿತುಕೊಳ್ಳುವ ಕಾರ್ಯದಲ್ಲಿ ಮಾನವನು ತನ್ನ ಅಂದರೆ ತನ್ನ ಆತ್ಮದ ಜ್ಞಾನವನ್ನೇ ಮಾಡಿಕೊಳ್ಳುವನು ಎಂದು ಹೇಳಬೇಕು. ಅರುಹಿನ ಜೀವಿಯಾದ ಮಾನವನ ಅಚ್ಚ ಅರು

ಹಿನ ಈ ಗೌಪ್ಯ ಕಾರಣವಾದದಿಂದ (ನ್ಯಾಯದಿಂದ) ಅವನಿಗೆ ಜ್ಞಾತಾ ಎಂದು ಹಿಂದೂ ತತ್ತ್ವಜ್ಞಾನವು ಹೆಸರಿಸುತ್ತದೆ. ಯಾಕೆಂದರೆ ಅವನು ಮನ ಇಂದ್ರಿಯ ನರನಾಡಿಗಳ ವ್ಯವಹಾರಗಳ ಜ್ಞಾನವನ್ನು, ಅಷ್ಟೇ ಏಕೆ? ಆತ್ಮನೆಂದೆನಿಸಿಕೊಂಬ ಪ್ರತ್ಯಕ್ಷ ತನ್ನ ವ್ಯವಹಾರಗಳ ಜ್ಞಾನವನ್ನೂ ಸಹ ಮಾಡಿಕೊಳ್ಳುತ್ತಾನೆ.

ನಮ್ಮ ವಿಷಯವಾಗಿ ನಮಗಿರುವ ತಿಳಿಗೆ, ನಮ್ಮ ಅನುಭಾವದ ವಿಷಯವಾಗಿ ನಮಗಿರುವ ತಿಳಿಗೆ ಮತ್ತು ನಮ್ಮ ಅಂತರಿಂದ್ರಿಯದ—ನಮ್ಮ ಆತ್ಮದ ವಿಷಯವಾಗಿ ನಮಗಿರುವ ತಿಳಿಗೆ ಸ್ಟವುಟನು ಅರಿವು ಎಂದು ಕರೆಯುತ್ತಾನೆ. ಕಣ್ಣಿಗೆ ಭೌತಪದಾರ್ಥಗಳನ್ನು ಕಾಣುವ ಶಕ್ತಿಯಿರುವಂತೆ ಈ ಅರಿವಿಗೆ ಮನ ಮತ್ತು ಅದರ ವ್ಯವಹಾರವನ್ನು ಕಾಣುವ ಶಕ್ತಿಯಿರುತ್ತದೆ. ಆದರೆ ಫಾದರ ಮಾಹೆರನು ಮನದ ವ್ಯವಹಾರವನ್ನು ಇಲ್ಲವೆ ಆ ಮನದ ವ್ಯವಹಾರನಿರುವ ಆ ಮನಕ್ಕಿಂತ ಭಿನ್ನವಾದ ಬೇರೊಂದು ಒಡವೆಯನ್ನು ಕುರಿತು ಆ ಮನಕ್ಕಿರುವ ಸಮ್ಯಕ್ ಮತ್ತು ಸದ್ಯ ಜ್ಞಾನವೇ ಅರಿವು ಎಂದು ಹೇಳುತ್ತಾನೆ; ಅಥವಾ ಭಾವನಾ ಪ್ರಧಾನವಾಗಿ ಇಲ್ಲವೆ ಸಂಕಲ್ಪಮಾತ್ರವಾಗಿ ಕಾಣುವ ಜ್ಞಾನಕ್ಕೆ ಅರಿವು ಎಂದು ಕರೆಯದೆ ಸುಜ್ಞಾನಸಾಮರ್ಥ್ಯವೇ ಅರಿವು ಎಂದು ಇನ್ನೊಂದು ವಿಧವಾಗಿ ಹೇಳಬಹುದು. ಮನಶ್ಶಾಸ್ತ್ರಕಾರರಾದ ಸ್ಟವುಟನಾಗಲಿ ಮಾಹೆರನಾಗಲಿ ಅರಿವನ್ನು ಕುರಿತು ಹೇಳುವ ವ್ಯಾಖ್ಯೆಗಳು 'ಸಯಂ ಪ್ರಕಾಶ ಯುತ ಸಂವಿತ್'' ಎಂದು ಅರಿವಿಗೆ ಭಾರತೀಯರು ಹೇಳುವ ಮಾತಿಗೆ ಹೊಂದಿಕೆಯಾಗುತ್ತದೆ. ಕಲ್ಪನೆ ಭಾವನೆ ಬಯಕೆ ಇವೆಲ್ಲ ಮನದ ವ್ಯವಹಾರಗಳು; ಅರಿವಿನ ಬೆಳಕು ಇವಕ್ಕೆ ಬಿದ್ದಿರಲಿ ಬೀಳದಿರಲಿ ಮನೋಧರ್ಮಕ್ಕನುಗುಣವಾಗಿ ಇವೆಲ್ಲ ಜರುಗತಕ್ಕವುಗಳೇ! ಸಾಮಾನ್ಯವಾದ ಪ್ರಾಣವ್ಯಾಪಾರದ ಅನುಭಾವದಲ್ಲಿ ಈ ಅರಿವಿನ ಬೆಳಕು ವಿಂಗಡಿಸಲಿಕ್ಕೆ ಬಾರದಂತೆ ಮನದ ವ್ಯವಹಾರದೊಡನೆ ಬೆರೆತುಕೊಂಡಿರುತ್ತದೆ. ಒಂದು ಕ್ಷಣಹೊತ್ತು ಮನವನ್ನು ಬೇರ್ಪಡಿಸಿ, ಮನದ ವ್ಯವಹಾರಗಳನ್ನೂ ಬದಿಗಿರಿಸಿ ನೋಡಿದಾಗ ಮಾತ್ರ ಅರಿವಿನ ಬೆಳಕು ಎಂತಹದಿದೆ ಎಂಬುದು ತಿಳಿಯುವದು. ಈ ನಿರ್ಮಲವಾದ ಅರಿವಿಗೆ 'ಚಿತ್'' ಎಂದು ಹೆಸರು. ಉಯಿಲಿಯಂ ಜೇಮ್ಸನು ಕರೆಯುವ ವ್ಯಕ್ತಿಗತ ಮಲಿನವಾದ ತಿಳಿಗೆ ಅಥವಾ ಮರವೆಗೆ ಈ ಹೆಸರು ಒಪ್ಪುವದಿಲ್ಲ. ಶುದ್ಧವಾದ ಅರಿವು

ಮತ್ತು ಅಶುದ್ಧವಾದ ಮರವು ಇವುಗಳಲ್ಲಿ ಉಯಿಲಿಯಂ ಜೇಮ್ಸನು ವಿಂಗಡಿಕೆಯನ್ನು ತೋರಿಸಿರುವದು ನ್ಯಾಯವಾಗಿಯೇ ಇದೆ. ಆದರೆ ಅವನ ವಿಚಾರವು ವ್ಯಾವಹಾರಿಕ ದೃಷ್ಟಿಯಿಂದ (*Pragmatism*) ಮುಖ್ಯವಾಗಿರುವದರಿಂದ ಅರಿವು ಸತತವಾಗಿ ಹರಿಯುವ ಪ್ರವಾಹದಂತಿದೆ ಎಂದು ಅವನು ತಿಳಿಯುತ್ತಾನೆ. ಅದು ಪಲ್ಲಟಗೊಳ್ಳದ ಪ್ರಶಾಂತವಾದ ಪ್ರಕಾಶವೆಂಬ ತಿಳಿಯು ಅವನಿಗಿಲ್ಲ. ಅರಿವಿಗೆ ಆತ್ಮವೆಂದೂ ಹೆಸರು. ಅದಕ್ಕೆ ಶಾರೀರಿಕ ಮತ್ತು ಮಾನಸಿಕ ವ್ಯವಹಾರಗಳನ್ನು ಪ್ರಕಾಶಗೊಳಿಸುವ ಸ್ವಭಾವ ಸಿದ್ಧವಾದ ಸಾಮರ್ಥ್ಯವಿರುತ್ತದೆ. ಈ ಸಾಮರ್ಥ್ಯವಿಲ್ಲದಿರೆ ಆ ವ್ಯವಹಾರಗಳೆಲ್ಲ ಮರವೆಗೊಳಗಾಗುವವು. ಮಾನವನ ಮನಸ್ಸು ಸೂಕ್ಷ್ಮದ್ರವ್ಯದಿಂದ ಕೂಡಿದ ಒಂದು ಇಂದ್ರಿಯವಾಗಿಹುದು. ಅದು ಪ್ರಾಕೃತವೆನಿಸಿಹುದು. ಅದು ಅಪ್ರಾಕೃತವೂ ಅಲ್ಲ, ಆಧ್ಯಾತ್ಮಿಯವೂ ಅಲ್ಲ. ಸಂವೇದನೆ ಸ್ಪರ್ಶಜ್ಞಾನ ಸಂಕಲ್ಪ ಇವೇ ಮೊದಲಾದವುಗಳು ವ್ಯಕ್ತಿಗತ ಅವಸ್ಥೆಗಳೆಂದು ಪಾಶ್ಚಿಮಾತ್ಯ ತತ್ತ್ವಜ್ಞಾನಿಗಳು ಹೇಳುತ್ತಾರೆ. ಅಂತೆಯೇ ಅವು ಅದ್ರವ್ಯಗಳೆಂದು ಅವರು ತಿಳಿಯುತ್ತಾರೆ. ಭಾರತೀಯ ತತ್ವಜ್ಞಾನವು ಅವುಗಳಲ್ಲಿ ಎರಡು ಸಂಗತಿಗಳನ್ನು ಕಂಡಿರುತ್ತದೆ. (೧) ಅಂತರಂಗದ ಮಾನಸಿಕ ಪ್ರವೃತ್ತಿ (೨) ಈ ಪ್ರವೃತ್ತಿಯನ್ನು ಪ್ರಕಾಶಿಸುವ ಅರಿವಿನ ನೆರವು. ಈ ಎರಡರಲ್ಲಿ ಮೊದಲನೆಯದು ಪ್ರಾಕೃತ ವರ್ಗದಲ್ಲಿ ಎರಡನೆಯದು ಅಪ್ರಾಕೃತ ವರ್ಗದಲ್ಲಿ ಸಮಾವೇಶವಾಗುತ್ತಿದೆ. ಮನಸ್ಸಿಗೆ ಪ್ರವೃತ್ತಿಗಳಲ್ಲಿ ಅನೇಕ ತೆರನುಂಟು. ಸಾಂಖ್ಯರು ಮನಸ್ಸಿಗೆ ಒಂದು ಸ್ವತಂತ್ರವಾದ ಪ್ರಪಂಚವಿದೆ ಎಂದು ಹೇಳಿರುವರು. ವೈಶೇಷಿಕರು ಅದೊಂದು ಕೇವಲ ಲಕ್ಷವನ್ನೂರಲು ತಕ್ಕುದಾದ ಇಂದ್ರಿಯವೆಂದಿರುವರು. ಭಾರತೀಯ ದರ್ಶನಗಳಲ್ಲಿ ಬಹುಭಾಗವು ಮನಸ್ಸು ಒಂದು ಪ್ರಾಕೃತ ದ್ರವ್ಯವೆಂದೇ ಹೇಳುತ್ತಿದೆ. ಅದೊಂದು ಅಂತರಿಂದ್ರಿಯವಿರುವುದರಿಂದ ಕಲ್ಪನೆಗೆ ನಿಲುಕದ ವಿಷಯವಾಗಿ ಬಿಡುವದದು. ಆದುದರಿಂದ ಅದು ಪ್ರಾಕೃತ ದ್ರವ್ಯವೆಂಬುದನ್ನು ಕಂಡುಕೊಳ್ಳುವದು ಬಲು ತೊಂದರೆಯ ಕೆಲಸವಾಗುವದು. ನಮ್ಮ ನರನಾಡಿಗಳು ಕಾರ್ಯಪ್ರವೃತ್ತವಾಗಲು ಆ ಕಾರ್ಯದ ಜೊತೆಗೆ ನಮ್ಮ ಅರಿವೂ ಬೆರೆತುಕೊಳ್ಳುತ್ತದೆ. ಆದರೆ ವಿಚಾರದಲ್ಲಿಯಾದರೂ ನರನಾಡಿಗಳ ಕಾರ್ಯದಿಂದ ಅರಿವನ್ನು ಬೇರ್ಪಡಿಸಬಹುದು. ಮತ್ತು ಈ ಕಾರ್ಯವು ಪ್ರಕೃತಿಯ ಒಂದು ವೈಚಿತ್ರ್ಯ

ವೆಂಬುದನ್ನು ಮನಗಾಣಬಹುದು. ಆದರೆ ಮನದ ವ್ಯಾಪಾರಗಳ ಮೂಲಕವಾಗಿಯೇ ಅದರ ಕಾರ್ಯಗಳನ್ನು ಕಂಡುಕೊಳ್ಳಬಹುದಾದುದರಿಂದ ಮತ್ತು ಈ ವ್ಯಾಪಾರಗಳ ಜೊತೆಗೆ ತನ್ನ ಸ್ವಂತ ಅರಿವಿನ ಬೆಳಕು ಬೆರೆತುಕೊಂಡಿರುವುದರಿಂದ ಮನದ ಕಾರ್ಯ ಮತ್ತು ಅರಿವಿನ ಬಗೆ ಹಾಗು ಇವುಗಳ ವಿಂಗಡಿಕೆ ಇಲ್ಲವೆ ಇವುಗಳ ಹಿರಿದುಕಿರಿದುಗಳನ್ನು ಗ್ರಹಿಸುವದು ಬಲು ಕಷ್ಟದ ಹೋರಿಯಾಗುವದು.

ವಸ್ತುಗಳ ಅರಿವು ಇಲ್ಲವೆ ವಸ್ತುಸಂಗ್ರಹಾನುಭೂತಿ ಮತ್ತು ವಸ್ತುಗ್ರಹಣ ಇವುಗಳಲ್ಲಿ ಸ್ಪಷ್ಟವಾದ ಭೇದವುಂಟು. ಪ್ಲೇಟೊ (*Plato*) ಮತ್ತು ಅರಿಸ್ಟಾಟಲ್ (*Aristotle*) ಇವರು 'ಕಣ್ಣಿನಿಂದ ಕಾಣು' 'ತಿಳಿಯಿಂದ ತಿಳಿ' 'ವಿಚಾರದಿಂದ ವಿಚಾರಿಸು' ಎಂಬ ಪದಪ್ರಯೋಗಗಳನ್ನು ಮಾಡಿರುವರು. ಇಲ್ಲಿ ಮನದ ವ್ಯವಹಾರದಿಂದ ಅರಿವು ಭಿನ್ನವಾಗಿದೆ ಎಂಬುದನ್ನು ತಿಳಿಸುವುದೇ ಅವರ ಉದ್ದೇಶವಾಗಿದೆ ಎಂದು ಹೇಳಬಹುದು. ಕೇನೋಪನಿಷತ್ತಿನಲ್ಲಿಯೂ ಸಹ

यद्वाचा नभ्युदितं येन वागभ्युद्यते ......
यन्मनसा न मनुते येनाहुर्मनो मतं ......
यच्चक्षुषा न पश्यति येन चक्षूंसि पश्यति ......
यच्छ्रोत्रेण न शृणोति येन श्रोत्रमिदं श्रुतं ......
यत्प्राणेन न प्राणिति येन प्राणः प्रणीयते
तदेव ब्रह्म त्वं विद्धि नेदं यदिदमुपासत ......

ಎಂಬಿವೇ ಮೊದಲಾದ ಅಚ್ಚರಿಗೊಳಿಸುವ ವಾಕ್ಯಗಳನ್ನು ಕಾಣಬಹುದು. ಪ್ರಾಚೀನ ತತ್ತ್ವಜ್ಞಾನಿಗಳಲ್ಲಿ ಪ್ಲೋಟಿನಸ್ (*Plotinus*) ಅವನು ಮೊಟ್ಟಮೊದಲಿಗೆ ಇಂತಹ ಭೇದವನ್ನು ತೋರಿಸಿದನು. ಮತ್ತು ಈ ವಸ್ತುಸಂಗ್ರಹಾನುಭೂತಿಗೆ 'ಪಾರಾಕೊಲೊನ್‌ಥಿಸಿಸ್' (*Parakolonthesis*) ಎಂದು ಕರೆದನು. 'ಪಾರಾಕೊಲೊನ್‌ಥಿಸಿಸ್ ಇದು ಚಿತ್ಪ್ರಕಾಶದ ನೆನವನ್ನು ಮಾಡಿಕೊಡುತ್ತದೆ. "ಬುದ್ಧಿಯು ಒಂದು ವಿಷಯವಾದರೆ ಬುದ್ಧಿಗ್ರಹಿಕೆಯು ಮತ್ತೊಂದು ವಿಷಯವು. ಬುದ್ಧಿವಂತಿಕೆಯನ್ನು ನಾವು ಯಾವಾಗಲೂ ಅರಿತರೂ ಆ ಬುದ್ಧಿವಂತಿಕೆಯನ್ನರಿಯುವೆವೆಂಬ ತಿಳಿಯು ನಮಗೆ ಯಾವಾಗಲೂ ಇರುವದಿಲ್ಲ." ಮನದ ವ್ಯವಹಾರದ ಜೊತೆಗೆ

ಅರಿವು ಬೆರೆತುಕೊಂಡಿರಲೆಬೇಕೆಂಬ ಅವಶ್ಯಕತೆಯಿಲ್ಲ ಎಂಬುದನ್ನು ಮೊದಲು ಸ್ಪಷ್ಟವಾಗಿ ನಿರೂಪಿಸಿದವನು ಯುರೋಪಿನ ಆಧುನಿಕ ತತ್ತ್ವ ಜ್ಞಾನಿಯಾದ ಲಿಬ್ನಿಯು ( *Leibniz* ) "ಸ್ವಭಾವದ ಬಗೆಗೆ ಆಲೋಚಿಸುವಾಗ ಅದರ ಯಾವುದೇ ಸ್ವರೂಪವನ್ನು ಎದುರಿಗಿಟ್ಟುಕೊಳ್ಳುವ ಶಕ್ತಿಯು ವಸ್ತುತಃ ಆತ್ಮನಿಗಿದೆ. ಆತ್ಮನ ಈ ಕಾರ್ಯದಿಂದ ಯಾವುದಾದರೊಂದು ಸ್ವಭಾವವು ಯಾವುದಾದರೊಂದು ಸ್ವರೂಪವು ಅಥವಾ ಯಾವುದಾದರೊಂದು ಸತ್ವವು ವ್ಯಕ್ತವಾಗಬಹುದು. ಆದರೆ ಅದಕ್ಕೆಲ್ಲ ವಸ್ತುನಿಷ್ಠ ವಿಚಾರವೇ ಕಾರಣವು. ನಾವು ವಿಚಾರಪರರಾಗಿರಲಿ ಇಲ್ಲವೆ ಆಗದಿರಲಿ ಇವು ನಮ್ಮಲ್ಲಿ ಯಾವಾಗಲೂ ಇದ್ದೇ ಇರುತ್ತದೆ." ಈ ಮಾತುಗಳಲ್ಲಿ ಪ್ರಾಣವ್ಯಾಪಾರವೆಲ್ಲ ಮರವೆಗೊಳಗಾದುದು. ಅರಿವಿನ ಬೆಳಕು ಬಿದ್ದಾಗ ಮಾತ್ರ ಅದು ಬೆಳಗುವದು. ಆಗ ಅರಿಕೆಗೊಳ್ಳುವವನಿಗೆ ಅದರ ಅರಿವುಂಟಾಗುವದು ಎಂಬ ಅಭಿಪ್ರಾಯವಿರುತ್ತದೆ. ಈ ಸ್ವಯಂ ಪ್ರಕಾಶಿತ ಅರಿವಿಗೆ, ಈ ಚಿತ್‌ಪ್ರಕಾಶಕ್ಕೆ ಜ್ಯೋತಿಲಿಂಗವೆಂದು ಹೆಸರು.

ವ್ಯಕ್ತಿ ವಿಶ್ವಗಳ—ಪಿಂಡ ಬ್ರಹ್ಮಾಂಡಗಳ-ಆತ್ಮವೆನಿಸಿದ ಜ್ಯೋತಿಲಿಂಗ ಇಷ್ಟಲಿಂಗಗಳು ಪರಸ್ಪರ ಅನನ್ಯವಾದವುಗಳು. ಆದುದರಿಂದ ಅವುಗಳಲ್ಲಿ ಪರಸ್ಪರ ಹೊಂದಿಕೆ ಇವೆ. ಪಿಂಡಗತ ಆತ್ಮನಿಗೆ ಅಂಗನೆಂದು ಹೆಸರು. ಅದು ಚಿದ್‌ರೂಪವಾಗಿಹುದು, ಶುದ್ಧವಾದ ಅರುಹಿನಿಂದ ಬೆರೆತಿಹುದು. ಬ್ರಹ್ಮಾಂಡಗತ ಆತ್ಮನಿಗೆ ಲಿಂಗವೆಂದು ಹೆಸರು. ಅದು ಸದ್‌ರೂಪವಾಗಿಹುದು, ಶುದ್ಧವಾದ ಇರುಹಿನಿಂದ ಬೆರೆತಿಹುದು. ಅಂಗ ಲಿಂಗಗಳಲ್ಲಿ ಅಭಿನ್ನತೆಯಿದೆ, ಅವು ಒಂದೆಯಾಗಿರುವವು ಎಂಬುದು 'ಅಹಂಗ್ರಹೋಪಾಸನೆ'ಯಿಂದ ಸಿದ್ಧವಾಗುವದು. ನಿಚ್ಚ ಎಚ್ಚರಿಕೆಯಿಂದಲಾಗಿ ತೋರಿಕೆಯಲ್ಲಿಯ ಅನಂತವಾದ ಅನೇಕತ್ವದಲ್ಲಿ ಏಕತ್ವದ ಇರುವಿನ ಬಗೆಯನ್ನು ಅಳವಡಿಸಿಕೊಂಡರೆ ಅದುವೆ ಸಮರಸವೆನಿಸುವುದು. ಈ ಸಮರಸದ ಆನಂದವು ಉಪಮಾತೀತವಾಗಿಹುದು. ಆದುದರಿಂದ ಸಾಮರಸ್ಯವು ಆನಂದರೂಪವಾಗಿಹುದು. ಸಚ್ಚಿದಾನಂದದ ಪರಮಾದರ್ಶಕ್ಕೆ ಲಿಂಗವಂತ ಧರ್ಮ ಪರಿಭಾಷೆಯಲ್ಲಿ ಲಿಂಗಾಂಗ ಸಾಮರಸ್ಯವೆಂಬ ಹೆಸರಿದೆ. ವ್ಯಕ್ತಿಯಲ್ಲಾಗಲಿ, ವಿಶ್ವದಲ್ಲಾಗಲಿ, ಪಿಂಡಾಂಡದಲ್ಲಾಗಲಿ ಬ್ರಹ್ಮಾಂಡದಲ್ಲಾಗಲಿ ಒಡಲುಗೊಂಡ ಆತ್ಮವು ಅನಂತವಾದ ಅವಿಭಾಜ್ಯವಾದ ಇರುಹನ್ನು ವ್ಯಕ್ತಗೊಳಿಸುವದು. ಈ ಇರುಹಿನ ಪ್ರಾಮುಖ್ಯ

ವಾದ ಲಕ್ಷಣವು ಸ್ವಾನುಭಾವ ಜೀವಿಯು ಅನಂತವಾದ ಅವಿನಾಶಿಯಾದ ಶಕ್ತಿಯಲ್ಲಿ ವ್ಯಕ್ತಗೊಳ್ಳುವದು ಮತ್ತು ಈ ಸ್ವಾನುಭಾವಕ್ಕೆ ಅನಂತವಾದ ಅವಿಚ್ಛಿನ್ನವಾದ ಆನಂದಾನುಭೂತಿಯೇ ಮುಖ್ಯ ಲಕ್ಷಣವಾಗಿಹುದು. ಪರಶಿವನು ಸಚ್ಚಿದಾನಂದ ಲಕ್ಷಣ ಲಕ್ಷಿತನು; ಅವನು ಆನಂದಯುತ ಅರುಹಿನಿಂದ ಬೆರೆತ ಅನಂತವಾದ ಇರುಹಿನಲ್ಲಿ ವ್ಯಕ್ತಗೊಳ್ಳುವನು. ಬಗೆಬಗೆಯಾಗಿ ಕಂಡು ಬಗೆಬಗೆಯಾಗಿ ರೂಹಿಸಿರುವ ಅವನ ಆ ಅಪರಿಮಿತವಾದ ಆನಂದವೇ ಅಪಾರವಾದ ವಿಶ್ವವಾಗಿಹುದು—

**को ह्येवान्यात् कः प्राण्यात् यदेष आकाश आनन्दो न स्यात् एषः ह्येवानन्दयाति' (೨-೭)**

ಎಂದು ತೈತ್ತರಿಯೋಪನಿಷತ್ತು ಈ ಆನಂದವನ್ನು ಕುರಿತು ವಿವೇಚಿಸಿರುವದು. ನಮ್ಮ ಇರುಹನ್ನು ಬಳಸಿಕೊಂಡಿರುವ ಈ ವಿಶ್ವಜೀವನವು ಸ್ಪಷ್ಟವಾದ ಶಕ್ತಿಯೊಂದರ ಸೂತ್ರದಿಂದ ಸಾಗಿಹುದು. ಆದರೆ ಇದು ಸೃಷ್ಟಿ ಸ್ಥಿತಿ ಲಯಗಳ ತಾಳಮೇಳದಿಂದ ಕೂಡಿಹುದೆಂಬುದೂ ಸ್ಪಷ್ಟವಾದುದು. ಈ ತಾಳಮೇಳವು ಹಲವು ತೆರನಾಗಿ ತನ್ನನ್ನು ತಾನು ತೋರ್ಪಡಿಸುವ ಪರವಸ್ತುವಿನ ಪರಮಾನಂದದ ಲೀಲೆಯಾಗಿಹುದು. ಆದುದರಿಂದ ಚಾರ್ವಾಕರು ಹೇಳುವಂತೆ ವಿಶ್ವಗತಿಯು ಸೂತ್ರರಹಿತವಾದ ಗಲಿಬಿಲಿಯಾಗಿರದೆ ಸೂತ್ರ ಸಂಬದ್ಧವಾದ ಸುಮನೋಹರವಾದ ಗತಿಯು ಗಮಕವನ್ನು ವ್ಯಕ್ತಗೊಳಿಸುವದು. 'ಈ ಸೃಷ್ಟಿಯು ದಿವ್ಯಶಕ್ತಿಯೊಂದರ ಗೂಢವಾದ ಒಡಲಿನಲ್ಲಿ ಎಡೆವಿಡದೆ ಧ್ವನಿಗುಡುವ ಆನಂದಮಯ ದಿವ್ಯ ನೆನಹಿನಿಂದ—ಎಂದೆಂದಿಗೂ ಸರ್ವ ಸಮ್ಮತವಾದ ದಿವ್ಯ ನೆನಹಿನಿಂದ—ಹೊರಹೊಮ್ಮಿರುವದು... ಈ ಅಖಿಲವಾದ ಸೃಷ್ಟಿಯು ಶಾಶ್ವತವಾದ ಪ್ರೇಮ ಪುತ್ಥಳಿಯ ಘನವಾದ ಲೀಲೆಯಾಗಿರುವದು. ಇದು ಪ್ರಭುವಿನ ಬದಲಾಗಿ ಬಾಳಿ ಬೆಳೆಯುವ ಪ್ರೇಮ ಆನಂದಗಳ ಸುಸ್ವರೂಪವಾಗಿರುವದು.' ಆ ದೇವನ ಈ ಪ್ರೇಮ ಆನಂದಗಳಲ್ಲಿ ಪಾಲುಗಾರನಾಗಿ ಅನಂತವಾದ ಆ ಒಂದು ದಿವ್ಯ ಜೀವನದಲ್ಲಿ ಹೊಂದಿಕೆಗೊಂಡು ಸಾಗಬೇಕೆಂಬುದೆ ಲಿಂಗವಂತನ ಗುರಿಯಾಗಿಹುದು.

ದಿವ್ಯಾತ್ಮನ ಇರುಹು ಶುದ್ಧವಾಗಿ ಸೀಮಾತೀತವಾಗಿ ತಾನೆ ತಾನಾಗಿ ಇರುವದು. ಅದಕ್ಕೋಸುಗ ಅದಕ್ಕೆ 'ಸತ್' ಎಂದು ಹೆಸರು. ಅದು ತನ್ನ ಅರುಹಿನ ನಿಸ್ಸೀಮವಾದ ಶುದ್ಧತೆಯಿಂದ ಬಹಿರ್ಗರಿಸಿದುದೆಲ್ಲ

ಸತ್ಯವೇ ಆಗಿರುವದು. ಆದು ಕಾಲ ಅವಕಾಶಗಳ ಕಟ್ಟುನಿಟ್ಟುಗಳಿಗೆ ಒಳಗಾಗಿಲ್ಲ. ತಾನೆ ತಾನಾದ ಆ ಅರುಹಿನ ಇರುವು ಆನಂದದ ಆಗರವಾಗಿಹುದು. ವಿಶ್ವವು ಮಾತ್ರ ಕಾಲ ಅವಕಾಶಗಳ ಕಟ್ಟುನಿಟ್ಟುಗಳಿಗೆ ಒಳಗಾಗಿ ಹೊರಹೊಮ್ಮಿರುವದು. ಆದರೂ ಅದರಲ್ಲಿ ಒಂದು ಗತಿಯಿದೆ, ಆದರಲ್ಲಿ ಒಂದು ಕೃತಿಯಿದೆ, ಅದರಲ್ಲಿ ಸಂಬಂಧ ಶಕ್ಯತೆಗಳಿಂದೊಡಗೂಡಿದ ಒಂದು ಪ್ರಗತಿಯಿದೆ. ಆದುದರಿಂದ ಅದರಲ್ಲಿ ದಿವ್ಯಜ್ಞಾನದ ದಿವ್ಯ ನೆನಹಿನ ಶಕ್ತಿಯೊಂದು ಬೆರತಿರಲೆಬೇಕು. ಮತ್ತು ಆ ಶಕ್ತಿಯೇ ತನ್ನ ಅಗಾಧವಾದ ಸಾಮರ್ಥ್ಯದಿಂದ ಮೂಲದಿಂದ ಹಲವಾಗಿ ಹೊರಹೊಮ್ಮುವದು. ಹಲವುಗಳಲ್ಲಿ ಪರಸ್ಪರ ಸಂಬಂಧಗಳನ್ನು ನಿಯಾಮಿಸುವದು, ಶಕ್ಯತೆಗಳನ್ನು ಕಲ್ಪಿಸಿಕೊಡುವದು, ಮತ್ತು ವಿಶ್ವಗತಿಯು ಅಚ್ಚುಗೊಳಿಸುವ ತಾಳಮೇಳಗಳನ್ನೂ ಸಾಗಿಸುವದು. ಇದು 'ಸತ್'ಶಕ್ತಿಯು ಹೊರತು ಬೇರೆ ಇನ್ನಾವುದೂ ಆಗಿರದು ಈ ಶಕ್ತಿಗೇ ವಿಮರ್ಶಶಕ್ತಿಯೆಂದೂ ಹೆಸರು. ಇದು ತನ್ನಲ್ಲಿ ಇಲ್ಲದುದನ್ನು ಎಂದೂ ರೂಪಿಸದು. ಈ ದೆಸೆಯಿಂದ ವ್ಯಕ್ತಿ ವಿಶ್ವಗಳ ಪಿಂಡಬ್ರಹ್ಮಾಂಡಗಳ ಕಟ್ಟಳೆಯು ಹೊರಗಿನಿಂದ ಹೇರಿದುದಲ್ಲ; ಒಳಗಿನಿಂದ ಹೊರಹೊಮ್ಮಿದುದಾಗಿದೆ. ಆದುದರಿಂದ ಪ್ರಗತಿಯೆಂಬುದೆಲ್ಲ ತನ್ನ ಪ್ರಗತಿಯಾಗಿಹುದು. ಮೂಲವೆಂಬುದೆಲ್ಲ ವಸ್ತುಗಳಲ್ಲಡಗಿಹ ಸತ್ಯದ ಮೂಲವಾಗಿಹುದು. ಹಲವೆಂಬುದೆಲ್ಲ ಆ ಮೂಲದ ಮರೆಯಲ್ಲಿಹ ಬಲದಿಂದ ನಿಶ್ಚಿತವಾಗಿಹುದು. ಆದುದರಿಂದ ವಿಶ್ವದಲ್ಲಿ ಒಂದು ಹಲವುಗಳ ನಡುವೆ ಯಾವಾಗಲೂ ಒಂದು ಸ್ಥಿರವಾದ ಸಂಬಂಧವಿದೆ. ಒಂದು ಹಲವುಗಳಲ್ಲಿ ಮತ್ತು ಹಲವು ಹಲವುಗಳಲ್ಲಿ ಸಹ ಅಸಂಖ್ಯವಾದ ಸಂಬಂಧಗಳಿರುವ ಸಂಭವವುಂಟು. ಈ ಸಂಬಂಧಗಳೆಲ್ಲ ಪರವಸ್ತುವಿನಲ್ಲಿ ನೈಜವಾಗಿ ಅಡಕಗೊಂಡಿರುವ ಆ ಶಕ್ತಿಯಿಂದ ನಿಶ್ಚಿತಗೊಳ್ಳುತ್ತವೆಂಬುದನ್ನು ಈ ಮುಂಚಿತವಾಗಿಯೇ ಅರಿತುಕೊಂಡಿದೆ. ಮೊದಮೊದಲು ಅವು ಪುರುಷರಲ್ಲಿ ಅರುಹಿನ ಸಂಬಂಧಗಳಾಗಿ ತೋರುವವು. ಆಬಳಿಕ ಅವು ಪುರುಷರಿಂದ ಪರವಸ್ತುವಿನೊಡನೆ ಅರುಹಿನ ಸಂಬಂಧವನ್ನು ಬೆಳಸಲು ಸಾಧನಗಳಾಗಿ ಬಳಕೆ ಹೊಂದುವವು. ಪರವಸ್ತುವಿನೊಡನೆ ಅನೇಕ ಸಂಬಂಧಗಳನ್ನು ಬೆಳಸಿರುವ ಈ ಕ್ರಮವೇ ಧರ್ಮದ ಮೂಲಭೂತ ಉದ್ದೇಶ ಮತ್ತು ವ್ಯವಹಾರವೆನಿಸುವದು. ಈ ಪ್ರಪಂಚದಲ್ಲಿ ಈ ಪ್ರಾಕೃತ ಸೃಷ್ಟಿಯಲ್ಲಿ ವ್ಯಕ್ತವಾಗಿಹ ಅನಿವಾರ್ಯವಾದ ಸತ್ಯ

ವಾದ ನಿತ್ಯವಾದ ಮತ್ತು ಮಾನವನ ಆಗು ಹೋಗುಗಳನ್ನು ನಿಯಾಮಿಸುವ ಬಲವಾದ ಕಟ್ಟಳೆಯ ಕ್ರಮದ ದೆಸೆಯಿಂದಲೇ ಧರ್ಮಗಳೆಲ್ಲ ಸರಿಯಾದವುಗಳೆಂದು ಹೇಳಲಾಗುವದು; ಲಿಂಗವಂತರ ಧರ್ಮವು ಕೂಡ ಇದಕ್ಕೆ ಅಪವಾದವಾದುದಲ್ಲ.

ಈ ಪ್ರಪಂಚದಲ್ಲಿ ತೋರಿಹ ಅನೇಕತ್ವದಲ್ಲಿಯ ಸಂಬಂಧ ಸೂತ್ರಗಳನ್ನರಿತು ಅಲ್ಲಿ ಪರಸ್ಪರ ಹೊಂದಿಕೆಗೊಂಡು ವ್ಯಕ್ತವಾಗಿಹ ಏಕತ್ವದ ತಿಳಿವನ್ನುಂಟುಮಾಡಿಕೊಳ್ಳಬೇಕು. ಸತ್ಯದ ನೆಲೆಗಾಣಲು ಇದುವೆ ಹಾದಿ, ಇದುವೆ ಧರ್ಮದ ಉದ್ದೇಶ ವ್ಯವಹಾರಗಳ ಒಗಟು ಎಂದು ಇದೇ ಮಾತನ್ನು ಇನ್ನೊಂದು ವಿಧವಾಗಿ ಹೇಳಬಹುದು. ಈ ತಿಳವಿನಲ್ಲಿ ತರಗತಿಗಳಿರುವವು ಎಂಬದು ಸ್ವಾಭಾವಿಕವಾಗಿರುವದು. ಮತ್ತು ಲಿಂಗವಂತರಲ್ಲಿ ಷಟ್‌ಸ್ಥಲದ ಕ್ರಮಬದ್ಧವಾದ ಅನುಭವವು ಇರುವುದಾದರೂ ಸತ್ಯದ ಒಗೆಗೆ ಈ ತಿಳಿವನ್ನು ಉಂಟುಮಾಡಿಕೊಳ್ಳುವದಕ್ಕಾಗಿಯೇ ಎಂಬದು ಸಹ ಸ್ಪಷ್ಟವಾಗಿರುವದು. ಇಡಿಯ ವಿಶ್ವದಲ್ಲಿ ಈ ಏಕತ್ವದ ಆತ್ಯಂತಿಕ ಅರಿವನ್ನು ಅನುಭವಿಸಿದರೆ ಮಾತ್ರ ಆ ಆತ್ಯಂತಿಕ ಸತ್ಯದ, ಆ ಆತ್ಯಂತಿಕ ಸೊಬಗಿನ ಅನುಭವವು ನಿಲುಕುವದು ಆತ್ಯಂತಿಕ ಅರಿವು ನಾವು ಸ್ವಾಭಾವಿಕವಾಗಿ ಗ್ರಹಿಸುವ ತಿಳವಳಿಕೆ ಮತ್ತು ಅರಿವು ಇವನ್ನು ಮೀರಿಹುದು. ನಮ್ಮ ಅನುಭವಕ್ಕೆ ನಿಲುಕುವ ಸಂಗತಿಗಳಲ್ಲೆಲ್ಲ ಒಂದು ವಿಧವಾದ ಹೊಂದಿಕೆ ಮತ್ತು ಒಂದು ವಿಧವಾದ ಐಕ್ಯತೆ ಇರುವುದೆಂಬ ಅರಿವನ್ನು ಅಳವಡಿಸಿಕೊಳ್ಳುತ್ತ ನಡೆದಂತೆ ಸತ್ಯ ಸೌಂದರ್ಯಗಳ ಬಗೆಗೆ ಆ ನಮ್ಮ ತಿಳಿಯು ಸ್ಪಷ್ಟವಾಗುತ್ತ ಮತ್ತು ಸಂಪೂರ್ಣವಾಗುತ್ತ ಸಾಗುವದು. ಪ್ರಗತಿಪರ ವಿಕಾಸದ ವಿವರ್ತೆಯಿಂದಾಗಲಿ ಇಲ್ಲವೆ ಸ್ಫುರಣಾತ್ಮಕ ತುರೀಯದ ಪ್ರಕಾಶದಿಂದಾಗಲಿ ಎಂದೆಂದಿಗೂ ಮರೆಯದಂತೆ ಈ ಸತ್ಯದ ನೆಲೆಯನ್ನು ಕಾಣಬಹುದು. ಇಲ್ಲವೆ ಅತಿಮಾನವ ಪರಮಾನುಭವದಲ್ಲಿ ಆನಂದಗೊಂಡು ಅನೇಕ ಪ್ರಹರಗಳವರೆಗೆ ಅನೇಕ ದಿವಸಗಳ ವರೆಗೆ ಈ ಸತ್ಯದ ಸೊಬಗಿನ ಕಲೆಯಲ್ಲಿ ನಿಲ್ಲಬಹುದು. ಒಮ್ಮೆ ಇಂಥ ತುರೀಯಾನಂದದ ಅನುಭವದಿಂದ ಕೆಳಗಿಳಿದಂತೆ ಆ ಭಕುತಿರತಿಯ ಸಂಭಾಷಣೆಯು ಹಿಂಗಿತೆಂದು ಆ ಸ್ಫುರಣೆಯ ಪ್ರವಾಹವು ಹರಿಗಡಿಯಿತೆಂದು ಅನಿಸಿದರೂ ಅದರ ನಿಜಸ್ಥಿತಿಯು ಹಾಗಲ್ಲ. ಒಮ್ಮೊಮ್ಮೆ ಅದು ವ್ಯಕ್ತಗೊಳ್ಳುತ್ತ, ಒಮ್ಮೊಮ್ಮೆ ಅದು ಉಲು

ಹುಗೊಳ್ಳುತ್ತ, ಒಮ್ಮೊಮ್ಮೆ ಗುಪ್ತಗಾಮಿನಿಯಾಗುತ್ತ ಸಾಗುವದು. ಆದರೆ ಸತ್ಯದ ತುತ್ತತುದಿಯ ತುರೀಯಾನುಭವಕ್ಕೇರಿ ಅಲ್ಲಿಯೇ ನಿರಂತರವಾಗಿ ನಿಲ್ಲುವದು. ಮಾನವನ ಅರಿವಿನ ವಿಕಾಸದಲ್ಲಿ ಆತ್ಯಂತಿಕ ಪರಮಾದರ್ಶವಾಗಿಹುದು. ಅದುವೆ ಸಾಮರಸ್ಯವೆನಿಸಿಹುದು. ಅಲ್ಲಿ 'ಅಂಗ'ನ ನೆನಹು' 'ಲಿಂಗ'ದ ನೆನಹಿಗೆ ಬೆರೆತು ಹೊಂದಿಕೆಯಾಗುವದು ಮತ್ತು 'ನೀತಿ'ವಾದಕ್ಕಿಂತ 'ಇತಿ'ವಾದದಲ್ಲಿಯೇ ಆ ಸಮರಸದ ಸೊಬಗು ವ್ಯಕ್ತಗೊಳ್ಳುವದು. ಉರಿಲಿಂಗ ಪೆದ್ದಿಗಳ ವಚನವೊಂದು ಲಿಂಗವಂತ ಧರ್ಮದ ತಿರುಳನ್ನೇ ಗರ್ಭೀಕರಿಸಿಕೊಂಡಿದೆ.

'ತತ್' ಪದ ಲಿಂಗವೆಂದರುಹಿ 'ತ್ವಂ' ಪದ ಅಂಗವೆಂದರುಹಿ, 'ಅಸಿ' ಪದ ಪ್ರಾಣವೆಂದರುಹಿ, ಅಂಗವೇ ಲಿಂಗ, ಲಿಂಗವೇ ಪ್ರಾಣವೆಂದು ಶ್ರೀಗುರುವು ಇಷ್ಟಲಿಂಗವ ಕೊಟ್ಟು ದೃಷ್ಟಲಿಂಗವ ತೋರಿದ ಬಳಿಕ 'ತತ್ವಮಸಿ' ಪದ ನಿಮ್ಮ ಶರಣರು ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

ಆಂತರಿಕ ಸ್ವರೂಪದ ವಿವರಣೆಯನ್ನು ವ್ಯಕ್ತಗೊಳಿಸುವ ಧರ್ಮವು ನಿಜವಾಗಿಯೂ ಅನುಭಾವ ವಿದ್ಯೆಯಾಗಿರುವದು. ಅದು ಬುದ್ಧಿಯ ಮಟ್ಟಗಳನ್ನು ಮೀರಿದ್ದ ಅದ್ವೈತದ ಅರಿವಿನ ಏಕತಾನತೆಯನ್ನು ಸೂಚಿಸುತ್ತಿರುವದು, ಇಲ್ಲವೆ ಸ್ಪಷ್ಟಗೊಳಿಸುತ್ತಿರುವದು. ಅನುಭವಪರ ಧರ್ಮದ ಈ ಬಗೆಯನ್ನು ಕುರಿತು ಉಯಿಲಿಯಂ ಜೇಮ್ಸನು ಧಾರಾಳವಾಗಿ ನುಡಿದಿರುವನು. ಜೀವ ಪರಮರ ನಡುವಿನ ಈ ಸಾಮಾನ್ಯವಾದ ತೊಡಕುಗಳನ್ನು ಪರಿಹರಿಸಿಕೊಳ್ಳುವದೇ ಅನುಭಾವಿಗೆ ಘನತರವಾದ ಸಂಪಾದನೆಯಾಗಿರುವದು. ಅನುಭಾವಿಯು ಈ ಅವಸ್ಥೆಗಳಲ್ಲಿ ಪರಮನೊಡನೆ ನಾವು ಬೆರೆತು ಒಂದಾಗುವದಲ್ಲದೆ ಬೆರಕೆಗೊಂಡು ಒಂದಾದ ಆ ಅರಿವೂ ನಮಗಿರುವದು. ಇದು ಅನುಭವ ಜೀವನದಲ್ಲಿ ಎಂದೆಂದಿಗೂ ಬಾಳಿಬಂದ ಮತ್ತು ಬೆಳಗುತ್ತಿರುವ ಪರಂಪರೆಯಾಗಿರುವದು. ದೇಶ ಕಾಲ ಮತತತ್ವ ಮೊದಲಾದವುಗಳ ಅಡೆತಡೆಗಳಿಂದ ಈ ಪರಂಪರೆಯಲ್ಲಿ ಪಲ್ಲಟ ಉಂಟಾಗದು. ಹಿಂದುಗಳ ಮತದಲ್ಲಾಗಲಿ, ಪ್ಲೇಟೋನಿಂದ ಇತ್ತೀಚೆಗ ಬೆಳೆದ ತತ್ವದಲ್ಲಾಗಲಿ, ಸೂಫಿಗಳ ಅನುಭವದಲ್ಲಾಗಲಿ, ಕ್ರೈಸ್ತರ ಪಂಥದಲ್ಲಾಗಲಿ, ವ್ಹಾಟ್‌ಮನ್ನನ ಹಾಡಿನಲ್ಲಾಗಲಿ ಪುನಃ ಪುನಃ ಇದೇ ಧ್ವನಿಯು ಕೇಳಿಸುತ್ತದೆ. ಇದರಿಂದ ಅನುಭಾವಿಗಳ ಮಾತುಗಳಲ್ಲಿ ಶಾಶ್ವತವಾದ ಒಂದು ಸಮತೂಕವಿದೆ, ಸಾಮ್ಯವಿದೆ ಎಂಬುದು ಸ್ಪಷ್ಟ

ವಾಗುತ್ತಿದೆ. ಗುಣದೋಷ ವಿಮರ್ಶಕನೊಬ್ಬನು ಅದನ್ನು ಕುರಿತು ಆಲೋಚಿಸಿ ಮುಕ್ಕ ಮೀರಿ ಬಗೆಗೊಳ್ಳುವನು. ಅನುಭವದ ಹೊತ್ತಿಗೆಗಳಿಗೆ ಜನ್ಮಭೂಮಿಯೂ ಇಲ್ಲ, ಜನ್ಮದಿನವೂ ಇಲ್ಲ. ಅವು ಸರ್ವ ಸಾಮಾನ್ಯವಾಗಿ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಎಲ್ಲರ ಒಪ್ಪಿಗೆಗೆ ಮಾನ್ಯವಾಗಿರತಕ್ಕವುಗಳೆಂಬುದು ಸಿದ್ಧವಾಗುತ್ತದೆ. ಜೀವ ದೇವರ, ಆತ್ಮ ಪರಮಾತ್ಮರ ಅಂಗ ಲಿಂಗಗಳ ಸಮರಸವನ್ನು ಕುರಿತು ನಿತ್ಯವಾಗಿ ನಿರಂತರವಾಗಿ ಹೇಳಬಯಸುವದಾದರೆ ಮಂತ್ರಮಯವಾದ ಅವರ ಮಾತು ಅವರ್ಣನೀಯವಾದುದು, ಮತ್ತು ಅನುಭಾವದ ಆ ಅಮರವಾಣಿಗೆ ಮುಪ್ಪುಮರವೆಗಳೆಂಬುದಿಲ್ಲ.' ಷಟ್‌ಸ್ಥಲದ ಹೊದಕೆಯನ್ನಷ್ಟು ಓರೆ ಮಾಡಿದರೆ ಲಿಂಗಾಂಗ ಸಾಮರಸ್ಯವು ಶುದ್ಧವಾದ ಸತ್ಯವಾದ ಮತ್ತು ಸರಲವಾದ ಅನುಭಾವವೆಂದೇ ಹೇಳಬೇಕಲ್ಲದೆ ಇನ್ನಾವ ಶಬ್ದಗಳಿಂದಲೂ ಅದನ್ನು ಹೆಸರಿಸಲಾಗದು. ಅದು ಸನಾತನವಾದ ಅದು ಏಕೆ ಶಾಶ್ವತವಾದ ದಿವ್ಯಜ್ಞಾನದ ಪ್ರತಿಧ್ವನಿಯೇ ಆಗಿರುವದು ಇಂತಿದು ಲಿಂಗವಂತ ಧರ್ಮದ ಆಂತರಿಕ ಸ್ವರೂಪವು.

ಧರ್ಮಕ್ಕೆ ಬಾಹ್ಯ ಸ್ವರೂಪವೂ ಇದೆಯಷ್ಟೇ! ಅದರಿಂದ ರೂಢಿಯಿಂದ ಬಂದ ಮತ್ತು ಪರಂಪರಾಗತವಾದ ನಂಬುಗೆಗಳ ಬಗೆಯು ತಿಳಿದು ಬರುವದು. ಆಂತರಿಕ ಸ್ವರೂಪದಿಂದ ಧರ್ಮದ ತಿರುಳು ತಿಳಿದರೆ ಬಾಹ್ಯ ಸ್ವರೂಪದಿಂದ ಅದರ ಆವರಣವು ಗೊತ್ತಾಗುವದು. ರೂಪಕ್ಕೆ ಬಂದ ಈ ಜಗತ್ತಿನಲ್ಲಿ ಎಲ್ಲವು ಬದಲುಗೊಳ್ಳುತ್ತಿರುವಂತೆ ಧರ್ಮದ ಈ ಆವರಣಗಳೂ ಸಹ ಬದಲುಗೊಳ್ಳಲೆ ಬೇಕು. ಆತ್ಯಧಿಕವಾದ ಜ್ಞಾನದ ವೇಗಕ್ಕನುಗುಣವಾಗಿ ಆವರಣಗಳಿಗೆ ಅವಸಾನವೂ ಉಂಟಾಗುವದು. ಹೊಸ ಧರ್ಮಗಳು ಬುದ್ ಬುದವಾಗಿ ಎದ್ದು ಹಿಂದಿನ ಧರ್ಮಗಳ ಹಳೆಯ ಗಾತ್ರಗಳನ್ನು ಹಳೆಯ ಸೂತ್ರಗಳನ್ನು ಅಂಗವಿಸಿಕೊಂಡು ಹೊಸತನದಲ್ಲಿ ಹೊರಹೊಮ್ಮುವವು. ಹೊಸ ಧರ್ಮಸಂಸ್ಥಾಪಕರು ಹೊಸ ಧರ್ಮೋಪದೇಶಕರು ಉದಯ ಹೊಂದಿ ಹೊಸ ಮಡಕೆಯಲ್ಲಿ ಹೊಸ ನೀರನ್ನೇ ಹೊಯ್ಯುವರು. ಆದರೂ ಹಳೆಯ ರೂಢಿಗಳು, ಹಳೆಯ ಆವರಣಗಳು ಹಲಕೆಲವು ಯುಗಗಳ ವರೆಗೆ ಚಲ್ಲಾಟಗೊಳ್ಳಬಹುದು; ಮತ್ತು ಹಾಗೆ ಚಲ್ಲಾಟಗೊಂಡೇ ತೀರುವವು. ಅವು ರೂಢವಾಗಿರುವ ಕಾಲದಲ್ಲಿ ಅವಕ್ಕೆ ಮಹತ್ವಾತಿಶಯವುಂಟಾಗುವದು. ಆಗ ಅವುಗಳ ಪ್ರಯೋಜ

ನವೂ ಸ್ಥಿರಗೊಳ್ಳುವದು. ಮತ್ತು ಕೆಲವು ಅವಧಿಯ ವರೆಗಾದರೂ ಅವುಗಳಿಂದ ಮಾನವನ ಅನುಭಾವದಲ್ಲಿ ಪ್ರಾಮುಖ್ಯವಾದ ಒಂದು ತತ್ವವು ಒಂದು ಗೂಢವು ವ್ಯಕ್ತವಾಗುವದು. ಈ ದೆಸೆಯಿಂದ ಅನೇಕ ವರುಷಗಳ ವರೆಗೆ ಅವುಗಳ ಫಲವೇ ಸಾಗುವದು. ಗೌತಮ ಬುದ್ಧನು ಬ್ರಾಹ್ಮಣ ಧರ್ಮದಲ್ಲಿ ಮತ್ತು ಮನುವಿನ ಶಾಸ್ತ್ರದಲ್ಲಿ ತಿದ್ದುಪಡೆಯನ್ನುಂಟು ಮಾಡಿದನು; ಆದರೂ ಕೋಟ್ಯವಧಿ ಜನರ ಮೇಲೆ ಬ್ರಾಹ್ಮಣ ಧರ್ಮದ ಪ್ರಭುತ್ವವು ಇಂದಿಗೂ ಇದೆ. ಜ್ಯೂಧರ್ಮದಲ್ಲಿ ಮತ್ತು ಮೋಜೆಸನ ಧರ್ಮಕಟ್ಟಳೆಗಳಲ್ಲಿ ಕ್ರೈಸ್ತ ಧರ್ಮದಿಂದ ತಿದ್ದುಪಾಟಗಳುಂಟಾದವು. ಆದರೂ ಕೋಟ್ಯವಧಿ ಜನರು ಈಗಲೂ ಜ್ಯೂಧರ್ಮವನ್ನೇ ಅವಲಂಬಿಸಿದ್ದಾರೆ, ಮೋಜೆಸನ ಸಂಪ್ರದಾಯವನ್ನೇ ನೆಮ್ಮಿದ್ದಾರೆ. ಬಸವಣ್ಣನು ಶೈವಧರ್ಮವನ್ನು ಸುಧಾರಿಸಿದನು; ವರ್ಣಾಶ್ರಮ ಧರ್ಮದಲ್ಲಿ ಕ್ರಾಂತಿಯನ್ನೆಸಗಿದನು; ಆದರೂ ಶೈವಧರ್ಮವು ವರ್ಣಾಶ್ರಮ ಧರ್ಮವು, ಇಂದಿಗೂ ಕೋಟ್ಯವಧಿ ಜನರನ್ನು ಮರುಳುಗೊಳಿಸಿದೆ.

ಬುದ್ಧನು ಬೌದ್ಧಧರ್ಮ ಸಂಸ್ಥಾಪನೆಗೆಯ್ದ ದೃಷ್ಟಿಯಲ್ಲಿ, ಕ್ರೈಸನು ಕ್ರೈಸ್ತಧರ್ಮಸಂಸ್ಥಾಪನೆಗೆಯ್ದ ದೃಷ್ಟಿಯಲ್ಲಿ ಬಸವಣ್ಣನೂ ವೀರಶೈವಧರ್ಮ ಸಂಸ್ಥಾಪನೆಗೆಯ್ದನು. ಪ್ರೊಫೆಸರ ಎಂ. ಆರ್. ಸಾಖರೆ ಎಂ. ಎ. ಟಿ ಡಿ (ಲಂಡನ್) ಅವರು ಈ ಮಾತನ್ನು ಅತಿ ಸ್ಪಷ್ಟವಾಗಿ ಅತಿ ಸ್ಫುಟವಾಗಿ, ಅತಿ ಸುಲಲಿತವಾಗಿ ಎತ್ತಿಹಿಡಿದಿದ್ದಾರೆ.

'ವೀರಶೈವಧರ್ಮ ಸಂಸ್ಥಾಪಕನಾರು?' ಎಂಬ ಪ್ರಶ್ನೆಗೆ 'ವೀರಶೈವ' ಪದದಲ್ಲಿಯೇ ಉತ್ತರವು ಹೊರಡುವಂತಿದೆ. ಕ್ರಿ. ಶ. ೧೨ನೆಯ ಶತಮಾನದ ಪ್ರಾರಂಭದ ಸುಮಾರಿಗೆ ಜೈನ ಮತ್ತು ವೈಷ್ಣವ ಧರ್ಮಗಳು ಪ್ರಾಬಲ್ಯವನ್ನು ಪಡೆದಿದ್ದವು. ದಕ್ಷಿಣಭಾರತದಲ್ಲಿ ಶೈವಧರ್ಮಕ್ಕೆ ಸಂದುಕಟ್ಟಿನ ಸಮಯವು ಒದಗಿತ್ತು. ಏಳಬೇಕು, ಇಲ್ಲವೆ ಬೀಳಬೇಕು ಎಂಬ ಪ್ರಸಂಗವು ಆದಕ್ಕೊದಗಿತ್ತು. ಆದರೆ ಅದು ಬೀಳಲಿಲ್ಲ. ಎಳ್ಗೆಪಡೆಯಿತು. ೧೨ನೆಯ ಶತಮಾನವು ಅರ್ಧಗಳೆಯುವಷ್ಟರಲ್ಲಿ ವೀರನೊಬ್ಬನು ಉದಿಸಿ ಅಲ್ಪಾವಧಿಯಲ್ಲಿಯೇ ಶೈವಧರ್ಮದ ನಂಬುಗೆಯಲ್ಲಿ ಕ್ರಾಂತಿಯನ್ನುಂಟು ಮಾಡಿದನು. ಅವನ ಪ್ರಯತ್ನದಲ್ಲಿ ಪೌರುಷವಿತ್ತು; ಅವನ ಪರಾಕ್ರಮದಲ್ಲಿ ಪ್ರಭಾವವಿತ್ತು. ಶೈವಧರ್ಮವು ವರ್ಣಾಶ್ರಮಧರ್ಮದ ಬಂಧನದಿಂದ ಬಿಡುಗಡೆಯನ್ನು ಪಡೆಯಿತು; ಅದರ ಪಾಶಗಳನ್ನು ಛೇದಿಸಿತು; ಅದರ

ಬಲಿಯೊಳಗಿಂದ ಪಾರಾಯಿತು. ಅದರ ಪರಿಣಾಮವಾಗಿ ವೀರಶೈವ ಧರ್ಮವು ಬೆಳಕಿಗೆ ಬಂದಿತು. ಹೀಗೆ ವೀರಶೈವ ಧರ್ಮವನ್ನು ಬೆಳಕಿಗೆ ತಂದ ವೀರನು ಆಗಿನ ಕನ್ನಡ ನಾಡಿನ ಅರಸನಿಗೆ ಮುಖ್ಯ ಮಂತ್ರಿಯಾಗಿದ್ದನು. ಅವನು ಕನ್ನಡಿಗನೂ ಆಗಿದ್ದನು. ಆದುದರಿಂದ ಈ ಹೊಸ ವೀರ ಧರ್ಮದ ಪ್ರಮಾಣ ಗ್ರಂಥಗಳು ಕನ್ನಡದಲ್ಲಿ ತಲೆದೋರಿದರೆ ಅದರಲ್ಲಿ ಆಶ್ಚರ್ಯವೇನು? ಈಗಿರುವಂತೆಯೇ ಆಗ ಕನ್ನಡನಾಡು ಹೊಸ ಧರ್ಮದ ಬೀಡಾಯಿತು. ಹೊಸ ಧರ್ಮವು ವೀರತೆಯಿಂದ ರೂಪಗೊಂಡ ಬಿಡಗುಬಿನ್ನಾಣಗಳು ಇಂತಿವೆ. ವೀರಶೈವ ಧರ್ಮವೆಂಬ ಹೆಸರನ್ನು ಅದು ಹೇಗೆ ಪಡೆಯಿತು ಎಂಬ ಮಾತಿಗೆ ಉತ್ತರವು ಇಲ್ಲಿದೆ. ಬಸವಣ್ಣನು ಸಣ್ಣದೊಂದು ರಾಜ್ಯದ ಮುಖ್ಯ ಮಂತ್ರಿಯಾಗಿದ್ದರೂ ದೊಡ್ಡದೊಂದು ಧರ್ಮದ ಅರಸನಾಗಿದ್ದನು ಎಂಬುವ ಬಗೆಯೂ ಇದರಿಂದ ಗೊತ್ತಾಗುತ್ತದೆ." (ಲಿಂಗಧಾರಣ ಚಂದ್ರಿಕೆ ಪ್ರಸ್ತಾವನೆ ಪುಟಗಳು ೪೧೫-೪೧೬)

ಲಿಂಗವಂತ ಧರ್ಮವು ಕನ್ನಡ ನಾಡಿನ ವೀರಶೈವರು ಅನುಸರಿಸಿರುವ ಮತ್ತು ಅವಲಂಬಿಸಿರುವ ಧರ್ಮವು; ಬಸವಣ್ಣನು ಈ ಹೊಸ ಧರ್ಮವನ್ನು ಸಂಸ್ಥಾಪಿಸಿದನು, ಮತ್ತು ವಚನಶಾಸ್ತ್ರವು ಈ ಹೊಸ ಲಿಂಗವಂತ ಧರ್ಮದ ತತ್ತ್ವಗಳನ್ನು ತಿಳಿಯಪಡಿಸುವ ಧರ್ಮಗ್ರಂಥವು—ಎಂಬ ಮೂರು ಮಾತುಗಳನ್ನು ಸಿದ್ಧಿಸುವದಕ್ಕಾಗಿಯೇ ಪ್ರೊಫೆಸರ ಸಾಖರೆ ಅವರ ಪರಿಶ್ರಮದ ಫಲವಾಗಿ ದೊರೆತಿದ್ದರೂ ಈ ಮೂರು ಮಾತುಗಳನ್ನು ಸಿದ್ಧಿಸುವದಕ್ಕಾಗಿಯೇ ನವಕಲ್ಯಾಣಮಠದ ಅಸ್ತಿತ್ವವುಂಟಾಗಿ ಅದು ಈ ಮುಂಚಿತವಾಗಿಯೇ ಅದಕ್ಕಾಗಿ ನಡಕಟ್ಟಿ ನಿಂತಿರುವುದೆಂಬುದನ್ನು ಅರಿತಿರಬೇಕು.

# ಚಾಮರಸನ ಪ್ರಭುಲಿಂಗಲೀಲೆ

ಲೇಖಕರು : ಶ್ರೀ ವೀ. ರು. ಕೊಪ್ಪಳ, ಎಂ. ಎ., ಬಿ. ಟಿ., ಧಾರವಾಡ

ಲಿಂಗವಂತ ಧರ್ಮಸಾಹಿತ್ಯದ ಐತಿಹ್ಯದಲ್ಲಿ ಸ್ಥೂಲಮಾನವಾಗಿ ಮೂರು ಕಾಲಗಳನ್ನು ಕಲ್ಪಿಸಬಹುದು. ಇವುಗಳಲ್ಲಿ ಮೊದಲನೆಯದು ವಚನ ರಚನೆಯ ಬಸವ ಯುಗವು; ಎರಡನೆಯದು ವಚನ ಪರಿಶ್ರಮದ ವಿಜಯನಗರದ ಅರಸರ ಕಾಲವು; ಮೂರನೆಯದು ವಚನಗಳ ಮನ್ನಣೆಯ ಸದ್ಯದ ಸಮಯವು. ಬಸವಯುಗದಲ್ಲಿ ಆಗಮ ಪರಿಜ್ಞಾನಕ್ಕಿದ್ದ ಕೊರತೆಯನ್ನು ತುಂಬಿಕೊಂಡು ಅನುಭವವು ಅಂಗವಿಸುವ ಸಾಧನೆಗಳನ್ನು ಅನುಭವಿಗಳು ಕಂಡುಕೊಂಡುದಾಯಿತು ಅನುಭವವು ಅಳವಡುತ್ತ ಸಾಗಿರಲು ಆ ಶಿವಶರಣರಿಂದ ಹೊರಹೊಮ್ಮಿದ ದಿವ್ಯ ಪ್ರಸಾದವಾಣಿಯೇ ವಚನ ಭಾಂಡಾರವಾಯಿತಷ್ಟೇ! ಬಸವಾದಿ ಶಿವಶರಣರಿಗೆ ಇದ್ದ ಅತ್ಯಲ್ಪ ವೇಳೆಯಲ್ಲಿ ಆಗಮಕಾರರಿಗೆ ಹೊಳೆದ ಅನುಭವವನ್ನು ತಮ್ಮ ಅಂಗಕ್ಕೆ ಇಳಿಸಿಕೊಳ್ಳಬೇಕಾಗಿದ್ದುದರಿಂದ, ತಮ್ಮ ಈ ಪ್ರಸಾದವಾಣಿಯನ್ನು ಕ್ರೋಢೀಕರಿಸಿಕೊಂಡು ಇಟ್ಟುಕೊಳ್ಳುವುದೂ ಮತ್ತು ಅದನ್ನು ತಮ್ಮ ದಿನದ ವ್ಯವಹಾರದಲ್ಲಿ ಎದುರಿಟ್ಟು ಅನುಭವಮಾರ್ಗದಲ್ಲಿ ತಮಗಿರುವ ಕೊರತೆಯನ್ನು ಕಡಮೆ ಮಾಡಿಕೊಳ್ಳುವುದೂ ಅವರಿಗೆ ಮುಖ್ಯವಾದ ಕಾರ್ಯಗಳಾಗಿದ್ದುವು. ಕೂಡಿಟ್ಟುಕೊಂಡ ವಚನಗಳಿಗೆ ಮೂರ್ತಸ್ವರೂಪವನ್ನು ಕೊಟ್ಟು ಅವುಗಳ ಸ್ಥಲಕಟ್ಟಿನ ಯೋಜನೆ ಮಾಡಿಕೊಳ್ಳುವುದು ಅವರ ಮಣಿಹವಾಗಿದ್ದಿಲ್ಲ. ಅದಕ್ಕೆ ಬೇರೊಂದು ಸಮಯವೇ ಬೇಕಾಗಿದ್ದಿತು. ಪರಿಸ್ಥಿತಿಯು ಪೆಟ್ಟಿನಲ್ಲಿ ಶಿವಶರಣರು ಬೇಗನೆ ಓರೆಯಾಗಬೇಕಾದುದರಿಂದ ಅವರ ಅನುಭವವನ್ನು ಅವರಂತೆ ಸುವ್ಯವಸ್ಥಿತವಾಗಿ ಕಾಯ್ದುಕೊಂಡು ಹೋಗುವ ಅರುಹಿನ ಮಹಂತರು ಸಮಾಜಕ್ಕೆ ಸಿಗಲಿಲ್ಲ. ಆದುದರಿಂದ ಎರಡು ಮೂರು ನೂರು ವರುಷಗಳಲ್ಲಿ ಶಿವಶರಣರು ಕಟುತರವಾಗಿ

ಖಂಡಿಸಿದ ಪೂರ್ವಾಶ್ರಯದ ಕಡೆಗೆ ಸಮಾಜದ ದೃಷ್ಟಿಯು ಸಾವಕಾಶವಾಗಿ ತಿರುಗ ತೊಡಗಿತು. ಆಗ ಸುರುವಾಗಬೇಕಾಯಿತು ಶಿವಶರಣರ ಪವಾಡಗಳನ್ನು ವರ್ಣಿಸಿ, ಸಮಾಜವನ್ನು ಬೆರಗುಗೊಳಿಸಿ, ಕೃತ್ರಿಮ ರೀತಿಯಿಂದ ಹರಿದು ಹಂಚಿಹೋಗ ದಂತೆ ಅದನ್ನು ಕಾಯ್ದುಕೊಂಡು ಹೋಗುವ ಸಾಹಸವು. ಕೇವಲ ಪವಾಡಗಳಿಂದ ಮತ್ತು ಪವಾಡಗಳ ವರ್ಣನೆಗಳಿಂದ ಸಮಾಜ ಹಿತಸಾಧನೆ ಮತ್ತು ಧರ್ಮಜಾಗ್ರತೆ ಉಂಟಾಗುವದೆಂಬುದು ಆಗಿನ ದೃಷ್ಟಿಗೆ ಹೊಳೆದಿರಬೇಕು. ೧೩-೧೪ನೆಯ ಶತಮಾನ ದಿಂದೀಚೆಗೆ ರಚಿತವಾಗಹತ್ತಿದ ವೀರಶೈವರ ಗ್ರಂಥಗಳಲ್ಲಿ ಅರುಹಿನ ಮಹಂತರ ಜೀವನ ಚರಿತ್ರೆಗಳು ಪವಾಡಗಳಿಂದ ತುಂಬಿರುವದೂ ಮತ್ತು ಈ ಪವಾಡಗಳಿಂದಲೇ ಅವರು ಘನವಂತರೆಂಬ ತಿಳಿಯು ಅವುಗಳಲ್ಲಿ ಒಡಮೂಡಿದುದೂ ಕಂಡುಬರುತ್ತಿದೆ. ಧರ್ಮತತ್ತ್ವಗಳ ವಿವರಣೆಯು ಪವಾಡಗಳಿಲ್ಲದೆ ಆಗುವಂತಿಲ್ಲ. ಈ ರೀತಿ ರಚನೆಯಾಗ ಹತ್ತಿದ ಗ್ರಂಥಗಳ ಜೊತೆಗೆ ಬಸವಾದಿ ಶಿವಶರಣರ ಸ್ಥಲಕಟ್ಟಿನ ಆಚರಣೆಗೆ ಅನು ಗುಣವಾದ ಅವರ ವಚನಗಳ ವಿಂಗಡಿಕೆಗೂ ಅವುಗಳ ವಿವರಣೆಗೂ ಒಂದೊಂದು ವಿಧವಾದ ಅವುಗಳ ಸಂಕಲನೆಗೂ ಆರಂಭವಾಗಿ ಆ ವಚನಗಳನ್ನು ಸಾಧ್ಯವಾದ ಒಂದು ರೀತಿಯ ಕ್ರಮದಲ್ಲಿ ಹೆಣೆದು ಆ ಕ್ರಮದ ದುಡಿಮೆಗೆ ನಿಲ್ಲುವುದಕ್ಕೂ, ಅದೇ ಬಗೆಯ ವಚನಗಳನ್ನು ರಚಿಸುವುದಕ್ಕೂ, ಅವುಗಳ ಭಾವವನ್ನು ಪದ್ಯಗಳಿಗೆ ಇಳಿ ಸುವುದಕ್ಕೂ ಮತ್ತು ಹಲಕೆಲವರ ವಚನಗಳನ್ನು ಹಾಗು ವಚನಗಳ ಭಾಗಗಳನ್ನು ಸಂಸ್ಕೃತ ಭಾಷೆಗೆ ಬದಲಿಸಿ ಅವುಗಳ ವಿವರಣೆಯನ್ನು ಸಂಸ್ಕೃತವಲ್ಲಿಯೇ ಬರೆದಿಡ ಲಿಕ್ಕೂ ಪ್ರಯತ್ನಗಳು ನಡೆದು ಹೀಗೆ ಸರ್ವತೋಮುಖವಾದ ಜನಜಾಗ್ರತೆಯುನ್ನುಂಟು ಮಾಡುತ್ತಿದ್ದ ಉದಾಹರಣೆಗಳು ಕಂಡುಬರುತ್ತಿವೆ. ಇಂಥ ಪ್ರಯತ್ನಗಳಲ್ಲಿ ಬಹು ಭಾಗವು ವಿಜಯನಗರದ ಅರಸರ ಕಾಲಕ್ಕೆ, ಹೆಚ್ಚಾಗಿ ಇಮ್ಮಡಿ ಪ್ರೌಢದೇವರಾಯನ (೧೪೧೯-೧೪೪೬) ಕಾಲಕ್ಕೆ ಜರುಗಿತು. ಇಮ್ಮಡಿ ಪ್ರೌಢದೇವರಾಯನ ಕಾಲವೆಂದರೆ ವಚನಸಾಹಿತ್ಯದ ಸುವರ್ಣಯುಗವೆನ್ನಬಹುದು. ರಾಜಾಶ್ರಯ, ರಾಜನನ್ನಾಶ್ರಯಿಸಿದ ಮಂತ್ರಿ ಮಾಂಡಲಿಕರ ಆಶ್ರಯ, ಇವರಿಗೆಲ್ಲ ಆಶ್ರಯಭೂತರಾಗಿ ಪ್ರಸಿದ್ಧರಾಗಿದ್ದ ೧೦೧ ವಿರಕ್ತರ ಆಶ್ರಯ, ಹೀಗೆಲ್ಲ ಬೆರೆತು ಕಾರ್ಯದ ಕಳೆಯು ಮಿತಿಮೀರಿ ಬೆಳೆಯಿತು. ಬಿಜ್ಜಳನ ಕಾಲದಲ್ಲಿ ಷಟ್ಸ್ಥಲ ಬ್ರಹ್ಮಿಗಳಿಗಿದ್ದ ಗೌರವವು ಪ್ರೌಢದೇವರಾಯನ ಕಾಲ ದಲ್ಲಿ ೧೦೧ ವಿರಕ್ತರಿಗೆ ಉಂಟಾಯಿತು. ಷಟ್ಸ್ಥಲ ಬ್ರಹ್ಮಿಗಳಿಂದ ಬೆಳೆದ ಸಮಾಜ ರಚನೆ ಹಾಗು ಅದರ ಹಿತ ಇವನ್ನು ಉಳಿಸಿಕೊಳ್ಳಲು ೧೦೧ ವಿರಕ್ತರು ಯತ್ನಿಸಿದುದ ರಿಂದ ಅವರ ಕೀರ್ತಿಧ್ವಜವು ಕರ್ಣಾಟಕವಲ್ಲೆಲ್ಲ ಮೆರೆಯಿತು. ಹೀಗೆ ತನ್ನ ಕೃತಿಯಿಂದ ಕೀರ್ತಿ ಧ್ವಜವನ್ನು ಮೆರೆಯಿಸಿದವರಲ್ಲಿ ಪ್ರಭುಲಿಂಗಲೀಲೆಯ ಕರ್ತೃವಾದ ಚಾಮರಸ ನೊಬ್ಬನು.

**ಚಾಮರಸನ ಜೀವನ ಚರಿತ್ರೆ**

ಈ ಚಾಮರಸನು ತನ್ನ ಕಾವ್ಯವಾದ ಪ್ರಭುಲಿಂಗಲೀಲೆಯಲ್ಲಿ ತನ್ನ ಮತ್ತು ತನ್ನ ತಂದೆ ತಾಯಿಗಳ ಹೆಸರು, ಸ್ಥಳ, ತನ್ನ ಗುರು, ತಾನು ಬರೆದ ಕಾವ್ಯ, ಅವುಗಳ ಕಾಲ, ಇಲ್ಲವೆ ತನ್ನ ಪೂರ್ವದ ಕವಿಗಳು ಮುಂತಾದ ಯಾವ ಸಂಗತಿಗಳ ಬಗ್ಗೆಯೂ ತಿಳಿಸಿಲ್ಲ; ಬಸವಾದಿ ಶಿವಶರಣರ ವಿಷಯವಾಗಿ ಮಾತ್ರ ಮುಕ್ತಕಂಠವಾಗಿ ಹೇಳಿದ್ದಾನೆ. ಉಪಲಬ್ಧವಿರುವ ಆಧಾರ ಗ್ರಂಥಗಳಿಂದ ಪ್ರಭುಲಿಂಗಲೀಲೆಯನ್ನು ಚಾಮರಸನೇ ಬರೆದನೆಂಬುದು ನಿರ್ವಿವಾದದ ಸಂಗತಿಯು. ಆದರೆ ಅವನು ಗದುಗಿನವನಿರಲಿ, ನಾಗಣಪುರದವನಿರಲಿ, ಭಾರತವನ್ನು ಬರೆದ ಕುಮಾರವ್ಯಾಸನೊಡನೆ ಆತನಿಗೆ ಬಾಂಧವ್ಯವಿರಲಿ ಇಲ್ಲದಿರಲಿ, ಅವನೊಬ್ಬ ಘನವಿರಕ್ತನೆಂದೂ ಉದ್ದನೆಯ ವೀರೇಶನಿಂದ ವೀರಶೈವೋಪದೇಶವನ್ನು ಪಡೆದನೆಂದೂ ಇಮ್ಮಡಿ ಪ್ರೌಢದೇವರಾಯನ ಮಂತ್ರಿಯಾದ ಜಕ್ಕಣಾರ್ಯನ ಆಶ್ರಮದಲ್ಲಿ ೧೦೧ ವಿರಕ್ತರ ಜೊತೆಗೆ ಬೆಳಕಿಗೆ ಬಂದನೆಂದೂ ತಿಳಿದು ಬರುವ ಸಂಗತಿಗಳು ಒಳ್ಳೆ ಮಾರ್ಮಿಕವಾದುವುಗಳು ಮತ್ತು ವಿಚಾರಕ್ಕೆ ಆಸ್ಪದವಾದುವುಗಳು ಆಗಿರುತ್ತವೆ. ಕವಿಗೆ ದೊರೆತ 'ಚಾಮ'ರಸು ಎಂಬ ಹೆಸರು ಕುಮಾರ ವ್ಯಾಸನೊಡನೆ ಆತನಿಗೆ ಇದ್ದಿರಬಹುದಾದ ಬಾಂಧವ್ಯ ಮತ್ತು ಉದ್ದನೆಯ ವೀರೇಶನಿಂದ ಆತನು ಪಡೆವ ವೀರಶೈವೋಪದೇಶ ಇವುಗಳೊಡನೆ ಗಮನಕ್ಕೆ ತಂದುಕೊಳ್ಳುವುದಾಗಿದೆ. ವೀರಶೈವೋಪದೇಶವನ್ನು ಪಡೆಯುವ ಮೊದಲು ಕವಿಯು ಭಾರತದ ಮೊದಲ ಸಂಧಿಗಳನ್ನು ಬರೆದಿದ್ದನೆಂದು ಅದೃಶ್ಯಕವಿ (ಸು. ೧೫೮೦) ಮತ್ತು ಶಂಕರಕವಿ (ಸು. ೧೭೭೩) ಇವರು ತಿಳಿಸುವ ವಿಷಯವು ವಿಮರ್ಶಕರ ಚಿತ್ತವನ್ನು ಇನ್ನಿಷ್ಟು ಎಳೆಯುವುದಾಗಿದೆ. ಕವಿಗೆ ಲಗ್ನವಾಗಿದ್ದಿತೆಂದು ಯಾವ ಗ್ರಂಥಗಳಿಂದಲೂ ತಿಳಿದು ಬರುವುದಿಲ್ಲ; ಅವೆಲ್ಲ ೧೦೧ ವಿರಕ್ತರಲ್ಲಿ ಒಬ್ಬನೆಂದೇ ತಿಳಿಸುತ್ತವೆ.

ಇವನ್ನೆಲ್ಲ ಎದುರಿಟ್ಟುಕೊಂಡು ಆಲೋಚಿಸಿದರೆ ವೀರಶೈವೋಪದೇಶವನ್ನು ಕೈಕೊಳ್ಳುವ ಮೊದಲು ಜೈನ ಕವಿಗಳಂತೆ ಲೌಕಿಕ ಪ್ರಸಿದ್ಧಿಗಾಗಿ ಜನಸಾಮಾನ್ಯಕ್ಕೆ ಪ್ರಿಯವಾದ ಭಾರತವೊಂದನ್ನು ಕವಿಯು ಬರೆದಿರಬೇಕೆಂದೂ, ಅವನಿಗೆ 'ಶ್ಯಾಮ'ನೆಂಬ ಹೆಸರು ಇದ್ದಿರಬೇಕೆಂದೂ, ಈ ಹೆಸರಿನಿಂದ ಯಾವುದಾದರೊಂದು ಗ್ರಾಮದ ಗ್ರಾಮಣೀಮಣಿಯಾಗಿದ್ದಿರಬೇಕೆಂದೂ, ತನ್ನ ಕಾವ್ಯವು ಅದು ಹೇಗೋ ನಾಶವಾದ ಬಳಿಕ ಲೌಕಿಕದಲ್ಲಿ ಮತ್ತು ಲೌಕಿಕ ಘನತೆಯಲ್ಲಿ ಜುಗುಪ್ಸೆ ಹುಟ್ಟಿ, ವೈರಾಗ್ಯವನ್ನು ತಾಳಿ(ವೈರಾಗ್ಯಮೂರ್ತಿಯಾದ ಅಲ್ಲಮ ಪ್ರಭುವಿನ ಚರಿತ್ರೆಯನ್ನು ಕವಿಯು ಬರೆದುದು ಇದಕ್ಕೊಂದು ನಿದರ್ಶನವಾಗಲಿಕ್ಕಿಲ್ಲವೇ ?) ತನ್ನ ಸ್ಥಾನವನ್ನು ಬಿಟ್ಟು, ವಿಜಯನಗರದಲ್ಲಿಯೇ ವಾಸಿಸುತ್ತ ತನ್ನ ಪೂರ್ವಾಶ್ರಯವನ್ನು ಹಿಂಗಿಸಿಕೊಂಡು, ಉಪದೇಶವನ್ನು ಹೊಂದಿ, ೧೦೧ ವಿರಕ್ತರ ಮಾಲಿಕೆಯಲ್ಲಿ ಸೇರಿದನೆಂದೂ ಊಹಿಸಬಹುದು.

ವಿಜಯನಗರದ ರಾಜ್ಯಸ್ಥಾಪಕರ ಮತ್ತು ಅರಸರ ಗುರು-ಮಂತ್ರಿ ಇವರ ಪಾರಂಪರ್ಯವನ್ನು ವಿಚಾರಿಸಿದರೆ ಅದೃಶ್ಯಕವಿಯು ಹೇಳುವಂತೆ ಕವಿಯು ವಿರಕ್ತನಾದ ಜಕ್ಕಣಾರ್ಯನ ತರುವಾಯ ಇಮ್ಮಡಿ ಪ್ರೌಢದೇವರಾಯನ ಮಂತ್ರಿಯಾಗಿ ಬಾಳಿ ಧರ್ಮ ರಾಜ್ಯ ಸೂತ್ರಗಳೆರಡನ್ನು ನಡೆಯಿಸಿಕೊಂಡು ಹೋಗಿರಲು ಸಾಕು.

ಕವಿಯ ಆಧ್ಯಾತ್ಮಿಕ ಜೀವನದ ಬಗ್ಗೆ ಮತ್ತು ಆಧ್ಯಾತ್ಮ ಸಂಗತಿಗಳಲ್ಲಿ ಅವನಿಗಿರುವ ಪವಿತ್ರಭಾವ ಪಾಂಡಿತ್ಯ ಪ್ರೌಢಿಮೆ ಇವುಗಳ ಬಗ್ಗೆ ಪ್ರಭುಲಿಂಗಲೀಲೆಯು ಅನೇಕ ಸಂಗತಿಗಳನ್ನುತಿಳಿಸುತ್ತದೆ. ಪೂರ್ವಾಶ್ರಯವು ನಿರಸನವಾದ ಹೊರತು ಲಿಂಗದ ಅರಿವು ಅಂಗವಿಸದೆಂದು, ಪ್ರಗತಿಪರವಾದ ಆತ್ಮನಿಗೆ ಪೂರ್ವಾಶ್ರಯದಂಥ ತಡೆಯು ಬೇರೊಂದು ಇಲ್ಲವೆಂದು, ಪೂರ್ವಾಶ್ರಯಕ್ಕೆ ಅಂಟುವದೆಂದರೆ ಮಾಯೆಯ ಕಾಲ ತೊಡರಿಗೆ ಸಿಕ್ಕಿಕೊಂಡಂತೆ ಎಂದು ವಚನಶಾಸ್ತ್ರದ ಉಚ್ಚತಮವಾದ ಬೋಧೆಯು. ಕವಿಯು ಇದನ್ನು ಚೆನ್ನಾಗಿ ಅರಿತವನಾಗಿದ್ದನು. ತನ್ನ ಕಾವ್ಯವನ್ನು ಬರೆಯುವ ಮೊದಲು ತಾನು ಏನನ್ನು ಸಾಧಿಸಿಕೊಳ್ಳಬೇಕು, ಸಾಧಿಸಿಕೊಂಡು ಏನನ್ನು ಸಿದ್ಧಿಸಬೇಕು ಎಂಬವುಗಳು ಅವನಿಗೆ ತುಂಬ ಮನವರಿಕೆಯಾಗಿದ್ದುವು. ವಚನಶಾಸ್ತ್ರದಲ್ಲಿ ಅವನಿಗೆ ತುಂಬ ಗತಿಯಿದ್ದಿತು. ಅದರ ತಿರುಳನ್ನು ತನ್ನ ನಿತ್ಯದ ಜೀವನಕ್ಕೆ ತಿರುಗಿಸಿಕೊಂಡು, ಪೂರ್ವಾಶ್ರಯವನ್ನು ಹರಿದುಕೊಂಡು, ಪ್ರಸಾದವನ್ನು ಪಡೆದುಕೊಂಡು, ಕಲ್ಯಾಣದ 'ಭಕ್ತಿಭಾಂಡಾರಿ'ಯ ಅನುಭವ ಮಂಟಪದಂತಿದ್ದ ವಿಜಯನಗರದ 'ಭಕ್ತಿಭಾಂಡಾರಿ' ಜಕ್ಕಣಾರ್ಯನ ನೇತೃತ್ವದಲ್ಲಿ ನಡೆದ ಅನುಭವಮಂಟಪದಲ್ಲಿ ಸೇರಿ,ವಿರತಿಯ ಮೂರುತಿಯಾದ ಅಲ್ಲಮಪ್ರಭುವಿನ ಮತ್ತು ಆತನ ವಚನಗಳ ಬಗ್ಗೆ ವಿರತರಲ್ಲಿ ಪ್ರಮುಖರಾದವರು ಸಲ್ಲಿಸಿದ ಸೇವೆಯಲ್ಲಿ ತಾನೂ ತನ್ನ 'ಬಡನುಡಿ'ಯಿಂದ ಘನವಾದ ಸೇವೆಯನ್ನು ಸಲ್ಲಿಸಿ ಧನ್ಯನಾದನು. ಕವಿಯು ತನ್ನ ಕಾವ್ಯದ ಗತಿ ಒಂದೊಂದರಲ್ಲಿ ತಿಳಿಸುವ ಸಂಗತಿಗಳನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದವನಾಗಿದ್ದನಲ್ಲದೆ ಆ ಅಭ್ಯಾಸದಲ್ಲಿ ವಚನ ವಾಙ್ಮಯದ ಅನುಭವದ ತಿರುಳೂ ಬೆರೆತುಕೊಂಡಿತ್ತು. ಅಂತೆಯೇ ತಾನು ತಿಳಿಸಬೇಕೆನ್ನುವ ವಿಷಯಗಳಿಗೆ ಪೋಷಕವಾಗಿ ವಚನಭಾಂಡಾರದ ರತ್ನಗಳ ಬೆಳಕನ್ನು ಪೂರೈಸುವನು.

ಪ್ರಭುಲಿಂಗಲೀಲೆಯು ತಮಿಳು, ತೆಲಗು, ಸಂಸ್ಕೃತ, ಮರಾಠಿ ಇವೇ ಮೊದಲಾದ ಭಾಷೆಗಳಿಗೆ ಪರಿವರ್ತನೆ ಹೊಂದಿರುವ ವಿಷಯವು ಸಾಹಿತಿಗಳಲ್ಲಿ ತತ್ತ್ವ ಜಿಜ್ಞಾಸುಗಳಲ್ಲಿ ಮತ್ತು ಜನಸಾಮಾನ್ಯರಲ್ಲಿ ಅದಕ್ಕಿರುವ ಗೌರವ ಆದರಗಳನ್ನು ಸೂಚಿಸುವುದು. ಕವಿಯು ಕಾವ್ಯವ ಬರೆದು ಕೀರ್ತಿವಡೆಯಬೇಕೆಂದು ಕೋರುವದಿಲ್ಲ. ಕಾವ್ಯದೃಷ್ಟಿಯಿಂದ ಆವಶ್ಯಕವಾದ ೧೮ ವರ್ಣನೆಗಳೂ ಮತ್ತು ಉಪವರ್ಣನೆಗಳೂ ಕವಿಗೆ

**ಕಾವ್ಯದ ಉದ್ದೇಶ**

ಗಮ್ಯ ವಿಷಯಗಳಲ್ಲ. ಆದರೂ ಇವುಗಳಲ್ಲಿ ಹಲಕೆಲವಾದರೂ ಪ್ರಭುಲಿಂಗಲೀಲೆಯಲ್ಲಿ ಇಲ್ಲದೆ ಇಲ್ಲ. ಪ್ರಭುವಿನ ಚರಿತ್ರೆಯನ್ನು ಹೇಳಿ ಪುನೀತನಾಗಬೇಕೆಂದೂ ತತ್ತ್ವದ ತಿರುಳನ್ನು ತಿಳಿಸಿ ವಿನೀತನಾಗಬೇಕೆಂದೂ ಅವನಿಗೆ ಹಿರಿಯ ಆಸೆ. ಲಿಂಗವಂತರಿಗೆಲ್ಲ ಪೂಜ್ಯರಪ್ಪ, ಶಿವಶರಣರಿಗೆ ಇಷ್ಟಮೂರ್ತಿಯಾದ, ಮಾಯಾಕೋಳಾಹಳ ಅಲ್ಲಮಪ್ರಭುವಿನ ಚರಿತ್ರೆಯನ್ನು ಹಾಗು "ಅಲ್ಲಮಪ್ರಭು ಸಾಂಪ್ರದಾಯದ ಸಲ್ಲಲಿತ ಸನ್ಮಾರ್ಗವ"ನ್ನು ತಿಳಿಸುವುದೇ ಆತನಿಗೆ ಬೇಕಾಗಿರುವ ಸಂಗತಿ. ಕಾಳೆಗದ ಕಥೆಯಲ್ಲಾಗಲಿ ವಿಷಯಗಳ ಏಳಿಗೆಯ ವಿಧಿಯಲ್ಲಾಗಲಿ ಹೊಟ್ಟೆಯ ಹೊಳಲಿಕೆ ಮಾಡುವ ಹೊಲಬಿನಲ್ಲಾಗಲಿ ಅವನಿಗೆ ತುಂಬ ಅನಾದರ. ಅವನಿಗೆ ಸತ್ತವರ ಕಥೆ ಸೇರದು; ಕರ್ಮದ ಕತ್ತರಿಗೆ ಸಿಲ್ಕುವರ ಕೋಟಲೆ ಕೂಡದು; ಪುಂಡರಾಲಿಪ ಗೋಷ್ಠಿಯೆಂದರೆ ಮುನ್ನವೇ ಆಗದು. ಅಂತರಂಗದ ಕಲಿಗಳ ಕರಣಗಳಲ್ಲಿ ನಡೆದಿರುವ ಕಾಳೆಗದ ವರ್ಣನೆಯೂ, ಕುಂಡಲಿನಿಯ ಯೋಗ ಶಕ್ತಿಯೊಡನೆ ಯೋಗಿಯು ಭೋಗಿಪ ಸಂಗಸುಖದ ವರ್ಣನೆಯೂ, ಚಿದಾಕಾಶದ ನಿಬ್ಬೆರಗಿನ ಬಯಲಲಿ ಶರಣನು ಪಡೆವ ಅರಿವಿನ ಆನಂದದ ವರ್ಣನೆಯೂ ಅವನಿಗೆ ಬೇಕಾಗಿರುವ ವಿಷಯ. ಅಲ್ಲಮಪ್ರಭುವಿನ ಚರಿತ್ರೆಯ ಹೊದಿಕೆಯಲ್ಲಿ ಇವನ್ನೆಲ್ಲ ಅವನು ಹುದುಗಿಸಿರುವನು. ಬೆರಗುಗೊಳಿಸುವ ಪವಾಡಗಳ ವರ್ಣನೆಗಳಿಂದ ಕಥಾನಾಯಕನ ಆದರ್ಶ ಜೀವನವನ್ನು ಬಣ್ಣಿಸಬೇಕೆಂಬ ಪುರಾಣಕಾರರ ದೃಷ್ಟಿಯು ಕವಿಗೆ ಎಳ್ಳನಿತು ಇಲ್ಲ.

ಪ್ರಭುದೇವರ ವಿಷಯವಾಗಿ ಸ್ವತಂತ್ರವಾದ ಗ್ರಂಥವನ್ನು ಮೊದಲು ಬರೆದವನು ಹಂಪೆಯ ಹರೀಶ್ವರನು. ಹರೀಶ್ವರನಿಗೆ ಭೂಲೋಕಕ್ಕಿಂತ ಕೈಲಾಸವು

**ಪ್ರಭುದೇವರ ಕನ್ನಡ ಚರಿತ್ರೆಗಳು**

**(೧) ಪ್ರಭುದೇವರ ರಗಳೆ ಪ್ರಭುಲಿಂಗಲೀಲೆ**

ಮಿಗಿಲು. ಆದುದರಿಂದ ಅಲ್ಲಿ 'ನಿರ್ಮಾಯ' ಶರಣನು ಸುರಸತಿಯೊಬ್ಬಳನ್ನು ನೋಡಿ ಇಮ್ಮನವಾದ ತಪ್ಪಿಗೆ ಭೂಮಿಯಲ್ಲುದಿಸಿದನೆಂದು ಅವನು ಹೇಳುತ್ತಾನೆ. ನಿರ್ಮಾಯನ ತಂದೆತಾಯಿಗಳ ಹೆಸರನ್ನು ಹರೀಶ್ವರನು ಹೇಳುವದಿಲ್ಲ. ನಿರ್ಮಾಯನು ಜನಿಸಿ ಒಬ್ಬ ಸಾಮಾನ್ಯನಂತೆ ಬೆಳೆದು ಬಾಳಿ ಕಾಮಲತೆ ಎಂಬವಳನ್ನು ಮೋಹಿಸಿ ಮದುವೆನಿಂದು, ಅವಳ ಅಗಲಿಕೆಯಲ್ಲಿ ಕಳವಳಿಸಿ ಕಣ್ದೆರೆದು ಶಿವಲಿಂಗ ಪೂಜೆಗೆ ಸಾರಿ ಶಿವನ ಸುಜ್ಞಾನದನುಭವವ ಪಡೆದು ನಿರ್ಮಳ ಸಿದ್ಧನೆನ್ನಿಸಿಕೊಳ್ಳುವನು. ದಿವ್ಯ ಕ್ಷೇತ್ರಗಳ ನೋಡುವ ಬಯಕೆಯಿಂದ ಬಸವ ಸಿದ್ಧರಾಮ ಮುಖ್ಯರಾದ ಶಿವಶರಣರ ದರ್ಶನವನ್ನು ಮಾಡಿಕೊಳ್ಳುವನು. ಭೈರವ ಭೂತ ಬೇತಾಳರ ವಿಷಕನ್ಯೆಯರ ಸಾವಿಲ್ಲದಿಪ್ಪ ಸಿದ್ಧರ ಕಂಡು ಕೈಲಾಸವನ್ನು ಹೊಗುವನು. ಹರೀಶ್ವರನ ಈ ಕಥೆ

ಯಲ್ಲಿ ಚಾಮರಸನ ತತ್ತ್ವನಿರೂಪಣೆಯಿಲ್ಲ; ಕಥೆಗೆ ಪೋಷಕವಾದ ಶರಣರ ವೃತ್ತಾಂತವಿಲ್ಲ; ಶರಣರಲ್ಲಿ ಅಲ್ಲಮಪ್ರಭುವಿಗಿರುವ ಗೌರವವೂ ಅಲ್ಲಿ ಕಂಡು ಬರುವುದಿಲ್ಲ. ಚಾಮರಸನಿಗೆ ಮಾತ್ರ ಹರೀಶ್ವರನ ಈ ವಿಚಾರಗಳಲ್ಲಿ ನಂಬುಗೆಯಿಲ್ಲ. ಅವನಿಗೆ ಕೈಲಾಸದೊಳಗಿನ **ನಿರ್ಮಾಯನ ಕಾಮಪರವಶತೆಯೂ** ಇಲ್ಲ. ತಪ್ಪಿಗಾಗಿ ಸ್ಥಾನ ಭ್ರಷ್ಟತೆಯೂ ಇಲ್ಲ; ಸುಜ್ಞಾನಿಗಳಾಗಿ ನಿರಹಂಕಾರವೆಂಬುಗೊಂಡ ಅನುಭವಿಗಳಾದ ಸತಿಪತಿಗಳಿಗೆ ಅಲ್ಲಮನು ಅನುಭವದ ಶಿಶುವಾಗಿ ಬರುವನೆಂದು ಅವನ ನಂಬುಗೆ. ಕಥಾನಾಯಕನ ಘನತೆಯನ್ನು, ಅವನ ಭವ್ಯಚರಿತ್ರೆಯನ್ನು ಮತ್ತು ಅವನ ದಿವ್ಯಸಂದೇಶವನ್ನು ತಿಳಿಸಲು ಅವಶ್ಯವಿರುವ ಹಿತವಾದ ಮಿತವಾದ ಸಂಗತಿಗಳನ್ನು ಆಯ್ದುಕೊಂಡು ಚಾಮರಸನು ಕಥೆಯ ಹಾಸಿಗೆ ತತ್ತ್ವದ ಹೊಕ್ಕನ್ನು ಬಳಸಿರುವನು. ಕೈಲಾಸದಲ್ಲಿ ನಿರ್ಮಾಯನಾದವನು ಸಾಮಾನ್ಯನಂತೆ ಮೋಹಪರವಶನಾದ ತಪ್ಪಿಗಾಗಿ ಭೂಮಿಯಲ್ಲಿ ಜನಿಸಿ ಸಾಮಾನ್ಯ ಜೀವಿಯಂತಿದ್ದು ಸಿದ್ಧಾವಸ್ಥೆಗೆ ಬಂದನೆಂಬ ಹರೀಶ್ವರನ ಪುರುಷಪ್ರಯತ್ನವಾದವನ್ನಷ್ಟು ಆರಿಸಿಕೊಂಡರೆ ಹರೀಶ್ವರನ ಕಥೆಯ ಸ್ವಾರಸ್ಯಕ್ಕೆ ಮುಗಿತಾಯವಾದಂತಾಯಿತು.

ಚಾಮರಸನ ಪ್ರಭುಲಿಂಗಲೀಲೆಯು ರಚಿತವಾದ ಬಳಿಕ ಪ್ರಭುದೇವರ ಬಗ್ಗೆ ಅನೇಕರು ಬರೆದಿದ್ದಾರೆ. ಅವೆಲ್ಲ ಹೆಚ್ಚು ಕಡಮೆ ಚಾಮರಸನ ಕಥೆಯನ್ನೇ ಅನುಸರಿಸುತ್ತಿವೆ. ಪ್ರಭುದೇವರ ಪುರಾಣವನ್ನು ಬರೆದ

**(೨) ಪ್ರಭುಲಿಂಗಲೀಲೆ** ಎಳಂದೂರ ಹರೀಶ್ವರನು (ಸು. ೧೬೦೬) ಚಾಮರಸನ ಕಥೆ **ಪ್ರಭುದೇವರ ಪುರಾಣ** ಯನ್ನೇ ಆಧಾರವಾಗಿಟ್ಟುಕೊಂಡಿದ್ದರೂ ಇವರಿಬ್ಬರ ಕಥಾನಿರೂಪಣೆಯ ಉದ್ದೇಶದಲ್ಲಿ ಒಡೆದು ಕಾಣುವ ಭಿನ್ನತೆಯಿದೆ. ಚಾಮರಸನು ಪ್ರಭುಕೀರ್ತಿಗಾಗಿ ಕಾವ್ಯವ ರಚಿಸಿದರೆ ಹರೀಶ್ವರನು ವಿದ್ವಜ್ಜನಕೀರ್ತಿಗಾಗಿ ತನ್ನ ಕಾವ್ಯವ ರಚಿಸುವನು. ಇದಕ್ಕಾಗಿ ಚಾಮರಸನು ಉರಃಸಂಸ್ಕಾರದ್ಯೋತಕವಾದ ಭಕ್ತಿಯ ತಳಹದಿಯ ಮೇಲೆ ಅನುಭವಸಂಗ್ರಹ ಮಾಡುವ ಪಾರಲೌಕಿಕ ಗುರಿಯನ್ನಿಟ್ಟುಕೊಂಡರೆ, ಹರೀಶ್ವರನು ಶಿರಃಸಂಸ್ಕಾರದ್ಯೋತಕವಾದ ಬುದ್ಧಿಯ ತಳಹದಿಯ ಮೇಲೆ ಕಥಾಸಂಗ್ರಹವ ಮಾಡುವ ಲೌಕಿಕ ಗುರಿಯನ್ನಿಟ್ಟುಕೊಂಡಿರುವನು. ಈ ದೆಸೆಯಿಂದ ಪ್ರಭುಲಿಂಗಲೀಲೆಯು ಕನ್ನಡ ದೇಶ್ಯ ತದ್ಭವ ಪದಗಳಿಂದ ಬೆರೆತುದು. ಪ್ರಭುದೇವರ ಪುರಾಣವು ಸಂಸ್ಕೃತ ಪದಭೂಯಿಷ್ಠವಾದುದು; (ಸ್ತುತಿ ಪದ್ಯಗಳಲ್ಲಿ ಇದು ಹೆಚ್ಚಾಗಿ ಒಡೆದು ಕಾಣುವಂತಿದೆ.) ಮಾಯೆಯ ವೃತ್ತಾಂತವನ್ನಷ್ಟು ಬಿಟ್ಟರೆ ಸ್ವಾಭಾವಿಕ ಐತಿಹಾಸಿಕ ಸಂಗತಿಗಳ ನಿರೂಪಣೆಯಲ್ಲಿ ತನ್ನ ಕಾಲದಲ್ಲಿ ಪ್ರಚಲಿತವಿರುವ ತತ್ತ್ವದ ಬೆರಕೆಯಿಂದ ಚಾಮರಸನು ಕಥೆಯ ಓಟವನ್ನು ಸಾಗಿಸುವನು. ಹರೀಶ್ವರನು ಮಾತ್ರ ಅನೇಕ

ಕೃತಕವಾದ ಸಂಗತಿಗಳನ್ನು ತಿಳಿಸಿ ತನಗೆ ಗೊತ್ತಿದ್ದ ಅನೇಕ ಕಥೆಗಳನ್ನು ಸೇರಿಸಿ ಕಥೆಯು ಬೆಳೆಯುವಂತೆ ಮಾಡಿರುವನು. ಚಾಮರಸನ ಕಥೆಯಲ್ಲಿ ಕಥೆಗೆ ಬೇಕಾಗು ವಷ್ಟು ಶಿವಶರಣರ ಉಲ್ಲೇಖವಿದೆ. ಹರೀಶ್ವರನ ಕಥೆಯಲ್ಲಿ ಕವಿಗೆ ಗೊತ್ತಿರುವಷ್ಟು ಶಿವಶರಣರ ಹೆಸರುಗಳು ಬಂದಿವೆ. ಕಥೆ ಬೆಳೆಸುವ ನೆವದಿಂದ ಎಷ್ಟೋ ಕಡೆಗೆ ದ್ವಿರುಕ್ತಿ ದೋಷವೂ ಉಂಟಾಗಿದೆ. ಪ್ರಭುಲಿಂಗಲೀಲೆಯಲ್ಲಿ ಪವಾಡಗಳ ಸುದ್ದಿಯೇ ಇಲ್ಲ. ಪ್ರಭುದೇವರ ಪುರಾಣದಲ್ಲಿ ಕವಿಯು ಅನೇಕ ಪವಾಡಗಳನ್ನು ವರ್ಣಿಸಿರುವನು. ಚಾಮರಸನಿಗೆ ಶೂನ್ಯಸಿಂಹಾಸನವು ಹೃದಯದಲ್ಲಿದೆ. ಹರೀಶ್ವರನಿಗದು ಅಸಿ (ಖಡ್ಗ) ಪೀಠದಲ್ಲಿದೆ. 'ಅಲ್ಲಮ' ಶಬ್ದದ ನಿರ್ವಚನೆಯ ಸ್ವಾರಸ್ಯವು ಪ್ರಭುಲಿಂಗಲೀಲೆಯಲ್ಲಿ ದ್ದಷ್ಟು ಪ್ರಭುದೇವರ ಪುರಾಣದಲ್ಲಿಲ್ಲ. ಪ್ರಭುಲಿಂಗಲೀಲೆಯಲ್ಲಿ ಪ್ರಭುಸಂದೇಶದ ಮತ್ತು ಪ್ರಭುವಿನ ಮಣಿಹದ ಸ್ಪಷ್ಟವಾದ ಉಲ್ಲೇಖವಿದೆ. ಪ್ರಭುದೇವರ ಪುರಾಣದಲ್ಲಿ ಅದು ಇಲ್ಲ. ಚಾಮರಸನು ವಚನಶಾಸ್ತ್ರದ ಆಳವಾದ ಅಭ್ಯಾಸವನ್ನು ಮಾಡಿ ಅದರ ವಿಚಾರವನ್ನು ಅರಗಿಸಿಕೊಂಡು ಅದನ್ನು ಕಾವ್ಯಮುಖಕ್ಕೆ ಇಳಿಸಿರುವನು. ಹರೀಶ್ವರನು ಅತ್ಯಲ್ಪವಾಗಿ ವಚನಗಳ ತತ್ತ್ವವನ್ನು ಉಪಯೋಗಿಸಿಕೊಂಡಿರುವನು. ಪ್ರಭುಲಿಂಗ ಲೀಲೆಯಲ್ಲಿಯ ಪ್ರಭು ಮತ್ತು ಮಹಾದೇವಿ ಅಕ್ಕ ಇವರಲ್ಲಿರುವ ಭಕ್ತಿಭಾವದ ಬೆಸುಗೆಯ ಔಚಿತ್ಯವು ಪ್ರಭುದೇವರ ಪುರಾಣದಲ್ಲ ಕಾಣುವುದಿಲ್ಲ. ಚಾಮರಸನು ೨೫ ಗತಿಗಳಲ್ಲಿ ಕಥೆ ಹೇಳಿದ್ದರೂ ಪ್ರತಿ ಗತಿಯೂ ಮಿತವಾದ ಪದ್ಯಸಂಖ್ಯೆಯಿಂದ ಕೂಡಿಮದು. ಹರೀಶ್ವರನು ೯ ಸಂಧಿಗಳಲ್ಲ ಕಥೆ ಮುಗಿಸಲೆಳಿಸಿ ಅಪರಿಮಿತವಾದ ಪದ್ಯಗಳನ್ನು ಪ್ರತಿ ಸಂಧಿಯಲ್ಲಿ ಸೇರಿಸಿರುವನು. ಚಾಮರಸನು ಭಾಮಿನಿ ಷಟ್ಪದಿ ಗಳ ಹೊದಿಕೆಯಲ್ಲ ಸುಲಭ ಶೈಲಿಯ ದ್ರಾಕ್ಷಾಪಾಕವನ್ನು ಸಿದ್ಧಗೊಳಿಸಿದ್ದಾನೆ. ಹರೀಶ್ವರನು ವಾರ್ಧಿಕ ಪರಿವರ್ಧಿನಿ ಭಾಮಿನಿ ಷಟ್ಪದಿಗಳನ್ನು ರಚಿಸಿ ಕ್ಲಿಷ್ಟವಾದ ಶೈಲಿಯಲ್ಲ ಕದಳೀಪಾಕವನ್ನು ಸಿದ್ಧಗೊಳಿಸಿದ್ದಾನೆ. ಚಾಮರಸನು ಲಿಂಗಕ್ಕಾಗಿ ಲಿಂಗವ ಹೊಂದಿದವನು; ಪ್ರಭುಲಿಂಗಲೀಲೆಯನ್ನೊರೆದವನು. ಹರೀಶ್ವರನಲ್ಲಿ ಈ ದೃಷ್ಟಿಯಿಲ್ಲ. ಒಟ್ಟಾರೆ ಪ್ರಭುವಿನ ಕಥೆ ಹೇಳುವದೆ ಚಾಮರಸನಿಗೆ ಮುಖ್ಯವಾಗಿ ರುವದಾದರೆ ಹರೀಶ್ವರನಿಗೆ ತಾನು ಹೇಳಬೇಕೆಂದಿದ್ದ ಕಥೆಗೆ ಪ್ರಭುವಿನ ಕಥೆಯು ಸಾಧನೆಯಾಗಿದೆ. ಇದಕ್ಕಾಗಿ ಚಾಮರಸನ ಅನೇಕ ವಿಚಾರಗಳನ್ನು ಅವನು ಇದ್ದಕ್ಕಿದ್ದ ಹಾಗೆ ತೆಗೆದುಕೊಳ್ಳುವನು.

ಪ್ರಭುದೇವರ ಪುರಾಣಕಾರನಂತೆಯೇ ಪ್ರಭುದೇವರ ಸಾಂಗತ್ಯಕಾರನೂ ಮತ್ತು ಯಕ್ಷಗಾನ ಪ್ರಭುಚರಿತ್ರೆಕಾರನೂ ಚಾಮರಸನನ್ನೇ ಎಲ್ಲ ಕಡೆಯಲ್ಲಿ ಅನುಸರಿಸಿದ್ದಾರೆ. ಚಾಮರಸನ ಕಥೆಯನ್ನೇ ಅವರು ಹೇಳುವದಾದರೂ ಸಾಂಗತ್ಯವು ಒಬ್ಬರಿಗೆ ವಾಹನವಾದರೆ ಇನ್ನೊಬ್ಬರಿಗೆ ಯಕ್ಷಗಾನವು ಸಾಧನ

**(೩)ಪ್ರಭುಲಿಂಗಲೀಲೆ ಪ್ರಭುದೇವರ ಸಾಂಗತ್ಯ ಮತ್ತು ಪ್ರಭುದೇವರ ಯಕ್ಷಗಾನ**

ವಾಗಿದೆ. ಈ ಗ್ರಂಥಗಳಲ್ಲಿ ಸವಾಡಗಳಿಗೆ ಅಷ್ಟೊಂದು ಎಡೆಯಿಲ್ಲದಿರುವಂತೆ ಚಾಮರಸನು ತಿಳಿಸುವ ತತ್ತ್ವಗಳಿಗೂ ಸ್ಥಳವಿಲ್ಲ. ಪ್ರಭುಲಿಂಗಲೀಲೆಯು ತಿಳಿದುಕೊಳ್ಳಲು ಅಸಮರ್ಥರಾದ ಸಾಮಾನ್ಯ ಜನಪ್ರೀತಿಗಾಗಿ ಈ ಗ್ರಂಥಗಳು ಬರೆಯಲ್ಪಟ್ಟವುಗಳೆಂದು ಅವನ್ನವಲೋಕಿಸುವುದರಿಂದ ತಿಳಿದು ಬರುತ್ತದೆ. ಕಾವ್ಯದೃಷ್ಟಿಯಿಂದ ಮತ್ತು ಕವಿಗಳ ಪ್ರತಿಭೆಯ ದೃಷ್ಟಿಯಿಂದ ಈ ಗ್ರಂಥಗಳು ಗಮನಾರ್ಹವಾಗಿರುವುದಿಲ್ಲ.

**(೪) ಪ್ರಭುಲಿಂಗಲೀಲೆ ಶೂನ್ಯಸಂಪಾದನೆ**

ಶಿವಗಣ ಪ್ರಸಾದಿ ಮಹಾದೇವಯ್ಯಗಳು ರಚಿಸಿದ ಶೂನ್ಯಸಂಪಾದನೆಯನ್ನು ಚಾಮರಸನು ತಿಳಿದವನಾಗಿರಬೇಕು. ಅಲ್ಲಿ ಕಾಣುವ 'ಅಲ್ಲಮ' ಶಬ್ದದ ನಿರ್ವಚನೆಯನ್ನೇ ಚಾಮರಸನು ತನ್ನ ಪ್ರಭುಲಿಂಗಲೀಲೆಯು ತುಂಬ ಬಳಸಿದ್ದಾನೆ. ಆ ಬಳಿಕ ರಚಿತವಾದ ಶೂನ್ಯಸಂಪಾದನೆಗಳು ಎರಡಿರಲಿ ನಾಲ್ಕಿರಲಿ ಅವೆಲ್ಲ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆಯ ಆಧಾರದಲ್ಲಿ ಬೆಳೆದವುಗಳು. ಶೂನ್ಯಸಂಪಾದನೆಯಲ್ಲಿ ಕಾಣುವ ಸಂವಾದಗಳ ತೆರದಲ್ಲಿಯೇ ಅವೇ ವಿಚಾರಗಳನ್ನು ಕುರಿತು ಚಾಮರಸನು ಪ್ರಭುಲಿಂಗಲೀಲೆಯಲ್ಲಿ ಅನೇಕ ಸಂವಾದಗಳನ್ನು ಸೇರಿಸಿದ್ದಾನೆ. ಅಲ್ಲದೆ ಶೂನ್ಯಸಂಪಾದನೆಗಳಲ್ಲಿ ಕಾಣುವ ವಚನಗಳಲ್ಲಿ ತನ್ನ ವಿಷಯನಿರೂಪಣೆಗೆ ಅನುಕೂಲಿಸುವಷ್ಟು ವಚನಗಳನ್ನು ಆಯ್ದು ಪ್ರತಿ ಸಂಧಿಯ ಮೊದಲು ಸೇರಿಸಿ ತರುವಾಯ ಕಾವ್ಯವ ಹೇಳುವನು. ಕವಿಯು ಶೂನ್ಯ ಸಂಪಾದನೆಯಿಂದಲೇ ವಚನಗಳನ್ನು ಆಯ್ದುಕೊಂಡಿರದಿದ್ದರೂ ಅವನಿಗೆ ಅನೇಕ ವಚನಗಳ.ಪರಿಜ್ಞಾನವಿತ್ತೆಂಬುದು ಸಹಜ. ಶೂನ್ಯಸಂಪಾದನೆಗಳಲ್ಲಿ ಬರಿಯ ವಚನಗಳಲ್ಲಿ ಅಲ್ಲಮಪ್ರಭುವಿನ ಚರಿತ್ರೆ-ಅವನ ಆಧ್ಯಾತ್ಮಿಕ ಚರಿತ್ರೆ ದೊರೆಯುವುದಾದರೆ ಕಾವ್ಯಗಳಲ್ಲಿ ಲೋಕರಮ್ಯವಾದ ಅವನ ಜೀವನ ಚರಿತ್ರೆಯು ಸಿಗುತ್ತದೆ.ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಮಾತ್ರ ವಚನಗಳ ಆಧಾರದ ಮೇಲೆ ಕಾವ್ಯ ವಿಸ್ತಾರವಾದುದನ್ನು ಕಾಣಬಲ್ಲೆವು. ವಚನಗಳೊಡನೆ ಕಾವ್ಯರಚನೆ ಮಾಡಿದುದು, ಮತ್ತು ಆ ವಚನಗಳಿಗೆ ತಾನು ಉಪಕೃತನಾಗಿ ಅವುಗಳನ್ನು ಸೇರಿಸಿ ತನ್ನ ಗ್ರಂಥ ಬರೆದುದು ಚಾಮರಸನ ಒಂದು ವಿಶಿಷ್ಟತೆಯೇ ಸರಿ.

**ಪ್ರಭುಲಿಂಗ ಲೀಲೆಯ ಕಥೆ**

ಕವಿಗೆ ಅಲ್ಲಮಪ್ರಭುವಿನ ಚರಿತ್ರೆ ಹೇಳುವುದು ಆತನ ಮಹಿಮೆಯನ್ನು ಸೂಚಿಸುವುದು ಆತನು ಬೋಧಿಸುವ ತತ್ತ್ವವನ್ನು ತಿಳಿಸುವುದು ಮುಖ್ಯವಾಗಿರುವುದರಿಂದ ಎಷ್ಟು ಸಾರೆ ಅದನ್ನು ಹೇಳಿದರೂ ಎಷ್ಟು ಜನರಿಂದ ಅದನ್ನು ಹೇಳಿಸಿದರೂ ಅದು ಅವನಿಗೆ ಕಡಮೆಯೇ ! ಕಥೆ ಹೇಳುವವನು ತಾನಾದರೂ ತಾನು ಅದನ್ನು ಶಿವನಿಂದ

ಶಿವೆಗೆ[೧] ದೂರ್ವಾಸನಿಂದ ಮುನಿಗಳಿಗೆ[೨] ಮತ್ತು ವಿಮಳೆಯಿಂದ ಮಾಯೆಗೆ[೩] ಹೀಗೆ ಮೂರು ಸಾರಿ ಹೇಳಿಸಿರುವನು.

ಚಾಮರಸನು ಹೇಳುವ ಕಥೆಯನ್ನು ಕೇಳುವ ಅಧಿಕಾರಿಗಳು "ಬಲ್ಲವರು ಭಾವಕರು ಭಕ್ತಿಯನುಳ್ಳವರು ಸಾಧಕರು ರಸಿಕರು ಸೊಲ್ಲಿನೊಳಗರಿವವರು ಸಕಳ ಕಳಾವಿಳಾಸಿಗಳು; ಭಂಗವೇ ಬಸುರಾದ ವಿಷಯ ಸುಖಂಗ

**ಅಧಿಕಾರಿಗಳು**

ಳಿಗೆ ನೀಗೆ ಹೇಸುವರು, ಕಾಯದ ಕೀಲವನರಿವವರು, ಕಾರಣಂಗಳ ಮೂಲವನು ಕಣ್ಣಾರೆ ಕಾಂಬ ಮಹಂತರುಗಳು; ಹಸಿವನಳಿವರು, ನಿದ್ರೆಯನು ನೀಗುವರು, ರೋಗದುಪದ್ರವನು ನಿಲಿಸುವರು; ಗುರೂಪದೇಶದಲಿ (ಯೋಗ) ಮುದ್ರೆಯನು ಮುಟ್ಟುವರು; ಜೀವ ಕಾಯದ ಬೆಸುಗೆಯನು ಕಾಂಬವರು; ಬಿಂದುವನೊಸರಲೀಯದೆ ಊರ್ಧ್ವಮುಖದಲಿ ಬಿತ್ತಿ ಬೆಳೆವವರು; ಭಕ್ತಿ ಮಾರ್ಗದ ದಾರಿಯನು ಸಲೆ ತಿರಹು ಮಾಡಿ ಮನೋರಥವ ಪಡೆವವರು; ಶಿವೈಕ್ಯ ಭಕ್ತಿಯ ಮಾನ ನಿಧಿಗಳು; ನಿರ್ದೇಹಿಯ ನಿಜಾಕೃತಿಯ ಮತಿಯುತರು; ತತ್ತ್ವವಿತ್ತುಗಳು, ಪರಿಭವಂಗಳ ನೀಗಿ, ಅಂತಃಕರಣವನು ಶುದ್ಧೈಸಿ, ಮುಂದಣ ಮರಣ ಬಾಧೆಯನೊದೆದು, ನಿಶ್ಚಿಂತೆಯಲಿ ಸುಖದಿಂದೆ ಪರಮ ಜ್ಞಾನಾಮೃತವನಾವರಿಸಿ ನಿತ್ಯವನರಿವವರು;ಕಾಳು ವಿಷಯದ ವಿಧಿಯ ದಾಳಾಘೂಳಿಯಲಿ ಹತವಾಗಿ ಕಾಲನ ಕಾಲ ಬಾಯಲಿ ಬೀಳಲೊಲ್ಲೆನೆನಿಪ್ಪ ಸುಕೃತಿಗಳು; ಬಾಹಿರಂಗದ ಭ್ರಮೆಯ ಭರಗೆಡಿಸಿ ಕೆಟ್ಟ ಕಾಯದ ಕಳವಳಂಗಳ ಕಟ್ಟಿ ಕಳೆದು ಆ ಪ್ರಳಯ ಕಾಲನ ಮೆಟ್ಟಿ ನಡೆವವರು; ಅನುವಿಡಿದು ಗುರು ಲಿಂಗ ಜಂಗಮದನುವ ನಿಶ್ಚೈಸುವವರು; ನಿರ್ವಂಚನೆಯ ಭಕ್ತಿಗೆ ತನುಮನೋಧನಗಳನು ಸವೆವವರು. ಇಷ್ಟಲಿಂಗದ ಭಕ್ತಿಮಾರ್ಗದ ಶಿಷ್ಟತೆಯ ಶೀಲವನು ಸಕಲಾಗಮದ ಸಾರವನು ಕಷ್ಟ ಕರ್ಮಭ್ರಮೆಯ ಕೇಡನು ದೃಷ್ಟ ಜನ್ಮದಲ್ಲಿದ್ದು ಕಾಂಬವರು; ಇಷ್ಟಲಿಂಗದ ಮಾರ್ಗದಲಿ.... ದುಷ್ಟ ದುರ್ವಾಸನೆಯ ನೀಗಿ ವಿಶಿಷ್ಟವೆನಿಪ ಆ ಪ್ರಾಣಲಿಂಗದ ನಿಷ್ಠರು." ಇವರೆಲ್ಲರೂ ಕವಿಯ ದೃಷ್ಟಿಯಲ್ಲಿ ಪ್ರಭುಲಿಂಗಲೀಲೆಯನು ಕೇಳುವ ಯೋಗ್ಯತೆಯುಳ್ಳವರು. ಈ ನಿವೃತ್ತಿ ಮಾರ್ಗದ ನಿಜ ನಿರ್ಲೇಪಕರಿಗೆ ನಿಲುಕುವ ವಿಷಯವನ್ನು ತಿಳಿದುಕೊಳ್ಳಲು ಪ್ರವೃತ್ತಿಮಾರ್ಗದ

---

೧. ಗತಿ ೧ ಪದ್ಯ ೩೬

೨. ಗತಿ ೩ ಪದ್ಯ ೨೦

೩. ಗತಿ ೬ ಪದ್ಯ ೧೦ ರ ಮುಂದೆ

ಪ್ರಾಪಂಚಿಕರು ಅಯೋಗ್ಯರು.೪ ಮಾಯೆಗೆ ಈ ವಿಷಯವು ನಿಲುಕಲಿಲ್ಲವೆಂಬುದು ಸ್ಪಷ್ಟವಾದುದು; ಮುನಿಗಳಿಗೆ ನಿಲುಕಲಿ ಎಂದು ಕವಿಯ ಹಾರೈಕೆ; ನಿಜಾಂತಃಕರಣ ಜನಿತ ಸ್ಫುರಣೆಯನು ಬಿನ್ನೈಸಲುದ್ಯೋಗಿಸಿದ ಪರಮೇಶ್ವರಿಯು ತಾಮಸ ಕಳೆಗೆ ನಿಲುಕದೆ ಸಾತ್ವಿಕ ಕಳೆಗೆ ನಿಲುಕಿತೆಂದು ಕವಿಯೇ ಕಾವ್ಯದ ಕೊನೆಗೆ ಸಿದ್ಧಿಸಿರುವನು. "ದೇವಿ ಕೇಳ್ ನಿನ್ನಂಶದಾ ಮಹದೇವಿ ನನ್ನಂಶದಾ ಗಣಂಗಳು ದೇವ ಕನ್ಯೆಯರೆಲ್ಲರು ಅಲ್ಲಮನಿಂದೆ ಜಗವರಿಯೆ ತೀವಿ ತಮ್ಮಯ ನಾಮ ರೂಪು ಕ್ರೀ ವಿಳಾಸವನಿಳುಹಿ ನಿತ್ಯ ನಿರಾವಲಂಬದ ಸುಖಿಗಳಾದರು"೫ ಎಂದು ಶಿವನ ಮುಖದಿಂದ ನುಡಿಸಿರುವನು.

ಸೃಷ್ಟಿಯು ಸಟೆಯೇ ದಿಟವೇ ? ನಾಮ ರೂಪು ಕ್ರಿಯೆಗಳು ನಿತ್ಯವಾದವುಗಳೇ ಅನಿತ್ಯವಾದವುಗಳೇ ? ಭಕ್ತಿ ಕ್ರಿಯಾ ಜ್ಞಾನ ಯೋಗ ಇವುಗಳಲ್ಲಿ ಆವುದು

---

೪. ಚಾಮರಸನು ಈ ಪ್ರವೃತ್ತಿ ಮಾರ್ಗದ ಪ್ರಾಪಂಚಿಕರ ಮತ್ತು ನಿವೃತ್ತಿ ಮಾರ್ಗದ ನಿಜ ನಿರ್ಲೇಪಕರ ಕುಂದುಕೊರತೆ ಸ್ಥಿತಿಗತಿ ಅವರ ರೀತಿನೀತಿ ಇತ್ಯಾದಿಗಳನ್ನು ತಾನು ಆರಿಸಿಕೊಂಡ ಪಾತ್ರಗಳಿಂದಲೂ, ವರ್ಣನೆಗಳಿಂದಲೂ ಚೆನ್ನಾಗಿ ವಿವರಿಸಿದ್ದಾನೆ. ಅದನ್ನು ಅವನು ಒಳ್ಳೆ ಬೆರಗುಗೊಳಿಸುವಂಥ ಶೈಲಿಯಲ್ಲಿಯೂ ಹೇಳಿದ್ದಾನೆ. ಅವನು ರಚಿಸಿಕೊಂಡ ಪಾತ್ರಗಳಲ್ಲಿ ಹಲಕೆಲವು ಕಲ್ಪನೆಯ ಸೀಮೆಯವಾದರೂ ಅವು ಅವನ ಕಲ್ಪಕವೃತ್ತಿಯನ್ನು ವ್ಯಕ್ತಗೊಳಿಸುತ್ತವೆ. ಒಂದೆಡೆಗೆ ಅವನು ಮಮಕಾರ, ಮೋಹಿನಿ, ಮಾಯಾ, ಮಧುಕೇಶ್ವರ, ಅಹಂಕಾರ ಇವರ ತಳ್ಳಿವಳ್ಳಿಯನ್ನು ತಿಳಿಸಿ ಮಾಯಾಭ್ರಮಿತ ವೃತ್ತಿಯನ್ನು ವರ್ಣಿಸಿದರೆ, ಇನ್ನೊಂದೆಡೆಗೆ ತದ್ವಿರುದ್ಧವಾಗಿ ನಿರ್ಮಳ ಸುಮತಿ ಮಹಾದೇವಿ ಮತ್ತು ನಿರಹಂಕಾರ ಸುಜ್ಞಾನಿ ಮಾಯಾ ಕೋಳಾಹಳ ಅಲ್ಲಮಪ್ರಭು ಇವರ ಸಂದು ಸಂಬಂಧವ ಸೂಚಿಸಿ ಮಾಯಾವಿರಹಿತ ವೃತ್ತಿಯನ್ನು ವಿವರಿಸಿರುವನು. ಮಾಯಾಭ್ರಮಿತ ವೃತ್ತಿಯ ಮಮಕಾರ ಮೋಹಿನಿಯರು ಮಕ್ಕಳ ಬಯಸಿ ಕೈಕೊಳ್ಳುವ ವ್ರತನಿಯಮಾದಿಗಳ ಹಾಗು ಅವರ ಸುಖೋಪಭೋಗ ಶಯ್ಯಾಗೃಹ ಇತ್ಯಾದಿಗಳ ವರ್ಣನೆ ಮತ್ತು ನಿರ್ಮಳ ಸುಮತಿ ಇಲ್ಲವೆ ನಿರಹಂಕಾರ ಸುಜ್ಞಾನಿಗಳು ಕೈಕೊಳ್ಳುವ ವ್ರತನಿಯಮಾದಿಗಳು ಹಾಗು ಅವರು ಬಯಸುವ ಸುಖೋಪಭೋಗಗಳು ಇವುಗಳಲ್ಲಿ ಅತ್ಯಂತವಾದ ಅಸಮಾನತೆಯಿದೆ. ಮಾಯಾ ಮತ್ತು ಮಹದೇವಿ ಅಲ್ಲಮ ಇವರ ಬಾಲಲೀಲೆಯ ವರ್ಣನೆಯೂ, ಮಾಯಾ ಮತ್ತು ಅಲ್ಲಮ ಇವರು ಜನಿಸಿದಾಗ್ಗೆ ಲೋಕದಲ್ಲುಂಟಾದ ಸ್ಥಿತ್ಯಂತರಗಳ ವರ್ಣನೆಯೂ ಹಾಗೂ ಮಾಯಾ ಮತ್ತು ಮಹದೇವಿ ಅಕ್ಕ ಇವರು ಪತಿಗಳ ಅನ್ವೇಷಣದ ಕಾಲದಲ್ಲಿ ತಾಳಿದ ಅನುರಕ್ತಿ ವಿರಕ್ತಿ ಭಾವಗಳ ತುಲನಾತ್ಮಕ ವಿವರಣೆಯೂ ಪ್ರಭುಲಿಂಗಲೀಲೆಯಲ್ಲಿ ಮನವ ಸೆರೆಗೆಯ್ಯುವ ರೀತಿಯಲ್ಲಿ ಕಾಣುತ್ತಿವೆ. ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳ ರಹಸ್ಯವನ್ನು ಈ ತೆರನಾದ ಶಬ್ದ ಚಿತ್ರದಲ್ಲಿ ಮೂಡಿಸಿರುವವರು ಕಡಮೆ. ಚಾಮರಸನಿಗೆ ಸಾಧಿಸಿದ ಈ ಜಾಣ್ಮೆಯು ಸಾಮಾನ್ಯರಿಗೆ ಲಭಿಸುವದೂ ವಿರಳ.

೫. ಗತಿ ೨೫ ಪದ ೧೭.

ಘನವಾದುದು ? ಆವುದರಿಂದ ನಿಜವು ಸಾಧಿಪುದು ? ನಿಜವ
**ಕಥೆಗೆ ಮೊದಲು** ಸಾಧಿಸಲು ದಾರಿದೋರುವವರ ನೆರವು ಬೇಕಾಗುವುದೇ ?
ತನ್ನ ತಾನರಿದಡೆ ಸಾಲದೇ ? ಎಂಬಿವೇ ಮೊದಲಾದ
ತೊಡಕಿನ ಸಮಸ್ಯೆಗಳು ಭಾರತೀಯರಲ್ಲಿ ಬಹು ಕಾಲದಿಂದ ರೂಢವಾದುವುಗಳು. ಮತಮತಾಂತರಗಳ ತೋರಿಕೆಗೂ ದರ್ಶನಕಾರರ ದರ್ಶನಗಳಿಗೂ ಈ ಸಮಸ್ಯೆಗಳೇ ಕಾರಣವು. ಈ ಸಮಸ್ಯೆಗಳ ತೊಡಕನ್ನು ಬಿಡಿಸುವುದರಲ್ಲಿಯೇ ಅವರ ಪ್ರಯತ್ನಗಳ ಪರಾಕಾಷ್ಠತೆಯಿದೆ. ಚಾಮರಸನ ಕಾಲಕ್ಕಾದರೋ ಈ ತೊಡಕು ತೋರದೆ ಇರಲಿಲ್ಲ. ಆದುದರಿಂದ ತಾನೂ ತನ್ನ 'ಬಡನುಡಿ, ತೊದಲುನುಡಿ' ಗಳಲಿ ಸೇವ್ಯಮಪ್ಪಂತೆ ಅದನ್ನು ಬಿಡಿಸಲು ಯತ್ನಿಸಿಹನು. ಶಿವ ಪಾರ್ವತಿಯರ ಸಂವಾದ ಮುಖದಲ್ಲಿ ಅವನು ತಿಳಿಸುವ ಸಂಗತಿಗಳಿವು :

"ಶಿವನೆ, ನಿನ್ನೊಡ್ಡೋಲಗದೊಳೊಪ್ಪುವ ಮಹಾ ಘನಮಹಿಮರೆಲ್ಲರು
ಭವಕೆ ಬಾರದೆ ನಿತ್ಯ ಸುಖದಿಂದಿಪ್ಪರೋ? ಮೇಣಿವರಿಗೆಯು ನೆಲೆಯಿಲ್ಲವೋ?"

ಎಂದು ಕೇಳುವ ಶಿವೆಯ ಪ್ರಶ್ನೆಗೆ,

"ಹರಿ ವಿರಿಂಚಿಗಳಾದಿಯಾದವರಾದೊಡೆಯು ತುದಿಗೆ ವಿರಚಿಸುತ್ತಿಹ
ನಾಮ ರೂಪುಗಳೊರೆದ ಸತ್ಕ್ರಿಯೆಯಿದ್ದವಾದೊಡೆ ದೊರಕಲರಿಯದು ನಿತ್ಯ
ಸುಖವು"

ಎಂದು ಉತ್ತರವೀವನು. ಹಾಗಾದರೆ,

"ನಾಮ ರೂಪ ಕ್ರಿಯೆಗಳನು ಗೆಲಬಲ್ಲ ವಿಮಲೋದ್ಯೋಗವಾವುದು ?"

ಎಂದು ಪಾರ್ವತಿಯು ಕೇಳಲು.

"ಕರ್ಮೋದ್ಯೋಗ ಭೂಮಿಯು ಕರ್ಮತನುವಿನಲಲ್ಲದು ; ಅದರಿಂದ ಯೋಗ
ಯೋಗ್ಯರು ಯೋಚಿಸುವ ಭೂಭಾಗದಲಿ ಮಾನವ ಶರೀರಿಗಳಾಗಿ ಸಾಧಿಸಿ
ನಿಜವನರಿವರು" ಎಂದು ಹೇಳುವನು.

"ಮನುಜ ಲೋಕದೊಳಾವ ಪರಿಯಿಂದ ಅನುಭವ ಸ್ಥಿತಿಗತಿಯನು
ಉಪದೇಶಿಸುವ ಗುರುವಾರು ?" ಎಂಬುದ ವಿಸ್ತರಿಸ ಪೇಳಲು

"ಸುಜ್ಞಾನಿ ನಿರಹಂಕಾರರೆಂಬರ....ಸೂನುವು ಅಲ್ಲಮನು, ಆತನಲಿ ಅರಿವು
ದರಿವುಗಳ" ಎಂದು ಶಿವನು ತಿಳಿಸುವನು.

ಪಾರ್ವತಿಗೆ ಈ ಮಾತು ಸರಿಬರಲಿಲ್ಲ. ತಾಮಸದಲಿ

"ಅಲ್ಲಮಪ್ರಭುವೆನಿಪನಾತನಬಲ್ಲೆ, ನಾಸೀಗರಿದೆ, ಬಳಿಕಿನ್ನಲ್ಲಿ ನಿಜ ತತ್ತ್ವ
ಸ್ವರೂಪವನರಿವೊಡೇನರಿದು ?"

ಎಂದು ಭುಲ್ಲವಿಸಿ ನುಡಿವಳು. ಆಗ ಶಿವನು

"ಆರಾರವರ ಭಕ್ತಿಗಳ ರೀತಿಗಳಲಿಹರು ಆವರಿಗೆ ಅವರ ಆ ಪ್ರೀತಿಯಲಿ ರೂಪಾಗಿ ತೋರುವನು ಸಾಮಾನ್ಯವಲ್ಲವು. ಹೂಣಿಕೆಯ ನುಡಿದಿನ್ನು ಹೊಳೆದೊಡೆ ಸೋಲು ನಿನಗೆ"

ಎಂದು ಎಚ್ಚರವೀವನು. ಪಾರ್ವತಿಯು ಪೈಜೆ ಇಟ್ಟು ಕೊನೆಗೆ ಸೋಲುವಳು.

ಈ ಸಂವಾದದಿಂದ ಸೃಷ್ಟಿಯು ಸಟೆಯಲ್ಲ ದಿಟವೆಂದೂ, ಕೈಲಾಸಕ್ಕಿಂತ ಕರ್ಮಭೂಮಿಯೆ ಮಿಗಿಲೆಂದೂ, ದೇವಲೋಕದ ಜೀವನಕ್ಕಿಂತ ಜೀವಲೋಕದ ಜೀವನವು ಸಾಧನೆಗೆ ತಕ್ಕುದೆಂದೂ, ಆಕಾರವಿಡಿದು ನಿರಾಕಾರವನ್ನು ಸಾಧಿಸುವದೇ ಘನನೆಂದೂ, ನಿರಾಕಾರದ ಅರಿವು ಅಂಗವಿಸಲು ಸಾಕಾರ ಗುರುವಿನ ಅವಶ್ಯಕತೆ ಯಿದೆ ಎಂದೂ ಸ್ಪಷ್ಟವಾಗುತ್ತದೆ. ಪ್ರಭುಲಿಂಗಲೀಲೆಯಲ್ಲಿ ಕವಿಯು ಸಿದ್ಧಿಸ ಬೇಕೆನ್ನುವ ವಿಷಯವೆಂದರೆ ಇದೇ !

ಅಲ್ಲಮಪ್ರಭುವು ಬನವಸೆಯ ಬಳ್ಳಿಗಾವಿಯ ಭಕ್ತಿಭಾವಕರಾದ ಸುಜ್ಞಾನಿ ನಿರಹಂಕಾರರ ಶಿಶುವು; 'ಮಾಯಾ ಪ್ರಪಂಚಿನ ಬಳಕೆಗಳು ನಮಗೆ ಏಕೆ? ನಿಜವ

ನೀವ ನಿರಾಕುಳದ ಸುಕುಮಾರನಾಗಲಿ ಬೇಕು ನಮಗೆ' ಎಂದ

**ಕಥಾನಾಯಕನ** ಅವರ ಶಿವಯೋಗ 'ಸಮಾಧಿಯ ಭಾವದಲಿ' ನೆನಹಿನ ನೇಸರ

**ಬಾಲ್ಯ** ನಾಗಿ ಬಂದ ಶಿಶುವು. ಸಗುಣ ನಿರ್ಗುಣ ಮೂರ್ತಿಯಲ್ಲದ ವಿಗಡ

ಶಿಶುವು. ತಂದೆ ತಾಯಿಗಳು "ಈ ಶಿಶುವು ಏತರೊಳಗಿಹನಲ್ಲ ಹೊರಗಹನಲ್ಲ., ಭಾವಿಸಲು ಇಲ್ಲದಿರುತಿಹನಲ್ಲ.; ಎಲ್ಲ ಜಾಡ್ಯದ ಜಂಜಡಂಗಳ ನಲ್ಲವೆನಿಸುವ" ಎಂದು ಭಾವಿಸಿಯೇ ಅಲ್ಲಮಪ್ರಭುವೆಂದು ಹೆಸರಿಟ್ಟರು.

---

೬. ಕವಿಯು ಪ್ರಭುಲಿಂಗಲೀಲೆಯಲ್ಲಿ ಸಂದರ್ಭಾನುಸಾರವಾಗಿ ಕೊಡುವ 'ಅಲ್ಲಮ' ಶಬ್ದದ ನಿರ್ವಚನೆಯು ಒಳ್ಳೇ ಸ್ವಾರಸ್ಯ ಮತ್ತು ಅನುಭವ ಯುಕ್ತವಾಗಿದೆ.

(೧) ಬಿರಿದಿನ ಬಿಂಕಕಾಜಿರ
ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ ೫–೧೩

(೨) ಕಳವಳದ ವಿಷಯಗಳ ವ್ಯಸನಗ।
ಳೊಳಗೆ ಸಿಕ್ಕುವನಲ್ಲ (ವಲ್ಲಮನು) ೫–೪೭

(೩) ಅವನಿಜಲಾನಲಾನಿಲ।
ಭೂತತತ್ತ್ವವಿದೂರ ಪರಮಾನಂದ ರಸಭರಿತ
ಜಾತನಲ್ಲ ವಿಚಾರಿಸುವೊಡೆಯು
ಜಾತನಲ್ಲೆಂದೆನುತಲುಪಮಾತೀತ ನೀ ಶಿಶುವು॥ ೬–೨೮

(೪) ಅಲ್ಲಮನ ಮುಖದಿಂದಲೀಕೆಯ (ಮಾಯೆ)
ನಲ್ಲನೆನಿಸಿದ ೮–೧೪

(೫) ಆವುದಕೊಳಹುದಲ್ಲದಲ್ಲಮ।
ದೇವನೆಂಬುದು ನಮಗೆ ಸಲೆ ಸಂ।
ಭಾವಿಸಿದ ಹೆಸರಾಗಿಹುದು ೯–೭

" ಚಿದ್ರೂಪ ಶಿಶು; ಕಿಂಚಿತು ಭಾರವಿಲ್ಲದೆ ಕೈಗೆ ಸೋಂಕದೆ ಸಾರತೇಜಃಪುಂಜತನು ಶಿಶು ( ನಿರಹಂಕಾರನ ) ಕೈಯೊಳಗೆ ಪೂರವಿಸಿಕೊಂಡಿರಲು" ಎಂದು ಅಲ್ಲಮನನ್ನು ಕುರಿತು ಚಾಮರಸನು ತಿಳಿಸುವ ಮಾತುಗಳು ಕರಿಗೊಂಡ ಅನುಭವವು ಅಂಗೈಯ ಲಿಂಗರೂಪದಿ ಶಿಶುವಾಗಿ ತೋರುವುದೆಂಬ ಅವನ ನಂಬುಗೆಯನ್ನು ಸೂಚಿಸುವುದು.

ಕುರುಹು ಮಾತ್ರವಾಗಿ ಬಾಲಲೀಲೆಯನಾಡಿ, ' ರೂಢಿಗಚ್ಚರಿಯಾದ ಬಾಲಕ್ರೀಡೆ ' ಎಂದು ಜನರಾಡುವಂತೆ ಆಡಿ, ' ನಿಮ್ಮಯ ಸಮಾಧಿಯು ಕೇಳಿಗೋಸುಗ ನಾನು ರೂಹಿಸಿ ಬಾಲಭಾವಚ್ಛವಿಯ ತೋರಿದೆ. ಇನ್ನು ಸಾಕು, ನನ್ನ ನಿಜದ ನಿರಾಳ ನಿಶ್ಚಲ ನಿತ್ಯ ಸುಖ ಸಮ್ಮೇಳದಲಿ ನಾನಾಡುತಿಹೆನು ' ಎಂದು ಸುಜ್ಞಾನಿದೇವಿಗೆ ನಿರಹಂಕಾರದೇವಗೆ ತಿಳಿಸಿ ಅವರ ತಾಮಸವ ನಿರಸನಗೊಳಿಸಿ ಅವರಿಗೆ ನಿತ್ಯವನಿತ್ತು ಸುಳಿಯ ತೊಡಗುವನು. ಭಕ್ತರ ಭಾವದಂತೆ ರೂಪವ ತೋರಲು ಬೇಕೆಂದು ಸುಳಿಯ ತೊಡಗುವನು.

ಇತ್ತ ಮಮಕಾರ ಮೋಹಿನಿಯರಿಗೆ 'ಕಾರಣಕನ್ಯೆ'ಯಾಗಿ ಜನಿಸಿ ಅಹಂಕಾರ ಗುರುವಿನ ಹಸ್ತದಲ್ಲುದಿಸಿ, ಕಾಮ್ಯಭಕ್ತಿಯ ಬೀಜಾರೋಪಣಗೊಂಡು ಇನಿಯನ ಬಯಸಿ ತಾಮಸ ಪೂಜೆಯ ಭರದಲ್ಲಿ ಮಧುಕೇಶ್ವರನ ಎದುರು ಲಾಸ್ಯವಾಡುತಲಿದ್ದ ಮಾಯೆಗೆ ಅಲ್ಲಮಪ್ರಭುವು ಹದಿನಾರು ಹದಿನೆಂಟು ವರುಷದ ಹರೆಯವೆಂಬ ವಿಳಾಸ ವೇಷದಲಿ ಬೆನ್ನೊಳು ಮೆರೆವ ಮದ್ದಳೆ ಸಹಿತ ಬಂದು ತೋರುವನು. ' ನಿರ್ವಯಲಿ ನಲ್ಲಮಗೋತಕಾರಣ ಬಯಲ ಬಿಹ್ವದ ಬಳಿಗೆ' ಆಕೆಯ ಕೆಡಹುವನು.'ಜಗವನಾಡಿಸಿ ಕಾಡುವ ಆ ಮಾಯೆಗೆ ನವೀನವೆನಿಪ್ಪ ಮಾಯಾವಿಗನು' ತಾನಾಗುವನು. ' ಹೂಡಿ ಹಣ್ಣಿದ ಜಗದ ಜಂತ್ರವನಾಡಿಸುವ ಮಾಯಾಂಗನೆಯ ತಾನಾಡಿಸುವೆ' ನೆಂಬುದನು ಪ್ರತ್ಯಕ್ಷದಲಿ ತೋರುವನು. ಮಾಯೆಯ ಮತ್ತು ಆಕೆಯ ಕೆಳದಿಯರ ಗುಟ್ಟು ರಟ್ಟಾಗಹತ್ತಲು ' ನಾವಿನ್ನು ನೀತಿಯ ಮೀರದಂತಿರಬೇಕು. ಅಂತು ಕಾರಣ ಬೇರೆ ಬೀಡಿನಲಿರಲಿಯಲ್ಲಮನು ' ಎಂಬ ಕೆಳದಿ ಸಕಳೆಗೆ ' ಮಾಯೆಯಗಲಿದ ಬಳಿಕ ಭಾವಿಸೆ ಕಾಯವುಂಟೇ ? ಸಾಯದಂತಿರೆ ಸತ್ತೆ ನಾನು ' ಎಂದು ಅನುಭವದ ನುಡಿಯನಾಡಿ ನಟಿಸುವನು. ವಿಮಳೆಯ ಸಂಗದಿಂದ ತಾಮಸವಳಿದು ನಿರ್ಮಲ ತನು ಎಡೆಗೊಳ್ಳದ ಮಾಯೆಯನ್ನುದ್ದೇಶಿಸಿ ' ನಾವು ಇನ್ನೇಕೆ ಸದಮಲ ಸಸ್ವರೂಪವನು ಕಾಕರಿಗೆ ಕಾಣಿಸುವುದು? ಅನುಚಿತವು ! ಎನುತ ನಟ್ಟುವಿಗತನವನು ನೂಕಿ, ಮದ್ದಳೆಯನೊಡೆ ಹಾಕಿ ಹೋಗುವನು.' ಮಾಯೆಯನೊಡಗೊಂಡು ಬೆಂಬಳಿವಿಡಿದು ಬಂದ ವಿಮಳೆಯ ಪ್ರಯತ್ನಗಳು ನಿಷ್ಫಲವಾಗುವುವು. ಕೊನೆಗೆ ' ಇಮ್ಮನವಾಗಿ ಭಕ್ತಿಯ ಮಾಡಿ ಸಂಫಲವ ಪಡೆಯಲಿಲ್ಲದೆ ಬಂದು ನೀ ಬರುನುಡಿ

ಗಳಿಂದಲಿ ನಮ್ಮ ಮೆಲ್ಲನೆ ತೊಡಕಿಕೊಂಡೊಡೆ ಸಿಗುವವನಲ್ಲ; ಅನುಗಾಲಕೆ ಮಡದಿ ಮಾಯೆಗೆ ಪರಮ ತತ್ತ್ವಜ್ಞಾನವಿಲ್ಲ' ಎಂದು ಆಕೆಗೆ ನುಡಿದು 'ನಿಜ ನಿರ್ಣಯವ ನಿರ್ಮಿಸಿ ನಿಮಿಷದಲಿ ನಿರ್ವಯಲ ಜಾಲವ ಬೀಸಿ' ಹೋಗುವನು.

'ಕಾಮವೆತ್ತಲು, ಪರಮತತ್ವದ
ಸೀಮೆಯೆತ್ತಲು, ತಿಮಿರವೆತ್ತಲು,
ತಾಮರಸಸಖನೆತ್ತಲು, ಅರಿಸಿನವೆತ್ತ ಬಿಸಿಲೆತ್ತ'

'ತಮವ ತರಣಿಯನೊಂದು ಮಾಡುವೆವೆಂಬ ಭಾವ ಭ್ರಮಿತ ಬುದ್ಧಿಯು ವ್ಯರ್ಥ' ಎನ್ನಿಸಿ ಬಿಡುವನು.

ಹೀಗೆ ಅಲ್ಲಮಪ್ರಭುವು ಮಾಯೆಯ ನಿರಸನಗೆಯ್ದ ಸಂಗತಿಯನ್ನು ಚಾಮರಸನು ತನ್ನ ಗ್ರಂಥದ ಮೂರರಲ್ಲೊಂದು ಭಾಗದಷ್ಟು ವಿಸ್ತಾರವಾಗಿ ವರ್ಣಿಸಿರುವನು. ಅಲ್ಲಮ

**ಅಲ್ಲಮಪ್ರಭುವಿನ ಘನತೆ**

ಪ್ರಭುವಿನ ಅನುಭವ ಸಾಧನೆಯನ್ನು ನಿರೂಪಿಸುವಾಗ್ಗೆ ಕಾಮಲತೆಯ ಪ್ರಸಂಗವನ್ನು ಹಂಪೆಯ ಹರೀಶ್ವರನೂ ಮತ್ತು ಪದ್ಮಿನಿಯ ಪ್ರಸಂಗವನ್ನು ಶಂಕರಕವಿಯೂ ತಂದೊಡ್ಡುವರು. ಕಾಮಲತೆ ಪದ್ಮಿನಿ ಈ ಹೆಸರುಗಳು ಮಾಯೆ ಈ ಹೆಸರಿನಷ್ಟೇ ಭ್ರಾಮಕವಾದುವುಗಳು; ಕಲ್ಪನೆಯ ಕೈಚಳಕದಿಂದ ಬೆರೆತವುಗಳು. ಅಲ್ಲಮಪ್ರಭುವು ಮದುವೆನಿಂದು ಮೋಹಪರವಶನಾಗಿ ಕೊನೆಗೆ ತನ್ನ ತಾನೆ ತಿಳಿದಿರಲಿ. ಇಲ್ಲವೆ ಚಾಮರಸನು ಹೇಳುವಂತೆ ಬಯಲ ಸಮಾಧಿಯ ಸಾಧಿಸಿ ಬಯಲುಗನಾಗಿ ಸುಳಿದಿರಲಿ. ಆತನು ಸಂಪಾದಿಸಿದ ಅನುಭವ ಸಂಪತ್ತಿಯನ್ನು ಎದುರಿಟ್ಟು ಹೇಳುವುದಾದರೆ ಆವ ದೃಷ್ಟಿಯನ್ನಿಟ್ಟುಕೊಂಡರೂ ಸರಿಯೇ. ಅವನ ಘನತೆಗೆ ಚ್ಯುತಿಯಿಲ್ಲ. ಚಾಮರಸನಿಗೆ ಮಾತ್ರ ಅಲ್ಲಮಪ್ರಭುವು "ನರನು ತಾ ದಿಟವೆಂಬ ಬಳಕೆಯ ಪರಿಯನಂಗೀಕರಿಸಿದ ಪರಮನು. ಜಗದ ಭಕ್ತರದಾವ ಮುಖದಲಿ ಹೋಗುತಲಿರ್ದರು ತಾನು ಬಳಿಕಾ ಬಗೆಯನಂಗೀಕರಿಸಿ ಲೌಕಿಕರಿಗೆ ಲಿಂಗಮಾರ್ಗವ ತೋರಿಸುವ ಗುರುವು. ಸಾವ ಹುಟ್ಟುವ ವಿಧಿಯ ಮಾನವ ಜೀವಜಾಳಕೆಯುವರವರು ಮುನ್ನಾವ ಕಾಯಕವಿಡಿದು ತಾವಿಹರಾಪ್ರಕಾರದಲಿ ತೀವಿಯಂತರ್ನಿಷ್ಠೆಯಲಿ ನಾನಾ ವಿಧೋಪಾಯವನು ಬೋಧಿಸುವ ಗುರುವು. ಸಾಧಕಾಂಗದ ಬೆಸುಗೆಯನುವಿನ ಭೇದವನು ಬೋಧಿಸುವ ಗುರುವು. ಪರಿಪಾಕಭಾವದ ಹದನನರಿದುಪದೇಶಿಸುವ ಗುರುವು. ಶೂನ್ಯದ ಲಕ್ಷಣವನು ದೀಕ್ಷೆ ಮಾಡುವ ಗುರುವು. ವಿಖ್ಯಾತಿ ಪೂಜಾ ಲಾಭದಿಚ್ಛೆಯಲಿ ಸಿಕ್ಕಿ ಬಿದ್ದವರ ಕಾಯಕರಣದ ಸಂದು ಸಂಬಂಧವನು ಸೂಚಿಸಿ, ಜೀವ ಪರಮರನೊಂದು ಮಾಡುವ ಶಕ್ತಿಭಕ್ತಿಯ ಹೊಂದಿಕೆಯನು ಉಪದೇಶಮಾಡುವ ಪರಮಗುರು. ಮನದ ವಿಕಾರಿಗಳಿಗೆ ಭಕ್ತಿಯ ಕೀಲನುಪದೇಶಿಸಿ ಮನಸಿನ ಮುಖದ

ಕತ್ತಲೆಯ ತಿಳಿಪ, ಲಿಂಗಜ್ಞಾನವಹ್ನಿಯಲಿ ಬೆಂದು ಹೋದ ಒಡಲುಗನು. ಅಂತಃಕರಣ ಶುದ್ಧಿಯ ಪಡೆದ ಸಾಧಕರಿಗೆ ಪರಮ ಪದವಿಯನೀವ, ನಿಗಮಾಗ ಮಂಗಳ ಸತ್ವಸಾರವನು ಆಗುಮಾಡಲು ಬಂದ ಕಾರಣ ಪುರುಷನು. ನೆರೆ ನಿರಂತರ ನಿರ್ವಿಕಾರದ ನಿರಿಗೆಯ ಮಲಜ್ಞಾನವನು ಕಣ್ದೆರಸುವ ಪ್ರಭುರಾಯನು. ಒಡಲಿನಾಸೆಗೆ ಕುದಿದು ಕೋಟಲೆಬಡುವವರ ಕಳವಳವ ಕಳಚಲು ನಡೆದು ಬಂದ ದಯಾಘನನು. ಅಜ್ಞಾನಿಗಳ ಮನದ ಕಾಳಿಕೆಯ ಕಳೆವ ಸುಜ್ಞಾನಿಯು. ಕಾಮಿಗಳಿಗೆ ಕುಂಡಲಿ ಶಕ್ತಿಯ ಮಹಾರತಿಯ ನೇಮಿಸಿ ನಿರ್ಮಾಯದಲಿ ನಿತ್ಯಾನಂದ ಸುಖವನೊಲಿದೀವ ದಾನಿಯು. ಸರ್ವ ಜೀವ ದಯಾಪರವನುಪದೇಶಿಸಿ ನಿರ್ಲೇಪದಲಿ ನಿಲಿಸುವ ಪುರಾತನನು. ಮಾನವರ ಮನದಂಧಕಾರಕೆ ಭಾನುತೇಜವಾದವನು. ''

ಅಲ್ಲಮಪ್ರಭುದೇವರಿಗೆ 'ವ್ಯೋಮಕಾಯ' 'ಬಯಲಿನ ಒಡಲು' ದೊರೆಕೊಂಡಿತ್ತೆಂದು ಲಿಂಗವಂತರ ಸಾಹಿತ್ಯವೆಲ್ಲ ಸಾರುತ್ತಿದೆ. ಇದಕ್ಕೆ 'ಕಾರಣ ಕಾಯ' 'ಪ್ರಸಾದತನು' ಎಂತಲೂ ಹೆಸರುಗಳುಂಟು.

**ಬಯಲೊಡಲಿಗ ಅಲ್ಲಮನು**

ಇದನ್ನು ಕುರಿತು ಆಲೋಚಿಸಿದಾಗೆಲ್ಲ ಇಂಥ ಶರೀರದ ಸಂಪಾದನೆಯಾಗುವುದು ಶಕ್ಯವಿದೆಯೇ? ಎಂಬ ಶಂಕೆಯು ಎದುರುಗೊಳ್ಳುವುದು. ಅಲ್ಲಮಪ್ರಭುವಿನ ಅನುಭವದ ದುಡಿಮೆಯೇ ಅಂತಹ ವಿಶಿಷ್ಟತೆಯಿಂದ ಕೂಡಿದುದು. ಚಾಮರಸನು ತಿಳಿಸುವ ಪ್ರಭುಲಿಂಗಲೀಲೆಯನ್ನು ಓದಿ ಕೇಳಿ ತಿಳಿದುಕೊಳ್ಳುವ ಅಧಿಕಾರಿಗಳ ನಿಲವಿನ ರೀತಿಯನ್ನು ಪರಿಶೀಲಿಸಿದರೆ ಅಲ್ಲಮಪ್ರಭುವು ಅವರೆಲ್ಲರಿಗಿಂತ ಮಿಗಿಲಾದವನೆಂಬ ಸಹಜವಾಗಿ ಮಿನುಗುವುದು. ಅದರ ಜೊತೆಗೆ ಅಂತಹ ನಿರ್ದೇಹ ಸಂಪಾದನೆಯ ವಿಶಿಷ್ಟ ದುಡಿಮೆಯ ಕ್ರಮವಾವುದೆಂಬ ಪ್ರಶ್ನೆಯೂ ಉದ್ಭವಿಸುವುದು. ಚಾಮರಸನು ಅದನ್ನು ಬಿಡಿಸಿಯೂ ತೋರಿಸಿರುವನು. ಮಾಯೆಯ ವರ್ಣನೆಯಿಂದ ಒಳ ಹೊರಗೆಲ್ಲ ವ್ಯಾಪಿಸಿದ ಮಾಯೆ, ಗೊಗ್ಗಯ್ಯನ ಪ್ರಸಂಗದಿಂದ ಒಳ ಹೊರಗಿಗೆ ಸಾಕ್ಷೀಭೂತವಾದ ಕಾಯದ ಪೋಷಣೆಗೆ ಬೇಕಾದ ತುತ್ತಿನ ಆಶೆ-ಮನದ ಮುಂದಣ ಆಶೆ-ಇವು ಪರಿಯಲು ಅನುಭವ ಸಂಪತ್ತಿಗೆ ಮುಗಿತಾಯವಾದಂತಾಗಲಿಲ್ಲ. ಅನೇಕ ಸಾಧಕ ಸಿದ್ಧರಿಗೆ ಇವೆರಡನ್ನು ಪರಿಹರಿಸಿಕೊಳ್ಳುವುದೇ ಲಕ್ಷ್ಯವಾಗಿ ಬಿಡುತ್ತಿದೆ. ಅಲ್ಲಮಪ್ರಭುವಿಗೆ ನಿಜವಾದ ದುಡಿಮೆಯ ಕ್ರಮವು ಇಲ್ಲಿಂದ ಮುಂದೆ ಸುರುವಾಗುತ್ತಿದೆ. ಅನಿಮಿಷ-ಅಲ್ಲಮರ ವೃತ್ತಾಂತವನ್ನು ಕುರಿತು ಆಲೋಚಿಸುವುದಾದರೆ ಈ ಮಾತಿನ ತಿಳಿಯು ಉಂಟಾಗುವುದು.

" ನೋಟವೇ ಪ್ರಾಣಸ್ವರೂಪಿನ ಮಾಟವಾದ ನಿಮಿತ್ತ, ಲಿಂಗದ ಕೂಟ

ದೊಡನಾದ ಅನಿಮಿಷ್ಯನ ಜೀವ ಕಳೆ ಬಂದು ನಾಟಿತೀತನ ದಿವ್ಯದೇಹದ ಕೊಟರದೊಳು"[೭]

ಎಂದು ಚಾಮರಸನು ತಿಳಿಸುವ ಸಂಗತಿಯ ವಿಮರ್ಶೆ ಮಾಡುವದಾದರೆ ಲಿಂಗವ ಹಸ್ತದಲ್ಲಿರಿಸಿ ನಿರ್ನಿಮಿಷ ದೃಷ್ಟಿಯ ಶಿವಯೋಗ ಸಂಪಾದಕನು ಪಡೆದುಕೊಂಡಿದ್ದ ಅನುಭವದ ಮುಂದಿನ ದುಡಿಮೆಯನ್ನು ಅಲ್ಲಮಪ್ರಭುವು ಹೊಂದಿದ್ದನೆಂಬುದು ಸ್ಪಷ್ಟವಾಗುತ್ತದೆ. ಭಾವದಲ್ಲಿ ಸುಪ್ತವಾಗಿಯೂ, ಗುಪ್ತವಾಗಿಯೂ, ವ್ಯಕ್ತವಾಗಿಯೂ ಅಡಕವಾಗಿರುವ ಜನ್ಮಜನ್ಮಾಂತರದ ಸಂಸ್ಕಾರ ದೋಷವೆಲ್ಲ ಬಯಲಾಗುತ್ತ ನಡೆವಂತೆ ಇಷ್ಟಲಿಂಗದ ದೃಷ್ಟ ದರ್ಪಣದಲ್ಲಿ ನೋಡಿ ನೋಡಿ ಅಂಥ ಒಡಲನ್ನು ಪಡೆದಿದ್ದನವನು. ಭಾವ ಮತ್ತು ಭಾವದೋಷವೆಲ್ಲ ಬಯಲಾದ ಒಡಲೇ ಬಯಲಿನ ಒಡಲು. ಭಾವದಲ್ಲಿ ಶೂನ್ಯತೆಯುಂಟಾಗುವುದು ಮಾಯಾವಾದಿಗಳ 'ನೇತಿ' ಯಲ್ಲ. ಭಾವದೋಷಗಳ ಶೂನ್ಯತೆಯುಂಟಾದಂತೆ ನಿಜ ಜ್ಞಾನದ ನಿರ್ಮಲ ತನುವಿನ ಪೂರ್ಣತೆಯೂ ಉಂಟಾಗುವುದು. ಇಂಥ ಅಸಾಮಾನ್ಯವಾದ ದುಡಿಮೆಯ ಸಂಪಾದಕನೇ ಶೂನ್ಯಸಂಪಾದಕನು ; ಸುಜ್ಞಾನ ಸಂಪಾದಕನು. ಬಯಲಿಗೆ ಆಕಾಶ ವ್ಯೋಮ ಎಂದು ಹೆಸರಿರುವದರಿಂದ ವ್ಯೋಮಕಾಯನೆಂಬ ಹೆಸರೂ ಅವನಿಗೆ ಸಲ್ಲುವದು. ಭಾವದೋಷವಡಗಿ ಪ್ರಸನ್ನವಾದ ನಿರ್ಮಲವಾದ ತನುವೆಡೆಗೊಂಡ ದೆಸೆಯಿಂದ ಪ್ರಸಾದತನುವದು; ನಿರ್ಮಲತನುವದು. ಇಂತಹ ಶರೀರದಲ್ಲಿ ಆಗು ಹೋಗುಗಳ ಕಾರಣವನ್ನು ಸಹಜವಾಗಿ ತಿಳಿವ ಶಕ್ತಿಯು ಮೂಡುವುದರಿಂದ ಕಾರಣಶರೀರವದು. ಭಕ್ತರ ಭಾವದ ನುಡಿಗಳು ಮತ್ತು ಸಂಕಲ್ಪಗಳು ಇಂಥ ಮಹಾಘನನನ್ನು ತಟ್ಟುವ ಮೊದಲೆ ಆ ಮಹಾಕಾಯದ ದಿವ್ಯಪ್ರಭೆಯಿಂದ ಹೊರಚಿಮ್ಮುತ್ತಿರುವ ಕಿರಣಗಳು ಆ ಭಕ್ತರನ್ನು ತಟ್ಟಿ ಅವರನ್ನು ಎಚ್ಚರಗೊಳಿಸುವವು. ಅವರ ಮರವೆಯ ಮುಸುಕು ಓರೆಯಾಗಿ ಅವರಲ್ಲ ದಿವ್ಯಪ್ರಕಾಶವು ಬೆಳಗುವುದು. ಇಂಥ ಶರೀರವು ಮಾಯೆಯ ಅಪ್ಪುಗೆಗೆ ಸಿಲುಕದು; ನಿರಹಂಕಾರ ಸುಜ್ಞಾನಿಗಳ ಮೇಳವನೊಲ್ಲದೆ ಇರದು; ಬರಿಯ ಅರಿವಿಂಗೆ ನಿಲುಕದು; ಭಾವಿಸಲು ಒಂದೂ ಇಲ್ಲದುದರಿಂದ ಇನ್ನೊಂದ ಕಲ್ಪಿಸದು. ಮಳೆಗೆ ನನೆಯದು, ಗಾಳಿಗೆ ಒಲೆಯದು. ಕಲ್ಲು ಗುಂಡುಗಳಿಗೆ ಹಣಿಯದು; ತೆಕ್ಕೆಯೊಳೆ ಬಂಧಿಸಲ್ಕು ಬಾರದು; (ನೊಸಲಗಣ್ಣಿನ) ಬೇಗೆಯಲಿ ಬೇಯದು. ಹರಿತವಾದ ಕತ್ತಿಯ ಮೊನೆಗೆ ಧ್ವನಿಗುಡದು. ಮಸಣಿಯ ಮಾಡಿ ಸೀಡಿ ಉಣಿಸ ಬಯಸಿದರೆ ತಣಿವುಗೊಳ್ಳದು. ಅಷ್ಟು ತೆಳವೂ, ಹಗುರೂ, ಬಚ್ಚಬರಿದೂ, ಪ್ರಕಾಶಮಯವೂ, ಜ್ಞಾನಭರಿತವೂ,

೭. ಪದ್ಯ ೫೮. ಗತಿ ೧೧.

ಪ್ರಸನ್ನಪರಿಣಾಮವೂ ಆಗಿರುವುದು ಆ ಬಯಲಿನ ಒಡಲು ! ಇಂಥ ಒಡಲು ಸಾಧ್ಯವಾಗುವುದು ಕೇವಲ ಲಿಂಗಾನುಸಂಧಾನದಿಂದ ಎಂಬುದನ್ನು 'ಲಿಂಗದ ಚಿಂತೆಯಲಿ ಮರವಟ್ಟ ಮೆಯ್ಯ ಮಹಂತ' 'ಶಿವಲಿಂಗ ಭಕ್ತಿಯ ದಾರಿಯನು ನಾನನಿಮಿಷನ ಸಾಕಾರದಲಿ ಕಂಡರಿದೆ' 'ಲಿಂಗಜ್ಞಾನ ವಹ್ನಿಯಲಿ ಬೆಂದು ಹೋದೊಡಲುಗನು' 'ತನುವಿಡಿದು ಕಾಂಬುದು ಸಮಸ್ತವನು ಆದರಿಸಿ, ಈ ತನುವ ಲಿಂಗೋಪಾಧಿಯಲಿ ಜೋಗೈಸಿಕೊಳುತಲಿ ಸಾಧಿಸುವುದು ಸಮಾಧಿಯನು' 'ನಿನ್ನ ಕೈಯಲಿದೇನು ಕುರುಹಿನ ಲಿಂಗವಿದೆ ?' ಮುಂತಾದ ಶಬ್ದಗಳಿಂದ ಚಾಮರಸನು ತಿಳಿಸಿರುವನು. ಯೋಗಾನುಸಂಧಾನದ ಸಾಮರ್ಥ್ಯದಿಂದ ತಿಬೇಟ, ಹಿಮಾಲಯಗಳಲ್ಲಿ ಅತಿ ಹಗುರು ದೇಹಸಿದ್ಧಿಯ, ಅತಿ ತ್ವರಿತ ಗತಿಸಿದ್ಧಿಯ ಪಡೆದ ಸಿದ್ಧರು ಈಗಲೂ ಸಿಗುವರು. ಆದುದರಿಂದ ಪ್ರಭುದೇವರಿಗೆ ನಿಲುಕಿದ ಒಂದು ಯೋಗಾನುಸಂಧಾನದಿಂದ ಇಂಥ ಪ್ರಸನ್ನಪರಿಣಾಮದ ಪ್ರಸಾದತನು-ನಿರ್ಮಲಕಾಯ-ಸುಜ್ಞಾನಶರೀರ-ಬಯಲಿನ ಒಡಲು ಅವರಿಗೆ ಎಡೆಗೊಂಡಿತ್ತೆಂಬುದು ನಿಸ್ಸಂದೇಹವಾದುದು.

**ಅಲ್ಲಮಪ್ರಭುವಿನ ದಿಗ್ವಿಜಯ**

ನಿರ್ವಯಲ ಒಡಲಿನ ಅಲ್ಲಮಪ್ರಭುವು ಮಾಯೆಯ ಮದವ ಮುರಿದು ಚಾಮರಸನ ಅಭಿಪ್ರಾಯದಂತೆ ಮೊದಲಿಗೆ ಕಾಣಿಸುವುದು ಗೊಗ್ಗಯ್ಯನಿಗೆ. ಅವನೊಬ್ಬ ಶುದ್ಧ ಲೌಕಿಕ, ಆದರೂ 'ಈಶ್ವರ ಭಾವ ಭಕ್ತ'. ಭೂಮಿಯಲ್ಲ ಬೆವಸಾಯವನು ಮಾಡುತ್ತಲಿದ್ದ ಅವನನ್ನು ನೋಡಿ 'ಸಿಕ್ಕಿತಲ್ಲಾ ಲೋಕವಿಪರಿ ಕಕ್ಕುಲಿಸಿ ಒಡಲಾಸೆಗೆ ! ಅರಿವನು ಲೆಕ್ಕಿಸದೆ ! ಈತನನ್ನು ಉಪಾಯ ಭೇದದಿಂದ ಒಡಂಬಡಿಸಿ ಭಕ್ತಿಯ ಹಾದಿಯನು ಹತ್ತಿಸುವೆನು !' ಎಂದು ಲಿಂಗಮಾರ್ಗವ ಸಾಧಿಸುವ ಸಾಧಕನಂತೆ ಸಂವಾದಿಸುವನು; ತೋಟಿಗನ ಬುದ್ಧಿಗೆ ತಿಳಿವ ತೀಡುವನು. ಬಂಧನಪ್ರದ ಬಾಹ್ಯಕರ್ಮವನೊಂದು ಗೂಡಿ ನಿರ್ಭಾವದಂಗವನರಿಯದೆ ಹೋದರೆ ಕಲ್ಲ ಕಡಲೆಯ ಮಿಲ್ಲದಂತಾಯಿತೆಂದು, ಕಬ್ಬಿನಿಚ್ಛೆಗೆ ಬಿದಿರ ಮೆಲುವಂತಾಯಿತೆಂದು ಗೊಗ್ಗಯ್ಯನಿಗೆ ಹೊಳೆಯಲು ಅಲ್ಲಮನು ಅವನಿಗೆ ಲಿಂಗಧ್ಯಾನದಂಗದ ಅನಿಮಿಷನ ದೃಷ್ಟಿಯನ್ನು ತೋರಿಸುವನು. ಗೊಗ್ಗಯನಂಥ ಲೌಕಿಕ ಭಕ್ತನು ಅಲ್ಲಮನ ಯೋಗದಿಂದ ಕಂಗಳೆ ಕರುಳುಗಳಾಗಿ ಎಲುವೆ ಸದಂಗವಾಗಿ, ನೆರೆ ನಟ್ಟಾಲಿಯಲಿ ನಿಬ್ಬೆರಗಿನಲಿ ಶಿವಲಿಂಗ ಭಕ್ತಿಯ ಹೃದಯವನು ಸಾಧಿಸುವ ಪರಿಯನರಿಯುವನು. ಬರಿಯ ಅರಿವಿಂಗೆ ಭೇದಿಸಬಾರದ ಇರವನರಿವನು. ಹೀಗೆ ಬಯಕೆಯ ಕಡೆಯ ಕಾಣುವನು.

ಮಾಯೆಯನ್ನು ಇಳಿಕೆಗೆಯ್ದುದೂ ಗೊಗ್ಗಯ್ಯನನ್ನು ಬೆಳಕಿಗೆ ತಂದುದೂ ಅಲ್ಲಮಪ್ರಭುವು ಸಾಧಿಸಬೇಕೆಂದಿದ್ದ ಕಾರ್ಯಗಳಲ್ಲಿ ಶ್ರೇಷ್ಠವಾದವುಗಳು. ಇವೆರಡರ ಗೆಲವಿನಿಂದ ಲೋಕವ ಗೆಲುವ ಮತ್ತು ಅದರ ಒಲಿಮೆಯನ್ನು ಬಲಿವ ಯೋಗ್ಯತೆಯು

ನಿಲುಕಿತು; ಇಲ್ಲಿಂದ ಮುಂದೆ ಸುಗಂಧ ಸುಮವ ಹುಡುಕಿ ಹೊಂದುವ, ಹೊಂದಿ ಆನಂದಗೊಳ್ಳುವ ತುಂಬಿಯ ಭಾವ ತುಂಬಿಕೊಂಡು ಅಲ್ಲಮಪ್ರಭುವು ಅಲೆದಾಡುವನು.

**ಮಲಪರಿಹಾರಕ ಅಲ್ಲಮ**

ಮಾಯೆಯ ಪ್ರಸಂಗದಿಂದ ಪ್ರಭುವು ಮಾಯಾ ಮಲವ ಕಳೆವ ತೆರನನರುಹಿದರೆ ಗೊಗ್ಗಯ್ಯನ ಪ್ರಸಂಗದಿಂದ ಅವನು ಆಣವ ಮಲವ ಕಳೆವ ರೀತಿಯನರುಹುವನು. ಲೈಂಗಿಕ ಭಾವ ವ್ಯವಹಾರದ ಮರೆಯಲ್ಲಡಗಿದ ಮಾಯಾ ಮಲ (Sex-instinct) ಮತ್ತು ದೈಹಿಕ ಭಾವ ವ್ಯವಹಾರದ ತೆರೆಯಲ್ಲಡಗಿದ ಆಣವ ಮಲ (Food-instinct) ಇವುಗಳ ಕಾಣುವ ಇಲ್ಲವೆ ಕಾಣದ ಮರವೆಯ್ಯ ಕಾರ್ಯಗಳೆಲ್ಲ ಕರ್ಮಮಲ (Power-instinct) ದಲ್ಲಿ ಪರಿಣಮಿಸುವುವು. ಲೋಕದ ಒಡನಾಟವೆಲ್ಲ ಈ ಮಲತ್ರಯದ ತೊಡಕಿನಲ್ಲಿಯೇ! ಪ್ರಭುವು ಬಂದುದು ಈ ತೊಡಕನ್ನು ಬಿಡಿಸಲು. ಮಾಯೆಯು 'ಕಾಮ-ಪ್ರೇಮ ಭಕ್ತಿಯ' ಮಾಡುವಳು; ನಿರಹಂಕಾರ ಸುಜ್ಞಾನಿಗಳು ಸಮಾಧಿಯ ಕೇಳಿಗೋಸುಗ ರೂಹಿಸಿ ಬಾಲಭಾವಚ್ಛವಿಯ ತೋರಿದ ಅಲ್ಲಮನೇ ತಮ್ಮ ಶಿಶುವೆಂದು ತಿಳಿದುಕೊಳ್ಳುವರು;ಗೊಗ್ಗಯ್ಯನು ಗಳಿಸಿದರ್ಥವ ಲಿಂಗಜಂಗಮಗಳಿಗೆ ನೀಡಿ ಒಕ್ಕ ಮಿಕ್ಕುದನುಂಡು ಸುಖಿಯಹುದೇ ಶಿವಭಕ್ತಿ ಎಂದು ಭಾವಿಸಿಕೊಳ್ಳುವನು; ಮುಕ್ತಾಯಿ ಅಕ್ಕನು ನಿಃಕಾಯದ ಅಜಗಣ್ಣಂಗೆ ಚಿಂತಿಗೆಯ್ಯುವಳು; ಸಿದ್ಧರಾಮ ಶಿವಯೋಗಿಯು 'ಗೋಳುಮಂಡೆಯ ಕೀರ್ತಿಗೋಸುಗ ಕೋಳು ಹೋಗಿ, ಸಾವ ಹುಟ್ಟುವ ಕರ್ಮಬಂಧದ ನುಡಿಯ ನುಡಿದು ತೋರುತ್ತಿದ್ದ ಅಲ್ಲಮನ ಭಾವ ಸೊಗಸದೆ ಕೋಪದುರಿಯಲಿ ಕಿಡಿಕಿಡಿವೋಗಿ ಹಣೆಯ ಕಣ್ಣಿನ ಕಿಡಿಯ ಕೆದರುವನು;' ಗೋರಕ್ಷನು ಮಾಯಾಪ್ರಪಂಚಿನ ದೇಹ ಸಿದ್ಧಿಯ ಪಡೆದಿಹೆನೆಂದು ಹಮ್ಮೈಸುವನು. ಪ್ರಭುವಿಗೆ ಇವೆಲ್ಲ ಮಾಯಾವಿಲಾಸದ ಪ್ರಸರಣೆಗಳು.

ಪ್ರಭುವು ಮನೆಯ ಬಾಗಿಲಿಗೆ ಬರಲು 'ಕಡಲನೀಸಾಡುವಗೆ ತಾಮಸವಡರಿದಂತೆ ಅನುವನರಿಯದೆ ರಾಜಸದ ಹಮ್ಮಿನಲಿ' ಬಸವನು ಸೇವಕರ ಬಳಿಯಟ್ಟುವುದೂ ಮತ್ತು ಮಾಟಕೂಟ (ದಾಸೋಹ)ದ ಬುದ್ಧಿ ಮಮಕರಿಸಿ ಆವ ಮುಖದಲಿ ಬಂದು ಬೇಡಿದೊಡೀವೆನೆನ್ನುವುದೂ, ಶರಣರು ಆಡಂಬರದ ಭಕ್ತಿಯಲಿ ತಾಮಸವ ತಕ್ಕೈಸಿ ಸಾತ್ವಿಕ ಸೀಮೆಯನು ತಾವರಿಯದೆ ತಾರತಮ್ಯ ತಿಳಿವಳಿಕೆಗೆ ಹೊರಗಾಗಿರುವುದೂ ಮತ್ತು ಇಷ್ಟಲಿಂಗದ ನೆನಹೇ ಶ್ರೇಷ್ಠವೆನ್ನುವುದೂ,ಮಹದೇವಿ ಅಕ್ಕನು'ಭಕ್ತಿ ಬೇಟದ ಬೆಸನದಲಿ ಮೈಮರೆತು ಲಜ್ಜೆಯ ಹೆಸರ ಹೆಮ್ಮೆಯ ಕೆಡಿಸಿ ತನುಮೋಹವನು ಪಲ್ಲಟಿಸಿ ಹಸು ತೃಷೆಯ ಹರವರಿಗಳನು ಭಂಗಿಸಿ ದಿಗಂಬರೆ' ಯಾದರೂ ವಾಗಾದ್ವೈತ ಭಕ್ತಿಯನು ಬಳಸುವುದೂ, ಭಕ್ತರಾದವರು ಅಂತಃಕರಣವೃತ್ತಿಗಳ ಬೆಸುಗೆಯನೆ

ಬಿಡಿಸಿ ಭಕ್ತಿ ದ್ವಾರವನು ಹುಗದೆ ಅನ್ಯಮಾರ್ಗದಲಿ ಕಣ್ಣುಕಾಣದೆ ನಡೆಯುವುದೂ, ಮುನಿ ಯೋಗಿಗಳು ನಿಜದ ಬಟ್ಟೆ ತಿಳಿಯದೆ ಸಾಧನೆಗೆ ನಾನಾಪ್ರಕಾರಗಳಾದ ಬಗೆಗಳನಿಟ್ಟುಕೊಳ್ಳುವುದೂ, ಮತ್ತು ಇವರೆಲ್ಲರು ತಮತಮಗೆ ಹೊಳೆದ, ತಿಳಿದ, ಅಳವಟ್ಟ ವಿಷಯವು ಶ್ರೇಯವೆಂದು ಪ್ರೇಯವೆಂದು ಭಾವಿಸಿದುದೂ ಮಾಯಾ ವಿಲಾಸದ ಪ್ರಸರಣೆಯಲ್ಲಿ ರೂಪಗೊಳ್ಳುವುವು. ಅನುಭವದ ಪ್ರಗತಿಯ ಮುನ್ನೋಟ ವಿಲ್ಲದೆ ಹೀಗೆ ತಮತಮಗೆ ತೋರಿದುದೇ ಮೀರಿದ ಅನುಭವವೆಂದು ಇವುಗಳಿಗೆ ಅಂಟಿಕೊಳ್ಳುವುದು ಅಲ್ಲಮಪ್ರಭುವಿನ ದಿವ್ಯದೃಷ್ಟಿಗೆ ಸಂಸಾರದ ಜಂಜಡ— ಪೂರ್ವಾಶ್ರಯದ ಹಂಗು ಆಗುವುದು. ಅನುಭವ ವಿಕಾಸಕ್ಕೆ ಅಡ್ಡಲಾಗಿರುವ ಈ ಮಾಯಾ ವಿಲಾಸವ ಈ ಸಂಸಾರ ವ್ಯಾಪ್ತಿಯ ಈ ಪೂರ್ವಾಶ್ರಯವ ಪರಿಹರಿಸುವುದೇ ಅಲ್ಲಮ ಪ್ರಭುವಿನ ಮಹದಾದ ಮಣಿಹ.

ಮಾಯೆ ಗೊಗ್ಗಯ್ಯರನು ಮೊದಲುಗೊಂಡು ಯತಿ ಮುನಿಯೋಗಿಗಳ ವರೆಗಿನ ಆತ್ಮರುಗಳ ಸೂಕ್ಷ್ಮತಮವಾದ ಸ್ವಭಾವವನ್ನೂ ಅವರವರ ನಿಲವನ್ನೂ ಅಳೆಯು ವಷ್ಟು, ಮತ್ತು ಅವರವರಿಗೆ ತಿಳಿಯದಂತೆ ಅಂಟಿದ ತಾಮಸದ ಮುಸುಕಿನ ಸೂಕ್ಷ್ಮ ತೆಯನರಿತು ಅದನ್ನು ಓರೆಮಾಡುವಷ್ಟು ಪರಿಪೂರ್ಣ ಅರಿವೂ, ಪ್ರಸರ ಮತಿಯೂ, ಕುಶಾಗ್ರ ಬುದ್ಧಿಯೂ, ದಿವ್ಯದೃಷ್ಟಿಯೂ, ಅನುಭವ ಸಂಪತ್ತಿಯೂ ಅಲ್ಲಮಪ್ರಭುವಿ ಗಿದ್ದುವು; ಆದುದರಿಂದಲೇ ಅವನು ಹಿಂದನು ಹರಿದು ಮುಂದನರಿವ ಘನವಾದ ಕಾರ್ಯವನ್ನು ಕೈಕೊಂಡು ಚರಿಸುವ ಜಂಗಮಪ್ರಭುವಾದನು.

ಇಂತಪ್ಪ ಜಂಗಮಪ್ರಭುವು ಚರಿಸುವದು ಭಕ್ತಿ ಭಿಕ್ಷೆಗಾಗಿ. ಜಗದ ಭಕ್ತರು ಅದಾವ ಮುಖದಲಿ ಹೊಗುತಲಿದ್ದರೊ ಆ ಬಗೆಯನಂಗೀಕರಿಸಿಕೊಂಡು, ಅವರವರಿಗೆ ಅವರವರ ಆ ಪ್ರೀತಿಯಲಿ ರೂಪಾಗಿ ತೋರಿ; ಆರಾರ ಭಾವದ ಭಂಗಿ ಎಂತಿಹುದೋ ಅಂತು ವಚನಗಳ ನುಡಿದು, ತನುಮನಚ್ಛಾಯೆಗಳ ತೋರಿ; ಆರಾರು ಅದಾವ ಆಚರಣೆ ಗಳನಾಚರಿಸುತಿಹರೊ ಆ ಪರಿಯಲಿ ಅವರಿಗೆ ಯಥೋಚಿತ ಸುಪ್ರಸನ್ನತೆಯ ಕರುಣಿಸಿ, ಸುಖಿಗಳ ಮಾಡಿ; ಆರಾರ ಬುದ್ಧಿಯ ಭಾವವು ಅದಾವ ಪರಿಯಲಿಹುದೋ ಅವರಿಗೆ ಆ ಭಾವವನು ಶುದ್ಧೈಸಿ, ಸಮ್ಯಕ್ ಜ್ಞಾನಜ್ಯೋತಿಯ ತೀವಿ ಆನಂದಗೊಳಿಸುವನು.

**ಭಕ್ತಿ ಭಿಕ್ಷಾಂದೇಹಿ ಅಲ್ಲಮ**

ಅಲ್ಲಮಪ್ರಭುವು ತನ್ನ ಪರುಷ-ದೃಷ್ಟಿ-ಧ್ಯಾನಪಥದಲ್ಲಿ ಬರುವ ವ್ಯಕ್ತಿಗಳ ಭಕ್ತಿಯ ತೆರನನು ಅದರ ಕೊರತೆಯನು ಅರಿತುಕೊಂಡು, ಅವರವರ ಯೋಗ್ಯತೆಗನು ಸರಿಸಿ ಅವರನ್ನು ಹೊಸ ಹಾದಿಯ ಹಿಡಿಸುತ್ತಿದ್ದ ರೀತಿಯು ಒಳ್ಳೇ ಮಾರ್ಮಿಕವಾದುದು. ಮಮಕಾರ ಮೋಹಿನಿಯರ ಒಡಲಲ್ಲಿ ಜನಿಸಿದ ಮಾಯೆಯು ಅಹಂಕಾರ ಗುರುವಿನ

ಹಸ್ತದಲ್ಲುದಿಸಿ, ಇನಿಯನ ಬಯಸಿ ಮಧುಕನಾಥನ ಪೂಜೆಗೆಯ್ಯುವುದು ತಾಮಸ ದಿಂದ ತುಂಬಿದುದು. ಅದಕ್ಕೋಸುಗ ಅಲ್ಲಮಪ್ರಭುವು ಆಕೆಯಲಿ ಸಂಶಯದ ಸಂಗವನು ನಟಿಸುವನು. ಮಾಯೆಯು ಮನದ ಕಾಳಿಕೆಯ ಕಳೆದುಕೊಂಡು ಭಕ್ತಿಯ ನಾಚರಿಸಿದರೆ ಒಂದು ಲೇಸು, ಇಲ್ಲದೆ ಹೋದರೂ ಒಂದು ಲೇಸು ಎಂದು ಆಕೆಯ ಲಾಸ್ಯಕ್ಕೆ ಸರಿಯಾದ ತಾಳವನ್ನು ಮದ್ದಳೆಯ ಇಬ್ಬದಿಯಲ್ಲಿಯೂ ಬಾರಿಸುವನು. ಭಕ್ತಿರತನಾದ ಶ್ರೀ ಗುರುವಿನುಪದೇಶವಿಲ್ಲದೆ ಮಾಡುವ ದೇವಾರ್ಚನೆಯು, ಚಿತ್ತದ ಕಣ್ಣು ತೆರೆಯದೆ ಮೀಸಲಗೆಟ್ಟ ಸಾಧನಗಳಲಿ ಮಾಡುವ ಪೂಜೆಯು ಮತ್ತು ದೇವತಾ ಮುಖದ ವಿವರಗಳನರಿಯದೆ ಮಾಡುವ ಪೂಜೆಯು ನಿಷ್ಫಲವೆಂದು ವಿಮಳೆಯ ಸಂಗದಿಂದ ತಿಳಿದರೂ ನಿಜಸ್ವಭಾವದ ಮತ್ತತನದಿಂದ ಮಾಡಿದನಿತರ ಕರ್ಮಫಲವನ್ನು ಕೈಗೂಡಿಸಿಕೊಳ್ಳಲು ಮಾಯೆಯು ಹಂಬಲಿಸುವಳು, ಹಾತೊರೆಯುವಳು; ಹಸ್ತಕೆ ನಿಲುಕದಿರೆ ಹಾಯಾಗುವಳು. ಹರನನರ್ಚಿಸುವ ಅಂಗಭೇದಾಂತರವನರಿಯದೆ ಇಮ್ಮನ ವಾಗಿ ಭಕ್ತಿಯ ಮಾಡಿ ಫಲವ ಪಡೆಯದೆ ನೆರಳುವಳು. ಪರಮತತ್ತ್ವಜ್ಞಾನವಿಲ್ಲದೆ ತೆರಳುವಳು. ಚಂಚಲಭಕ್ತಿಯ ಭರದಲಿ ಬಂದುದುಂಟೇ ಸಂಫಲವು? ಕಾಮಿಸಿ ಕೈಕೊಳ್ಳುವ ಭಕ್ತಿಭಾವದ ಕೊನೆ ಇಂತುಂಟು!

ಈ ತರಹದ ಸಕಾಮುಭಕ್ತಿಯು ಶುದ್ಧ ತಾಮಸದಿಂದ ಬೆರೆತುದು. ನಿಷ್ಕಾಮ ಭಕ್ತಿಯಲಿರುವ ಸಾತ್ವಿಕರಿಗೆ ಅಲ್ಲಮಪ್ರಭುವು ತನ್ನ ತಾನೇ ನಿಜವ ತೋರುವ ರೀತಿಯೂ ಸಹ ವಿಚಿತ್ರವಾದುದೇ! ಅಲ್ಲಿ ಸಾತ್ವಿಕ ಸ್ವಭಾವಕ್ಕೆ ತಿಳಿಯದಂತಿರುವ ಸೂಕ್ಷ್ಮವಾದ ಸಾತ್ವಿಕ ಅಹಂಕಾರದಿಂದ ಬೆರೆತ ಭಕ್ತಿಭಾವದ ರೀತಿಯ ವಿವರಣೆ ಯನ್ನು ಕಾಣಬಹುದು. ಗೊಗ್ಗಯ್ಯನು ಮಾಡುವ ಶಿವಭಕ್ತಿಯಲ್ಲಿ ಸಾತ್ವಿಕತೆ ಇದೆ, ಅದು ಹಿರಿದೆಂಬ ಭಾವವೂ ಇದೆ. ಮುಕ್ತಾಯಿ ಅಕ್ಕನಿಗೆ ಅಜಗಣ್ಣನಿಗಿಂತ ಬಲ್ಲಿದರು ಇಲ್ಲವೆಂಬ ಭಾವದಲ್ಲಿ ಇವೆರಡೂ ಅಡಗಿವೆ. ಆದುದರಿಂದ ಆಕೆ 'ಮನದ ವಿಕಾರಿ'! ಸಿದ್ಧರಾಮನು ಸಲ್ಲಿಸುತ್ತಿರುವ ವಿಖ್ಯಾತಿಪೂಜೆಯಲ್ಲಿ ಲಾಭ ಪಡೆವ ಇಚ್ಛೆಯೂ, ಕಿಡಿಕಣ್ಣ ಪಡೆದಿಹೆನೆಂಬ ಹಮ್ಮೂ ಬೆರೆತಿವೆ. ಬಸವನ ಭಕ್ತಿಯಲ್ಲಿ ದಾಸೋಹದ ಸಾತ್ವಿಕಭಾವವೂ ತಾನೊಬ್ಬ ಭಕ್ತನೆಂಬ ಅಭಿಮಾನವೂ ಒಡಮೂಡಿವೆ. ಗೋರಕ್ಷನ ಕಾಯಸಿದ್ಧಿಯ ಮದವು ನೆತ್ತಿಗೇರಿ ಅವನಲ್ಲಿ ಸಾತ್ವಿಕದ ಸುಳಿವನ್ನು ಅಡಗಿಸಿ ಬಿಟ್ಟಿದ್ದರೆ, ಮುನಿಯೋಗಿಗಳ ಸಾತ್ವಿಕ ನಡತೆಯಲ್ಲಿ ತಾವು ಸಾಧಿಸಬೇಕಾದು ದೇನೆಂಬ ಅರಿವು ಇಲ್ಲದೆ ಹೋಗಿದೆ. ಎಲ್ಲರೂ ಲೋಕದ ಕಣ್ಣಿಗೆ ಘನವಂತರಾಗಿ ಕಂಡರೂ ಅವರಾಚರಿಸುತ್ತಿದ್ದ ಶುದ್ಧ ಶೈವಭಕ್ತಿ, ಸಾತ್ವಿಕಭಕ್ತಿ, ಗುಪ್ತಭಕ್ತಿ, ಕೀರ್ತಿವಾರ್ತೆಯ ಭಕ್ತಿ, ಮಾಡಿ ನೀಡಬೇಕೆಂಬ ದಾಸೋಹಭಕ್ತಿ, ಹಮ್ಮಿನಭಕ್ತಿ, ಮುಗ್ಧಭಕ್ತಿ ಇತ್ಯಾದಿ ವಿವಿಧ ಭಕ್ತಿಗಳ ಕುಂದುಕೊರತೆಗಳು ಹಿಂಗಿದ ಹೊರತು

ಮುಂದಿನ ಮೆಟ್ಟಲು ನಿಲುಕದೆಂದು ಬಗೆದು ಅಲ್ಲಮಪ್ರಭುವು ಅವರವರಿಗೆ ಆ ಆ ತೆರನಾಗಿ ಕರುಣಿಸುವನು.

ಅವರವರಿಗೆ ಮನವೊಲಿದುದೇ ಬ್ರಹ್ಮವೆಂದು ಹೇಳುವದಿದೆಯಷ್ಟೇ! ಚಾಮರಸನಾದರೂ ಅವರವರಿಗೆ ಮನವೊಲಿದುದೇ ಲಿಂಗವೆಂದು ಸೂಚಿಸುವನು. ಅಲ್ಲಮಪ್ರಭುವನ್ನು ಕಾಣುವ ಮೊದಲು ಲೌಕಿಕರು, ಶೋಧಕರು, ಸಾಧಕರು, ಸಿದ್ಧರು ಇವರೇ ಮೊದಲಾದವರಿಗೆ ಭಾವಿಸಿದುದೆಲ್ಲ ಮತ್ತು ಭವ್ಯವೆಂದು ತಿಳಿದುದೆಲ್ಲ ಲಿಂಗವೆನಿಸಿತ್ತು. ಅವರು ಆ ತಮ್ಮ ತಿಳಿಯಲ್ಲಿ ಆಳವಾಗಿ ಇಳಿದುದರಿಂದ ತಾವು ಲಿಂಗದಲ್ಲಿ ತದ್ಗತವಾಗಿರುವೆವೆಂಬ ಬಗ್ಗೆ ಅವರಿಗೆ ತುಂಬ ಅಭಿಮಾನ. ಪ್ರಭುವು ಈ ಅಭಿಮಾನವನ್ನು ಅಳುಕಿಸಿ ಅದನ್ನಲ್ಲವೆನಿಸಿಬಿಟ್ಟುದರಿಂದ ಅವನು ಅಲ್ಲಮಪ್ರಭುವು. ಆ ಪ್ರಭುವು ಸರ್ವಜೀವ ಮನಃಪ್ರೇರಕನಾಗಿ ಭಾವಭರಿತ ಅಗಮ್ಯನಾಗಿ ಅಖಂಡ ಪರಿಪೂರ್ಣನಾಗಿ ಅವರ ನೆನಹಿಗೆ ಶುದ್ಧ ಸ್ವಯಂಪ್ರಕಾಶಮಯನಾಗಿ ಬಂದುದರಿಂದ ಅವನು ಪ್ರಭುಲಿಂಗನು.

**ಅಲ್ಲಮಪ್ರಭುಲಿಂಗ**

ತಮದ ಮಾಯೆಯು ತಮವಳಿದುದಾದರೆ ದ್ಯುಮಣಿಯಲ್ಲಮನೆ ಆಕೆಗೆ ಲಿಂಗವಾಗುತಿದ್ದನು. ಮಾಯೆಗೆ ಇದು ನಿಲುಕದೆ ಹೋಯಿತು. ಸುಜ್ಞಾನಿ ನಿರಹಂಕಾರರಿಗೆ ಅಂತರಂಗದಲ್ಲಿ ಐಕ್ಯಭಾವಸ್ಥಳವ ಕಾಣುವುದೂ ಬಹಿರಂಗದಲ್ಲ ಪರಿಪೂರ್ಣಮಯ ಪ್ರಭುವ ನೋಡುವುದೂ ಲಿಂಗಧ್ಯಾನವಾಯಿತು. ಲೌಕಿಕ ಭಕ್ತ ಗೊಗ್ಗಯ್ಯನಿಗೆ ಅನಿಮಿಷನ ದೃಷ್ಟಿಯನ್ನು ಸಾಧಿಸಿಕೊಳ್ಳುವುದೂ ಮತ್ತು 'ಅಜಗಣ್ಣ'ನ ಅನಿಮಿಷ ದೃಷ್ಟಿಯೋಗದಲ್ಲಿದ್ದ ಮುಕ್ತಾಯಿ ಅಕ್ಕನಿಗೆ ಮನಸಿನ ಮುಖದ ಕತ್ತಲೆ ತಿಳಿದು 'ನಿತ್ಯಾನಂದ ನಿರ್ಮಲ ತನುವ' ಪಡೆಯುವುದೂ ಲಿಂಗದ ನೆಲೆಯನ್ನು ತಿಳಿಯುವ ಕಾರ್ಯಗಳಾದುವು. ಸಿದ್ಧರಾಮೇಶ್ವರನಿಗೆ ಒಳಗು ಹೊರಗು ನೀತಿ ಪ್ರೀತಿ ಎಂಬ ಕವಲುವಟ್ಟೆಗಳಲ್ಲಿ ಮಧ್ಯಮಾರ್ಗದ ಬಳಿವಿಡಿವ ಬಗೆಗಂಡು, ಕಾಯಕರಣದ ಸಂದು ಸಂಬಂಧವನರಿತು,ಜೀವಪರಮರನು ಒಂದು ಮಾಡುವ ಶಕ್ತಿ ಭಕ್ತಿಗಳ ಬೆಸುಗೆಯನು ಕಾಣಿಸುವ ದೃಷ್ಟದ ಇಷ್ಟವೇ ಲಿಂಗವಾಯಿತು. ಬಸವನಿಗೆ ಇಷ್ಟಲಿಂಗನೆನಹಿನಲಿ ಅಂಗವಿಸುವ ಪ್ರಾಣಲಿಂಗದ ಅನುಸಂಧನವೇ ಲಿಂಗಪೂಜೆಯಾಯಿತು. ಮಹಾದೇವಿ ಅಕ್ಕನಿಗೆ ಕಾಯದಲಿ ಕಲಿತನ ಹೊಂದಿ, ಕಾಯವಳಿಯದೆ ಶಿವನ ಕೂಡುವ ಏಕಮೇವ ಹಂಬಲವೆಡೆಗೊಂಡು,ನಿರ್ಮಲ ಭಾವ ಭೂಮಿಯಲ್ಲಿ ಪ್ರಭುವಿನ ಕದಲದ ಅನುಸಂಧಾನವನ್ನು ಕೈಗೂಡಿಸಿಕೊಳ್ಳುವುದೇ ಲಿಂಗದ ಲೀಲೆಯಾಯಿತು. ಇನ್ನುಳಿದ ಶರಣರಿಗೆ ಜ್ಞಾನಕರಣದ ಶುದ್ಧಿಯಿಂದ ದೊರೆಕೊಂಡ ವ್ಯೋಮಕಾಯಸಿದ್ಧನ ಶರಣಸ್ಥಲ ಸಂಪಾದನೆಯೇ ಲಿಂಗಾನುಭವವಾಯಿತು. ಪ್ರಭುವಿನ ಕೈಯಲ್ಲಿ ಶೂನ್ಯದ ಲಕ್ಷದ ದೀಕ್ಷೆಯ ಪಡೆದ ಕಾಯಸಿದ್ಧಿಯ ಗೋರಕ್ಷನಿಗೆ ಪ್ರಕಾಶಮಯ ಬಯ

ಲೊಡಲಿನ ಸಾಧನೆಯೇ ಲಿಂಗನಿರೀಕ್ಷಣೆಯಾಯಿತು. ಮುನಿಯೋಗಿಗಳಿಗೆ ಸಿದ್ಧ ಸಾಧಕರಿಗೆ ಪ್ರಭುವು ನಿಲಕಲಿಸಿದ ನಿಃಪ್ರಪಂಚಿನ ನೆಲೆಗಾಣುವುದೇ ಲಿಂಗನೆನಹಾಯಿತು. ಇನ್ನುಳಿದವರ ಅರಿವಿಂಗೆ ನಾಟಿಸಿದ 'ಅರಿವೇ' ಅವರಿಗೆ ಲಿಂಗವಾಯಿತು. ಹೀಗೆ ಅಖಿಳರಿಗೆ ಅಲ್ಲಮಪ್ರಭುವು ಲಿಂಗವಾಗಿ ತೋರಿದನು.

**ಪ್ರಭುಜಂಗಮವು**

ಕಾಯದ ಕರಣಗಳನು ಗೆಲಿದು ಗುರುವಾದ ಅಲ್ಲಮಪ್ರಭುವು ಕಾಯುಗುಣಗಳಳಿದುಕೊಳ್ಳಬೇಕೆಂಬರಿಗೆ ಗುರುವೂ ಅಹುದು. ಮನದ ಮದವ ಮುರಿದು ಘನಮನ ಸಂಪನ್ನನಾದ ಆ ಅಲ್ಲಮಪ್ರಭುವು ಮನವಿಕಾರವ ಮಾಣಿಸಿಕೊಳ್ಳಬೇಕೆಂಬರಿಗೆ ಮನಕ್ಕೆ ಮಂಗಳವಹ ಲಿಂಗವೂ ಅಹುದು. ಅದರಂತೆ ಭಾವಸೃಷ್ಟಿಯ ಭವ್ಯತೆಯ ನೀಡಾಡಿ ನಿರ್ಭಾವದಲಿ ನಿಂದು ನಿಜ ಶರಣನಾದ ಆ ಅಲ್ಲಮಪ್ರಭುವು ಭಾವದ 'ಭವಿ'ತನವ ಕಳೆವ ಜಂಗಮಪ್ರಭುವೂ ಅಹುದು. ಶಿವಾನುಭವಿ ಮೈಲಾರ ಬಸವಪ್ಪನವರು ಇಂತಪ್ಪ ಜಂಗಮದ ನಿಲವನ್ನು ಹೀಗೆ ವರ್ಣಿಸಿರುವರು:

ಜಂಗಮವೆ ಪರಮ ಸುಜ್ಞಾನ ಪ್ರಕಾಶಾಂಗ
ಜಂಗಮವೆ ಸತತ ಸತ್ಕ್ರಿಯೆಯ ಜ್ಯೋತಿರ್ಲಿಂಗ
ಜಂಗಮವೆ ಕರದಿಷ್ಟಲಿಂಗವನಿಮಿಷಕಂಗಳು ಭಯಕೂಲದ ಸಂಗವು |
ಜಂಗಮವೆ ಪರತತ್ವ ಮೂರ್ತಿ ಮಹಿಮೋತ್ತುಂಗ
ಜಂಗಮವೆ ಶರಣ ಹೃನ್ಮಂದಿರವು ಭವಭಂಗ
ಜಂಗಮದ ಶ್ರೀಪಾದ ಪದ್ಮದುರುಗಂಧಕ್ಕೆ ಮನ್ಮಾಸನಂ ಭೃಂಗವು[೮] ||

ಇಲ್ಲಿ ವರ್ಣಿತವಾದ ಜಂಗಮದ ನಿಲವು ಪ್ರಭುದೇವರಲ್ಲಿ ತುಂಬ ಕಾಣಬರುತ್ತಿತು. ಅನಿಮಿಷಯೋಗದಿಂದ ಕರದಿಷ್ಟ ಲಿಂಗವ ಪಿಡಿದು ಸುಜ್ಞಾನ ಭರಿತವಾದ ಪ್ರಕಾಶಮಯ ಪ್ರಸಾದತನುವನ್ನು ಸಂಪಾದಿಸಿಕೊಂಡುದರಿಂದ ಅವನು ಸುಜ್ಞಾನ ಪ್ರಕಾಶಾಂಗನು. ಶರಣರಿಗೆ ಕರುಣವ ನೀಡುವ ಘನವಾದ ಕಾರ್ಯವ ಕೈಕೊಂಡು ಯಾವಾಗಲೂ ಸಂಚರಿಸುತ್ತಿದ್ದನಾದುದರಿಂದ ಆತನು ಸತ್ಕ್ರಿಯಾ ಮೂರ್ತಿಯು. ಶರಣರಿಗೆ ಆವರಿಸಿದ ಸಂಸಾರವ್ಯಾಪ್ತಿ, ಪೂರ್ವಾಶ್ರಯದ ತಾಮಸ ಇವನ್ನು ಕಳೆವ ಸಾಮರ್ಥ್ಯವುಳ್ಳವನಾದುದರಿಂದ ಆತನು ಜ್ಯೋತಿರ್ಲಿಂಗನು. ಶರಣರ ಒಳಹೊರಗಿನ ಅನಿಷ್ಟವನ್ನು ಪರಿಹಾರಗೊಳಿಸುವ ಮತ್ತು ಧ್ಯಾನಕ್ಕೆ ತಕ್ಕ ಒಡವೆಯಾದುದರಿಂದ ಅವನು ಕರದಿಷ್ಟಲಿಂಗವು. ಸಿದ್ಧರಾಮ ಶಿವಯೋಗಿ, ತನುಸಿದ್ಧ ಗೋರಕ್ಷ, ಇನ್ನುಳಿದ ಮುನಿಯೋಗಿಗಳಿಗೆ ಅನಿಮಿಷ ದೃಷ್ಟಿಯಲ್ಲಿದ್ದ ಕೊರತೆಯನ್ನು ಹಿಂಗಿಸಿ ಇಷ್ಟಲಿಂಗ ದೃಷ್ಟಿಯನ್ನು ನೀಡಿದನಾದುದರಿಂದ ಅವನು ಅನಿಮಿಷ ಕಂಗಳ ಉಭಯ ಕೂಲದ

೮. ವೀರಶೈವ ಷಟ್ಸ್ಥಲ ಸಿದ್ಧಾಂತ ಪ್ರಕರಣ ೩ ಪದ್ಯ ೧.

ಸಂಗವು. ಅಲ್ಲಮಪ್ರಭುವಿನಿಂದ ಮೀರಿದ ಅನುಭವಿಗಳು ಇರದೆ ಇದ್ದುದರಿಂದ ಮತ್ತು ಶರಣರೆಲ್ಲರ ಆಶ್ರಯಕ್ಕೆ ಆಧಾರವಾಗಿದ್ದುದರಿಂದ ಅವನು ಪರತತ್ತ್ವಮೂರ್ತಿಯು. ಆತನ ಅನುಭವದ ಆಳವನ್ನು ಅಳೆಯುವುದು ಅಸಾಧ್ಯವಾದುದರಿಂದ ಅವನು ಮಹಿಮೋತ್ತುಂಗನು. ಶರಣರು ತನ್ನಾಶ್ರಯಿಸುವಂತೆ ತಾನು ಅವರನ್ನಾಶ್ರಯಿಸಿ ಅವರ ಹೃದಯವನ್ನೇ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡಿದುದರಿಂದ ಅವನು ಶರಣಹೃನ್ಮಂದಿರನು. ಅವನ ಸಂಗದಿಂದ ಭಾವಸೃಷ್ಟಿಯ ವ್ಯವಹಾರವಡಗಿ ನಿರ್ಭಾವವೆಡೆಗೊಳ್ಳುವುದರಿಂದ ಅವನು ಭವಭಂಗನು. ಇಂತೀ ವಿಶೇಷ ಗುಣಗಳಿಂದ ಕೂಡಿದ ಪ್ರಭುವು ಜಂಗಮಪ್ರಭುವು. ಭಕ್ತಿ ಭಿಕ್ಷೆಗಾಗಿ ಹೋಗಿ ತಾನು ಕಂಡ ವ್ಯಕ್ತಿಗಳ ಅರೆದು, ಒರೆದು, ಕೊರೆದು ನೋಡಿ ಭಕ್ತಿ ಪರೀಕ್ಷೆ ಮಾಡುವ ಯೋಗ್ಯತೆಯು ಆ ಪ್ರಭುಜಂಗಮನಿಗೊಬ್ಬನಿಗೇ. ಬಸವಾದಿ ಶಿವ ಶರಣರಿಗೆ ಹರಣವಾದವನು ಆ ಪ್ರಭುಜಂಗಮನೊಬ್ಬನೇ. ಯಾವ ಯಾವ ಯೋಗ್ಯತೆಯಿಂದ ಹೃದಯವನ್ನು ತೆರೆದಿಟ್ಟು ಭಾವವನ್ನು ಬರಿದುಗೊಳಿಸಿದರೋ ಆಯಾ ಯೋಗ್ಯತೆಗೆ ತಕ್ಕಂತೆ ತೆರವಾದ ಸ್ಥಳದಲ್ಲಿ ತನ್ನ ದಿವ್ಯಪ್ರಕಾಶವನ್ನು ತುಂಬಿದವನು ಆ ಪ್ರಭುಜಂಗಮನೇ. ಭಕ್ತರ ಭಾವಸೃಷ್ಟಿಯ ವ್ಯವಹಾರವನ್ನೆಲ್ಲ ನಿಯಂತ್ರಿಸಿ ಅಲ್ಲೆಲ್ಲ ವ್ಯಾಪಿಸಲು ಅಸಾಮಾನ್ಯವಾದ ಯೋಗ್ಯತೆಯುಳ್ಳ ಜಗದ್ಭರಿತನು ಆ ಜಂಗಮನೇ. ಅಲ್ಲಮಪ್ರಭುವು ಇಂಥ ಪ್ರಭುವಾಗಿದ್ದನು! ಚಾಮರಸನು ಚಿತ್ರಿಸುವ ಜಂಗಮಪ್ರಭುವಿನ, ಜಂಗಮಲಿಂಗದ ವರ್ಣನೆಯು ಇಂತಹ ಘನತೆಯಿಂದಬೆರೆತುತು!!

**ಪ್ರಭುಲಿಂಗಲೀಲೆ**

ಹೀಗೆ ವ್ಯಾಪಕವಾದ ಗುರಿಯಲ್ಲಿ ಅನುಸಂಧಾನವ ಮಾಡಕಲಿಸಿದ ಅಲ್ಲಮಪ್ರಭುವು ಪರಿಪೂರ್ಣ ಶಕ್ತಿಪಾತ ಪ್ರಯೋಗದ ಗುರುವೂ, ನಿರ್ನಿಮಿಷ ದೃಷ್ಟಿಯ ಧ್ಯಾನಾನುಸಂಧಾನಕ್ಕೆ ತಕ್ಕ ಲಿಂಗವೂ, ನಿಮಿಷ ನಿಮಿಷಕ್ಕೆ ಸ್ಫುರಣೆಗೊಳ್ಳುವ ದಿವ್ಯಜ್ಞಾನಭರಿತ ಜಂಗಮವೂ ಆಗಿ ತನ್ನ ಪರುಷ-ದೃಷ್ಟಿ-ಧ್ಯಾನಗಳಿಂದ ಇಹಪರವ ಪಾವನಗೊಳಿಸಿದನು. ಪ್ರಭುವಿನ ಯೋಗಾನುಸಂಧಾನದ ಆನಂದದಿಂದ ಶಿವಶರಣರಿಗೆ ಇಹದಲ್ಲಿ ಪರವು ನೆಲೆಸಿತು. ಮರ್ತ್ಯದಲ್ಲಿ ಮಹಮನೆಯು ರಚಿತವಾಯಿತು. ಕರ್ಮಭೂಮಿಯಲ್ಲಿ ಧರ್ಮಭೂಮಿಯು ಉದಿಸಿತು. ದೇಹದಲ್ಲಿ ದೇವಾಲಯ ಒಡಮೂಡಿತು. ಜೀವನಲ್ಲಿ ಶಿವನು ಅಡಗಿದನು. ಮನವು ಮೈಲಿಗೆಯಳಿದು ಘನ(ಮನ)ವಾಯಿತು. ಸಂಸಾರವ್ಯಾಪ್ತಿಯಳಿದು ಸಮರಸ ಸುಖವುಂಟಾಯಿತು. ಜೀವಪ್ರಪಂಚವಳಿದು ಶಿವಪ್ರಪಂಚವು ಬೆಳೆಯಿತು. ಅನಿಷ್ಟವರತುದು ಪ್ರಾಣವ್ಯವಹಾರವಡಗಿತು. ಭಾವ ಬಯಲಾಗಿ ನಿರ್ಭಾವವು ನೆಲೆಸಿತು; ಇಷ್ಟ-ಪ್ರಾಣ-ಭಾವಲಿಂಗಗಳ ಸಿದ್ಧಿಯುಂಟಾಯಿತು. ಇಂತಪ್ಪ ಲಿಂಗಗಳ ಒಡನಾಟದಿಂದ ಜೀವ ಭಾವ ಸೃಷ್ಟಿಗಳ ವ್ಯವಹಾರವೆಲ್ಲ ಲಿಂಗಲೀಲೆ

ಯಾಯಿತು. ಪ್ರಭುವಿನ ಅನುಸಂಧಾನದ ಗೂಢದಿಂದ ಅದು ಪ್ರಭುಲಿಂಗ ಲೀಲೆಯಾಯಿತು. ಬಯಲೊಡಲಿನ ಯೋಗಸಿದ್ಧನ ಸಾಮರ್ಥ್ಯವಿಂತಹದು.

ಚಾಮರಸನು ಆದರ್ಶವಾಗಿಟ್ಟುಕೊಂಡ ಪ್ರಭುವಿನ ದಿವ್ಯಜೀವನದ ಚಿತ್ರವನ್ನು ನಿರೀಕ್ಷಿಸಿದುದಾಯಿತು. ಪೂರ್ವಾಶ್ರಯ ನಿರಸನದಿಂದ ಅಂಗಶುದ್ಧಿಯೂ ಲಿಂಗ ಸಿದ್ಧಿಯೂ ಇವೆರಡರ ಸಂಗದಿಂದ ಸಮರಸ ಪ್ರಸಿದ್ಧಿಯೂ ದೊರೆ

ಕೊನೆ

ಕೊಂಡು ನಿರ್ಮಲ ನಿರ್ವಯಲ ತನುವೆಡೆಗೊಳ್ಳುವುದೆಂಬ ಸಂಗತಿಯನ್ನು ಆತನು ಪ್ರತಿಯೊಂದು ಗತಿಯಲ್ಲಿಯೂ ಒತ್ತೊತ್ತಿ ತಿಳಿಸಿದ್ದಾನೆ. ಆತನು ಕಥೆ ಹೇಳುವ ರೀತಿ, ತತ್ತ್ವದ ಬೆಸುಗೆಗೊಳಿಸುವ ಕ್ರಮ, ಆತನ ಕಥಾನಾಯಕನ ಅದ್ವಿತೀಯ ಸಾಮರ್ಥ್ಯದ ವ್ಯಕ್ತಿತ್ವ, ಮತ್ತು ಆತನು ಆರಿಸಿಕೊಂಡ ಪಾತ್ರಗಳ ಸಮೀಚೀನವಾದ ನಡೆನುಡಿ, ಮನಂಬುಗುವ ಮರುಳುಗೊಳಿಸುವ ಸರಳವಾದ ತತ್ತ್ವಬೋಧೆ ಇವೆಲ್ಲ

ಹಿರಿಯರಿಗೆ ಕಿರಿಯರಿಗೆ ಸದಮಲ
ಚರಿತರಿಗೆ ಚದುರರಿಗೆ ಸಜ್ಜನ
ಶರಣರಿಗೆ ಮುಗ್ಧರಿಗೆ ಸಕಳಕಳಾವಿದಗ್ಧರಿಗೆ
ಗರುವರಿಗೆ ಹಿತವರಿಗೆ ಸಚರಾ
ಚರರಿಗನುದಿನ ( ವರಿತಮಾತ್ರದಿ
ನಿರುತ ನಿತ್ಯಾನಂದ ಪದವಿಯ ನೀಯುತಿರುತಿಹವು )

ಎಂದು ಹೇಳಬಹುದು.

ದೇಹ ಭಾವವಳಿದಲ್ಲದೆ ಜೀವ ಭಾವವಳಿಯದು
ಜೀವ ಭಾವವಳಿದಲ್ಲದೆ ಭಕ್ತಿಭಾವವಳವಡದು
ಭಕ್ತಿ ಭಾವವಳವಟ್ಟಲ್ಲದೆ ಅರಿವು ತಲೆದೋರದು
ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು
ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು
ಅದು ಕಾರಣ ಕಾಯ ಜೀವದ ಹೊಲಿಗೆಯ ಅಳಿದ
ಭೇದವ ತಿಳಿಯ ಬಲ್ಲರೆ ನಮ್ಮ ಗುಹೇಶ್ವರಲಿಂಗದ
ಅರಿವು ಸಾಧ್ಯವಪ್ಪುದು ಕಾಣಾ ಸಿದ್ಧರಾಮಯ್ಯಾ ॥

—ಶೂನ್ಯ ಸಂಪಾದನೆ

**ನವಕಲ್ಯಾಣಮಠ, ಧಾರವಾಡ**

ತಾ. ೨೦-೭-೧೯೪೧

# ಶ್ರೀ ರೇವಣ್ಣನ ಸಿದ್ಧಿಸಾಮರ್ಥ್ಯ

ಶ್ರೀ. ವೀ. ರು. ಕೊಪ್ಪಳ, ಎಂ. ಎ., ಬಿ. ಟಿ., ಧಾರವಾಡ

ದೇವನು ಭೂಮಿಗಿಳಿದು ಮಾನವಶರೀರಿಯಾಗಿಯೊ ಇಲ್ಲವೆ ಇನ್ನಾವುದಾದರೊಂದು ಶರೀರವಿಡಿದೊ ಲೀಲೆಯನಾಡಿ, ಬಂದ ಮಣಿಹವನ್ನು ಪೂರೈಸಿ ಮರಳಿ ಸ್ವಸ್ಥಾನವಾದ ಪರಲೋಕವನ್ನು ಸೇರುವನು; ಅವತಾರ ಕಾರ್ಯವನ್ನು ಪೂರ್ತಿಗೊಳಿಸುವನು ಎಂಬುದು ಸಾಮಾನ್ಯವಾಗಿ ಭಾರತೀಯರ ದೃಷ್ಟಿಯು. ಮಾನವನು ಪುರುಷ ಪ್ರಯತ್ನದಿಂದಲೇ ದೇವತ್ವದ ಸ್ಥಿತಿಯನ್ನು ಹೊಂದಬಲ್ಲನು, ಅಘಟಿತ ಘಟನೆಗಳನ್ನುಂಟುಮಾಡಬಲ್ಲನು ಎಂಬುದು ಪಾಶ್ಚಿಮಾತ್ಯರ ದೃಷ್ಟಿಯು. ಒಂದಕ್ಕೆ ಕಾಲ್ಪನಿಕ ಪೌರಾಣಿಕ ದೃಷ್ಟಿಯೆಂದು ಕರೆದರೆ ಇನ್ನೊಂದಕ್ಕೆ ಸತ್ಯವಾದ ಪ್ರಗತಿಯ ಇಲ್ಲವೆ ಶಾಸ್ತ್ರೀಯ ದೃಷ್ಟಿಯೆಂದು ಕರೆಯಬೇಕು. ಭಾವನಾಪ್ರಧಾನವಾದ ಪೌರಾಣಿಕ ದೃಷ್ಟಿಯಲ್ಲಿ ಕುರುಡ ನಂಬುಗೆಯು,ಮುಗ್ಧ ಭಕ್ತಿಯು,ಅಚಲವಾದ ಅಂಧಶ್ರದ್ಧೆಯು, ಹಿಂದು ಮುಂದಿನ ವಿಚಾರವಿಲ್ಲದ ವಿಶ್ವಾಸದ ಪರಂಪರೆಗೆ ಅವಕಾಶವಿರುವುದು. ಆದರೆ ಬುದ್ಧಿಪ್ರಧಾನವಾದ ಶಾಸ್ತ್ರೀಯ ದೃಷ್ಟಿಯಲ್ಲಿ 'ಅದು ಹೇಗೆ?' 'ಮುಂದೇನು?' ಎಂಬ ಕುತೂಹಲದಿಂದ ಬೆರೆತ ಜ್ಞಾನಪಿಪಾಸೆಯ ಹಂಬಲಕ್ಕೆ ಎಡೆಯಿರುವುದು. ಮಾನವನಿಂದ ಜರುಗಲಶಕ್ಯವಾದ ಕಾರ್ಯಗಳು ಅವತರಿಸಿದ ವ್ಯಕ್ತಿಗಳಿಂದ ಜರುಗಿದರೆ ಪೌರಾಣಿಕ ದೃಷ್ಟಿಯಲ್ಲಿ ಅವೆಲ್ಲ 'ಪವಾಡಂ'ಗಳಾಗಿ 'ಆಕಸ್ಮಿಕಂ'ಗಳಾಗಿ ತೋರುವವು. ಶಾಸ್ತ್ರೀಯ ದೃಷ್ಟಿಯು ಪುರುಷ ಪ್ರಯತ್ನದಿಂದ 'ಪ್ರತ್ಯಕ್ಷಂ'ಗಳನು ಕಾಣುವದು. ಪರದಲ್ಲಿ ಮಾಡಿದ ತಪ್ಪಿಗಾಗಿ, ಇಹದಲ್ಲಿ ನಡೆದ ಅನ್ಯಾಯ ಅಸತ್ಯ ಅಧರ್ಮ ಮುಂತಾದವುಗಳ ನಿವಾರಣೆಗಾಗಿ ಅಥವಾ ಇನ್ನಾವುದಾದರೊಂದು ಉದ್ದೇಶ ಸಾಧನೆಗಾಗಿ ದೇವನು ಭೂಮಿಗಿಳಿಯುವನು ಎಂಬ ಕಲ್ಪನೆಯು ಕಣ್ಣಿಗೆ ಕಾಣದ ಕೈಲಾಸದ ಘನತೆಯನ್ನು ಸಾರಲು, ಅದರಂತೆಯೇ ಭೂಲೋಕದ ಮತ್ತು ಅಲ್ಲಿಯ ಜೀವನದ ಹೀನತೆಯನ್ನು ಬೀರಲು ಹುಟ್ಟಿದುದು. ಈ ತರಹದ ಕಲ್ಪನೆಯ ಅತಿರೇಕದ ಒಡಲಲ್ಲಿಯೇ ಅನಾದರಣೆಯೂ ಅಡಗಿರುವುದೆಂಬುದು ಚಾರ್ವಾಕವಾದದಿಂದ ಸ್ಪಷ್ಟವಾದುದು. ಇದರ ಜೊತೆಗೆ 'ನಿತ್ಯ'ವಾದ ಪರಲೋಕದಲ್ಲಿ ದೇವತೆಗಳಾಗಿದ್ದವರಿಗೆ, ಗಣಪದವಿಯಲ್ಲಿದ್ದವರಿಗೆ, ಪ್ರಮಥರಾಗಿದ್ದವರಿಗೆ ಸಹ ತಪ್ಪುಮಾಡುವುದು ತಪ್ಪಿಲ್ಲ; ಶಾಪ ತಟ್ಟುವುದು ಬಿಟ್ಟಿಲ್ಲ; ಸಮತೆಯಿಂದಿರುವುದು ಸಾಧಿಸಿಲ್ಲ ಎಂಬುವದು ಮನವರಿಕೆಯಾದರೆ ತೀರಿತು; ಅವರ ಹಿರಿಮೆಯಲ್ಲಿ ಆದರಭಾವಕ್ಕೆ ಉಳಿಮೆಯಿಲ್ಲ. ಇಂಥ ತಪ್ಪುಕರು, ಶಾಪಗ್ರಸ್ತರು, ಸಮತೆಗೇಡಿಗಳು ಇಹಕ್ಕಿಳಿದು ತೋರಿಸುವು

ದೇನನ್ನು ? ಸಾಮಾನ್ಯರನ್ನು ಬೆರಗುಗೊಳಿಸುವ ಕಾರ್ಯಗಳಿಂದಲೇ ತಾವು ದೊಡ್ಡವರು ಎಂಬುದನ್ನೋ ? ಅವತಾರಿಕರು ಇಂಥ ಸಂಗತಿಗಳಿಂದಲೇ ಘನವಂತರು ಎಂದು ಹೇಳುವುದು ಶಾಸ್ತ್ರೀಯ ದೃಷ್ಟಿಗೆ ಸಮ್ಮತವಿಲ್ಲ. ಆದರೆ ಅವುಗಳಿಂದ ತಮ್ಮ ಸನ್ನಿಧಿಯಲ್ಲಿ ಇದ್ದವರಿಗೆ, ತಮ್ಮ ಸಂಪರ್ಕದಲ್ಲಿ ಬಂದವರಿಗೆ 'ಮಾನವತ್ವ'ವು ಅಳಿದು 'ದೇವತ್ವ'ವು ಬೆಳೆಯಲು ಎಷ್ಟು ಅನುಕೂಲವಾಯಿತು; ಪುರುಷ ಪ್ರಯತ್ನದ ಹೋರಾಟದಲ್ಲಿ ಅದೆಷ್ಟು ಮಟ್ಟಿಗೆ ಹರುಷವು ಅಂಗವಿಸಿ 'ಪುರುಷ' ಪ್ರಯತ್ನವೇ 'ಪ್ರಭು'ವಿಸ ಕಾರುಣ್ಯವೆಂಬ ತಿಳಿಯು ಉಳಿಯಿತು; ಮತ್ತು ಇಂಥವರ ಕಾರ್ಯಗಳ ಪರಿಣಾಮವು ರಂಗಭೂಮಿಯಲ್ಲಿ ಅದೆಷ್ಟು ಆಳವಾಗಿ ಇಳಿಯಿತು ಎಂಬುದು ಆಯಾ ವ್ಯಕ್ತಿಗಳ ಸ್ಥಾನಮಾನಗಳ ತಾರತಮ್ಯವನ್ನು ತಿಳಿಸುವವು. ಯಾರೊಬ್ಬರ ಸ್ಥಾನಮಾನಗಳನ್ನು ಕಂಡುಕೊಳ್ಳಲು ಇದು ಅಳೆಗೋಲು. ಈಗ ಸಿದ್ಧ ಪುರುಷರಲ್ಲಿ ರೇವಣ್ಣಸಿದ್ಧನ ಸ್ಥಾನವನ್ನು ಕಾಣಬೇಕಾದುದು ಇಂಥ ಸತ್ಯ ದೃಷ್ಟಿಯಿಂದ; ಮಿಥ್ಯಾ ದೃಷ್ಟಿಯಿಂದಲ್ಲ.

**ಐತಿಹಾಸಿಕ ಪುರುಷ ರೇವಣ್ಣ :—** ರೇವಣ್ಣಸಿದ್ಧನು ಐತಿಹಾಸಿಕ ಪುರುಷನೆಂಬುದು ಶಾಸನಗಳಿಂದಲೂ[೧] ಹಂಪೆಯ ಹರಿಹರನಿಂದ ಈಚೆಗೆ ಆಗಿಹೋದ ವೀರಶೈವ ಕವಿಗಳ[೨] ಮತ್ತು ವಚನಕಾರರ[೩] ಕೃತಿಗಳಿಂದಲೂ ಸ್ಪಷ್ಟವಾದುದು. ರೇವಣ್ಣನ ಇತಿಹಾಸವನ್ನು ತಿಳಿಸುವ ಅನೇಕ ಗ್ರಂಥಗಳಲ್ಲಿ ಅದನ್ನು ಮುಸುಳಿಸುವ ಪವಾಡಗಳ ಉಲ್ಲೇಖವು ವಿಪುಲವಾಗಿರುವುದರಿಂದ ಅವನ ಬಗೆಗೆ ಸ್ಪಷ್ಟವಾಗಿ ತಿಳಿದು ಬರುವಂತಿಲ್ಲ. ಕನ್ನಡ ನಾಡಿನಲ್ಲಿ ಅವನು ಹಲವು ಕಾಲ ನೆಲೆಸಿ ತಪವನಾಚರಿಸಿದ

---

೧ **ಶಾಸನಗಳು :** (ಅ) ಶಿರಿವಾಳ ಶಾಸನ (೧೧೮೭) (ಬ) ಸಿಂಘಣ (ಸಿಂಹಣ) ದೇವನ ಶಾಸನ (೧೨೧೦) (ಕ) ಚೌಡದಾನಪುರ ಶಾಸನ (ಸು ೧೬೬೦) ಪುಲಿಗೆರೆಯ ಶಾಸನ (೧೫೧೪) —ಶಿವಾನುಭವಪತ್ರಿಕೆಯಿಂದ

೨ **ಕವಿಗಳು :** ಹರಿಹರ (ಸು ೧೨೦೦), ರಾಘವಾಂಕ (ಸು ೧೨೦೦), ಮಲ್ಲಣ್ಣ (೧೪೧೪) ಬೊಮ್ಮರಸ (ಸು ೧೪೫೦) ಚತುರ್ಮುಖ ಬೊಮ್ಮರಸ (ಸು ೧೫೦೦) ಗುಬ್ಬಿಯ ಮಲ್ಲಣಾರ್ಯ (೧೫೧೩) ಗುರುಲಿಂಗ ವಿಭು (ಸು ೧೫೫೦) ವಿರೂಪಾಕ್ಷ ಪಂಡಿತ (೧೫೮೪) ಎಳಂದೂರ ಹರೀಶ್ವರ (ಸು ೧೬೦೭) ಬಸವಲಿಂಗ ಕವಿ (೧೬೧೧) ಸೋಸಲೆ ರೇವಣಾರ್ಯ (ಸು ೧೬೭೩) ವೀರಣಾರ್ಯ (ಸು ೧೭೫೦) ಷಡಕ್ಷರ ದೇವ (೧೭೫೫) ಸೆಜ್ಜೆಯ ಸಿದ್ಧಲಿಂಗಾರ್ಯ (ಸು ೧೬೫೫) ಸಂಪಾದನೆಯ ಪರ್ವತೇಶ (೧೬೯೮) ದೇವಪುರದ ಬಸವಾಂಕ (ಸು ೧೭೦೦) ಮತ್ತು ಚತುರಾಚಾರ್ಯರ ಪ್ರಬಂಧ, ಹಾಲುಮತದ ಪುರಾಣ, ನಿರಂಜನ ವಂಶರತ್ನಾಕರ, ಸಿದ್ಧಾಂತ ಶಿಖಾಮಣಿ, ಚೋಳರೇಣುಕ ಸಂವಾದ, ಶಿವತತ್ವ ರತ್ನಾಕರ ಇವುಗಳ ಕರ್ತೃಗಳು

೩ **ವಚನಗಳು :** ಆದಯ್ಯನ ವಚನಗಳು, (ತೋಂಟದ) ಸಿದ್ಧೇಶ್ವರನ ವಚನಗಳು, ಸಂಗನ ಬಸವೇಶ್ವರನ ವಚನಗಳು, ಕಾಲಜ್ಞಾನದ ವಚನಗಳು

ಮತ್ತು ಬಂದು ಬಂದು ದರುಶನವಿತ್ತ ಸ್ಥಾನಗಳು[೪] ಕ್ಷೇತ್ರಗಳೆನಿಸಿಕೊಂಡು ವಿಪುಲವಾಗಿರುವುದರಿಂದ ಅವನ ಚರಿತ್ರೆಯನ್ನು ಕಟ್ಟುವುದರಲ್ಲಿ ಅವು ವಿಶೇಷವಾಗಿ ಸಹಾಯವನ್ನೀಯುವವು. ರೇವಣ್ಣಸಿದ್ಧನ ನೆನವಿಗಾಗಿರುವ ಇಂಥ ಅನೇಕ ಗುಡಿಗಳಲ್ಲಿ ಪೂಜೆಗೆಯ್ಯುವವರು ಗೊರವರಿರುವುದರಿಂದಲೂ[೫] ಹಾಲುಮತದ (ಕುರುಂಬರ) ಪುರಾಣವೆಂದು[೬] ಪ್ರಸಿದ್ಧವಾಗಿರುವ ಒಂದು ಗ್ರಂಥದಲ್ಲಿ ರೇವಣ್ಣಸಿದ್ಧನ ಘನತೆಯನ್ನು ಕುರಿತು ಉಲ್ಲೇಖವಿರುವುದರಿಂದಲೂ ಆ ಜನಾಂಗದ ಮೇಲೆಯೂ ಅವನ ಪ್ರಭಾವ ಮುದ್ರೆಯು ಬಲವಾಗಿದ್ದಿತೆಂದು ಗೊತ್ತಾಗುವದು. 'ಸುಡುಗಾಡ'ಸಿದ್ಧರೆಂದು ಹೆಸರುಗೊಂಡ ಕೆಲವು ಜೋಗಿಗಳು (ಇವರಲ್ಲಿ ಗೊರವರೇ ಹೆಚ್ಚಾಗಿರುವರು) ಮನೆಮನೆಗೆ ತಿರಿದುಕೊಳ್ಳಲು ಬಂದಾಗ್ಗೆ ರೇವಣ್ಣಸಿದ್ಧನ ಹೆಸರನ್ನು ತೆಗೆದುಕೊಳ್ಳುವದನ್ನೂ ಕೇಳಬಲ್ಲೆವು. "ವೀರಶೈವ ಪ್ರಥಮದೇಶಿಕಂ ರೇವಣಾಸಿದ್ಧೇಶಂ"[೭] "ವೀರಶೈವ ಸಿದ್ಧಾಂತವನು ಲೇಸಾಗಿ ಪಸರಿಸಿದ ರೇವಣಾಸಿದ್ಧೇಶಂ"[೭] "ವೀರಶೈವ ಸಿದ್ಧಾಂತ ಚಕ್ರೇಶಂ"[೭] 'ವೀರಶೈವ ಮತಸ್ಥಾಪನಾಚಾರ್ಯ' ಇವೇ ಮೊದಲಾದ ಪದಗಳಿಂದ ರೇವಣ್ಣಸಿದ್ಧನು ವರ್ಣಿತನಾಗಿರುವುದರಿಂದಲೂ ವೀರಶೈವ ಚತುರಾಚಾರ್ಯರ ಮಾಲಿಕೆಯಲ್ಲಿ ಇವನಿಗೇ ಅಗ್ರಸ್ಥಾನವಿರುವದರಿಂದಲೂ[೮] ಮತ್ತು ಗಂಟೆಯ ಕಾಯಕ ಮುಳ್ಳಾವಿಗೆಯ ಕಾಯಕ ತೆಕ್ಕೆಯ ಕಾಯಕ ಮೊದಲಾದ ಕಾಯಕಗಳನ್ನು ಕೈಕೊಂಡ ಕೆಲ ವೀರಶೈವ ಅಯ್ಯನವರು ಊರೂರುಗಳಿಗೆ ಬಂದು ಸಮಾಜದಲ್ಲಿಯ ಅನಿಷ್ಟವನ್ನು ನಿವಾರಿಸುವ ಉದ್ದೇಶದಿಂದ ಸತ್ಯಾಗ್ರಹವನ್ನು ಹೂಡಿ 'ರೇವಣಾಸಿದ್ಧ ಪ್ರಭೋ....' ಎಂಬ ಜಯನಿನಾದ

---

೪ ಶಿವಾನುಭವ ಸಂ. ೪ ಸಂಚಿಕೆ ೪, ೬, ೭. ಸಂ. ೯ ಸಂ. ೪. ಸಂ. ೧೦, ಸಂ. ೫
ಜಯಕರ್ನಾಟಕ ಸಂ. ೧೯ ಸಂಚಿಕೆ ೫.
ಸಾಹಿತ್ಯ ಸಮಿತಿಯ ಪತ್ರಿಕೆ ಸಂ. ೨ ಸಂಚಿಕೆ ೧

೫ ಶಿವಾನುಭವ-ಸಂಪುಟ ಸಂಚಿಕೆಗಳಿಗಾಗಿ ಇದೇ ಅಡಿ ಟಿಪ್ಪಣಿ ೪ ನೋಡಿರಿ.
ಜಯಕರ್ನಾಟಕ ಸಂ. ೧೯ ಸಂಚಿಕೆ ೫

೬ ಈ ಗ್ರಂಥದ ಕೈಬರೆಹದ ಪ್ರತಿಯು ಧಾರವಾಡ ಲಿ. ವಿ. ಸಂಸ್ಥೆಯಲಿರುತ್ತದೆ.

೭ ರೇ. ಸಿ. ಪು. ೧--೪, ೧೦ ಮತ್ತು ೯-೫೬.

೮ ಸೌಂದರ ಪುರಾಣ (೧೪೫೦), ರೇವಣ ಸಿದ್ಧೇಶ್ವರ ಪುರಾಣ (ಸು ೧೫೦೦), ೧-೪-೭, ಚೆನ್ನಬಸವ ಪುರಾಣ (೧೫೮೪) ೫೯-೨೧, ರಾಘವಾಂಕ ಚಾರಿತ್ರ (೧೬೧೫), ಶಬರ ಶಂಕರ ವಿಳಾಸ (೧೬೫೫), ೧-೮, ರಾಜಶೇಖರ ವಿಳಾಸ (೧೬೫೫) ೧-೧೭, ವೃಷಭೇಂದ್ರ ವಿಜಯ (೧೬೫೫) ೧-೧೨, ಕವಿಕರ್ಣ ರಸಾಯನ (೧೬೫೫) ಮಳೆಯ ರಾಜಚರಿತ್ರೆ (ಸು ೧೬೫೫), ಚುತುರಾಚಾರ್ಯರ ಪುರಾಣ (೧೬೯೮), ಚತುರಾಚಾರ್ಯ ಪ್ರಬಂಧ (ಶ್ರೀ. ಎಂ. ಜಿ. ವಿರೂಪಾಕ್ಷನ್ ಅವರಲ್ಲಿರುವ ಹಸ್ತ ಪ್ರತಿ), ಶಿವತತ್ವ ರತ್ನಾಕರ ೧. ೧-೬ ಇವೇ ಮೊದಲಾದ ಗ್ರಂಥಗಳಲ್ಲಿ ಈ ಉಲ್ಲೇಖವಿದೆ.

ದಿಂದ ಸಮಾಜವನ್ನು ಎಚ್ಚರಿಸುತ್ತಿದ್ದ ಉದಾಹರಣೆಗಳು ಕಂಡು ಬರುವುದ ರಿಂದಲೂ ವೀರಶೈವರಿಗೆ ಅವನಲ್ಲಿದ್ದ ಪವಿತ್ರವಾದ ಪೂಜ್ಯವಾದ ಗೌರವಭಾವವು ವ್ಯಕ್ತವಾಗುತ್ತಿದೆ. ಈ ಪುರಾತನ ಪುಂಗವನ ನಿಜವಾದ ಐತಿಹ್ಯವನ್ನು ಕಂಡು ಕೊಳ್ಳಲು ಇತ್ತೀಚೆಗೆ ಅನೇಕ ಪ್ರಯತ್ನಗಳು ನಡೆಯಹತ್ತಿರುವವು. ಆದುದರಿಂದ ಆ ಇತಿಹಾಸವನ್ನೇ ತಿಳಿಸುವುದು ಪ್ರಕೃತ ಕಾರ್ಯವಲ್ಲ. ಆದರೂ ಅವನು ಪಡೆದುಕೊಂಡ ಸಿದ್ಧಿಯ ಸಾಮರ್ಥ್ಯವನ್ನು ಅಳೆಯಲು ಅವನ ಐತಿಹ್ಯದಲ್ಲಿ ಹಲಕೆಲವು ಸಂಗತಿಗಳನ್ನು ತಿಳಿಯಬೇಕಾದುದು ಅವಶ್ಯವು.

**ರೇಣುಕ ಮತ್ತು ರೇವಣ್ಣ :—** ರೇವಣ್ಣಸಿದ್ಧೇಶನು ಶಿವನ ಒಡ್ಡೋಲಗ ದಲ್ಲಿದ್ದ ರೇಣುಕಗಣೇಶ್ವರನ ಅವತಾರವೆಂದು ಹರಿಹರನು ತನ್ನ ರೇವಣ ಸಿದ್ಧೇಶ್ವರ ರಗಳೆಯಲ್ಲಿ ಹೇಳಿದ ಅಂಶವನ್ನೇ ಆ ತರುವಾಯದ ಕವಿಗಳೆಲ್ಲ ಎತ್ತಿ ಹಿಡಿದಿರುವರು. ಅನೇಕ ಸಾರೆ ರೇಣುಕನು ಒಂದು ಯುಗದವನು, ರೇವಣ್ಣನು ಬೇರೊಂದು ಯುಗದವನು, ಹೀಗೆ ಅವರಿಬ್ಬರೂ ಬೇರೆ ಬೇರೆ ಎಂಬ ತಿಳಿವಳಿ ಕೆಯೂ ಆಗಿರುವದುಂಟು.[೯] 'ಕೈಲಾಸದಲ್ಲಿಹ ಪ್ರಮಥ ಪುಂಗವರು' ಎಂಬ ಮಾತಿನ ವಿಮರ್ಶೆಯಲ್ಲಿ ಕೈಲಾಸದ ಅಸ್ತಿತ್ವಕ್ಕೆ ಅವಕಾಶವಿಲ್ಲದಿರಲು ಪ್ರಮಥಗಣಂಗಳಿಗೆ ಅಲ್ಲಿ ಉಳಿಮೆಯೇ ಇಲ್ಲ. ಬಸವಣ್ಣನು ನಂದಿಯ, ಚೆನ್ನಬಸವಣ್ಣನು ಷಣ್ಮುಖನ, ಅಲ್ಲಮನು ನಿರ್ಮಾಯನ, ಮಡಿವಳ ಮಾಚಯ್ಯನು ವೀರಭದ್ರನ ಅವತಾರವೆಂದು ಹೇಳುವ ಮಾತಿನಲ್ಲಿ ಎಷ್ಟು ಸತ್ಯವು ಅಡಗಿದೆಯೋ ಅಷ್ಟೇ ಸತ್ಯವು ರೇವಣ್ಣನು ರೇಣುಕನ ಅವತಾರವೆಂಬ ಮಾತಿನಲ್ಲಿದೆ. ನಂದಿ, ಷಣ್ಮುಖ, ನಿರ್ಮಾಯ, ವೀರ ಭದ್ರ, ರೇಣುಕ ಎಂಬವುಗಳು ಆಯಾ ವ್ಯಕ್ತಿಗಳ ನಿಲುವನ್ನು ತಿಳಿಸುವವಲ್ಲದೆ ಅವರು ಭೂಮಿಗಿಳಿದವರು ಎಂಬುದನ್ನಲ್ಲ. ರೇವಣ್ಣ ರೇಣುಕ ಎಂಬ ಪದಗಳ ಅರ್ಥ ಸ್ವಾರಸ್ಯವನ್ನು ಪರ್ಯಾಲೋಚಿಸಿದರಂತೂ ಇವರಿಬ್ಬರೂ ಬೇರೆ ಬೇರೆ ವ್ಯಕ್ತಿಗಳಲ್ಲ; ಬೇರೆ ಬೇರೆ ಹೆಸರಿನ ಒಬ್ಬ ವ್ಯಕ್ತಿಯೇ ಎಂದು ಗೊತ್ತಾಗುವದು.[೧೦] ಮತ್ತು ಹೀಗೆ ಒಬ್ಬ ವ್ಯಕ್ತಿಯನ್ನು ಕರೆಯುವುದರಲ್ಲಿ ದ್ರವಿಡ ಭಾಷೆಯ ಮೇಲೆ ಆರ್ಯರ ಸಂಸ್ಕೃತ ಭಾಷೆಯ ಪ್ರಭಾವವು ಎಷ್ಟು ಬಲವತ್ತರವಾಗಿಹುದು ಎಂಬುದು ತಿಳಿಯುವಂತಿದೆ. ಇನ್ನಿಷ್ಟು ಕೂಲಂಕಷವಾಗಿ ವಿಚಾರಿಸಿದರೆ ರೇವಣ್ಣ ರೇಣುಕ ಎಂಬ ನಾಮವಾಚಕ ಶಬ್ದಗಳು ಯಾವ ತರಹದ ಸಂಸ್ಕೃತಿಯನ್ನು

---

೯ ರೇವೆ, (ಕನ್ನಡ— ಸೂಸಪುಣ್ಣು, ಹುಡಿ) + ಅಣ್ಣ=ರೇವಣ್ಣ
ರೇಣು (ಸಂಸ್ಕೃತ— ರೇವು, ಹುಡಿ, ಧೂಳ ) + ಕ = ರೇಣುಕ. ಶಿವವಕ್ಷೋಭಸ್ಮ ರೇಣುಪ್ರಭವನೆನಿಸಿಯುಂ ರೇಣುಕೇಶಾಖ್ಯೆಯಂ ತಾಳ್ದವಂ ರಾ. ವಿಳಾಸ ೧-೫೩.

೧೦ ಷಡಕ್ಷರದೇವ ಮೊದಲಾದವರು ಈ ಅಭಿಪ್ರಾಯದವರು ರಾ. ವಿಳಾಸ ೧-೫೩-೫೬ ನೋಡಿರಿ.

ಗರ್ಭೀಕರಿಸಿಕೊಂಡಿವೆ ಎಂಬುದು ವ್ಯಕ್ತವಾಗುವಂತಿದೆ.[೧೧] ಈ ಹೆಸರುಳ್ಳ ಆ ವ್ಯಕ್ತಿಯು ಪೃಥ್ವೀತತ್ತ್ವ ಇಲ್ಲವೆ ಪ್ರಾಕೃತತತ್ತ್ವಸಮರಸಿಯೆಂದು ಹೇಳೋಣವೇ? ಅಥವಾ ಅದನ್ನು ಮೀರಿದವನೆಂದು ಹೇಳೋಣವೇ?

**ರೇವಣ್ಣನ ಜನನ:—** ರೇವಣ್ಣನು ನಿಜಾಂ ಪ್ರಾಂತದ ಕೊಲ್ಲಿಪಾಕಿ (ಕೊಲನುಪಾಕ)ಯಲ್ಲಿ ಸೋಮನಾಥ ಲಿಂಗದಲ್ಲಿ ಉದ್ಭವಿಸಿದನೆಂದು ಹರಿಹರನು ಹೇಳುವ ಮಾತನ್ನೇ ಎಲ್ಲರೂ ಹೇಳುವರು. ಈ ಮಾತು ಅಗಸ್ತ್ಯನು ಕುಂಭದಲ್ಲಿ, ಸೀತೆಯು ಭೂಮಿಯಲ್ಲಿ, ಕರ್ಣನು ಕಿವಿಯಲ್ಲಿ ಜನಿಸಿದರೆಂದು ಹೇಳುವಷ್ಟೇ ಅಸಮಂಜಸವಾದುದು. ಅವನ ತಾಯಿ-ತಂದೆಗಳ ಹೆಸರು ಎಲ್ಲಿಯೂ ಸ್ಪಷ್ಟವಾಗಿ ಉಕ್ತವಾಗಿಲ್ಲ. ಆದರೆ ಅದೇ ನಿಜಾಂ ಪ್ರಾಂತದ ಶಿರಿವಾಳ ಶಾಸನದಲ್ಲಿ

> ಶ್ರೀ ಮದ್ಯಣಿಮಾದ್ಯಷ್ಟಗುಣಸಂಪನ್ನರುಂ ಷಟ್ಕ್ರಿಯಾನ್ವಿತರುಂ ಸೌರಸೌರಭ್ಯ ಸರ್ವನಿಸ್ಸಂಗರುಮಪ್ಪ ಶಿವಯೋಗಿಶಾಂತಿಮಯ್ಯಗಳ ಪುತ್ರ ರೇಣುಕಾಚಾರ್ಯರ ಪ್ರಸಿದ್ಧಿಯೆಂತೆಂದೊಡೆ........

ಎಂದು ಹೇಳಿರುವುದರಿಂದ ಶಿವಯೋಗಿ ಶಾಂತಿಮಯ್ಯಗಳು ರೇಣುಕನ ಅಥವಾ ರೇವಣ್ಣನ ತಂದೆಯಿರಬೇಕೆಂದು ಊಹಿಸಲಾಗಿದೆ. 'ಪುತ್ರ' ಪದವು ಸಂತಾನಾರ್ಥದಲ್ಲಿರುವಂತೆ 'ಶಿಷ್ಯ' 'ಹಸ್ತಿಕ' ಎಂಬ ಅರ್ಥದಲ್ಲಿಯೂ ಬಳಕೆಯಲ್ಲಿದೆ. ಶಿವಯೋಗಿಯ ರಕ್ತದಿಂದ ಸಿದ್ಧನು ಉದಯಿಸಿದನು ಎಂಬುದಕ್ಕಿಂತ ಅಣಿಮಾದ್ಯಷ್ಟಗುಣಸಂಪನ್ನನಾದ ಷಟ್ಕ್ರಿಯಾನ್ವಿತನಾದ ಸಾರಸೌರಭ್ಯಸರ್ವನಿಸ್ಸಂಗನಾದ ಶಿವಯೋಗಿಯ ಹಸ್ತಕಮಲದಲ್ಲಿ ರೇವಣ್ಣಸಿದ್ಧನು ಉದಯಿಸಿದನೆಂದು ಹೇಳುವುದು ಸೂಕ್ತವೆನಿಸುವದು. ತಂದೆಯ ಹೆಸರನ್ನು ಹೇಳಿದ ಶಾಸನವು ತಾಯಿಯ ಹೆಸರು ಹೇಳುವದನ್ನು ಬಿಡುತ್ತಿತ್ತೇ? ಸಂಗನ ಬಸವೇಶ್ವರನು (ಸು. ೧೬೦೦) ಚೆಂಗಣಗಿಲ ಮಂಟಪದ ರೇವಣಸಿದ್ಧೇಶ್ವರಂಗೆ ನಿರ್ಲಜ್ಜ ಶಾಂತಯ್ಯನೆಂಬ ದೇಶಿಕೇಂದ್ರನು ಪ್ರಸಾದವನ್ನು ಬೋಧಿಸಿದನೆಂದು ಹೇಳುವ ಮಾತನ್ನು ಸಹ ಇಲ್ಲಿ ಗಮನಿಸಬಹುದು.[೧೨] ಆದುದರಿಂದ ರೇವಣ್ಣನ ಜನನಿ ಜನಕರಾರೆಂಬುದು ಇನ್ನೂ ವಿವಾದಾಸ್ಪದವಾದ ವಿಷಯವೇ! ರೇವಣ್ಣನಿಗೆ ರೇಣುಕ ರೇವಣ ರೇವಣ್ಣೊಡೆಯ ರೇವಣೇಶ್ವರ ರೇವಣಸಿದ್ಧ ರೇವಣಾರಾಧ್ಯ ರೇವಣಾರ್ಯ ರೇವಣಾಚಾರ್ಯ ರೇವಣಗುರೂತ್ತಮ ಎಂಬ ಪರ್ಯಾಯ ನಾಮಗಳನ್ನೂ ಕವಿಗಳು ಬಳಸಿರುವರು. ರೇವಣ್ಣನು ಲಿಂಗದಲ್ಲಿ ಉದ್ಭವಿಸಿದನೆಂದು ಹೇಳುವ ಮಾತು ಅವನ ಅಧ್ಯಾತ್ಮಸಾಧನೆಯ ರೀತಿಯನ್ನು ಅರುಹುವದೆನ್ನಬಹುದು. ಕೊಲ್ಲಿ

---

೧೧ ಧೂಳಯ್ಯ, ಧೂಳಪ್ಪ, ಶಾಡಪ್ಪ, ಅಡಿವಪ್ಪ, ಹರಳಯ್ಯ, ಕಲ್ಲಪ್ಪ, ಬಂಡೆಪ್ಪ ಇತ್ಯಾದಿ ಶಬ್ದಗಳ ಅರ್ಥಸ್ವಾರಸ್ಯವನ್ನು ಇಲ್ಲಿ ಹೋಲಿಸಿಕೊಳ್ಳಬಹುದು.

೧೨ ಸಂಗನ ಬಸವೇಶ್ವರನ ವಚನ ೧.

ಪಾಕಿಯ ದಕ್ಷಿಣಕ್ಕೆ ಸುಮಾರು ೬-೭ ಮೈಲುಗಳ ಅಂತರದಲ್ಲಿ ರೇಣುಕಾಚಾರ್ಯನ ಹೆಸರಿನ ಗುಡ್ಡವೊಂದಿದೆ, ಅಲ್ಲಿ ಅವನ ಗವಿಯೂ ಒಂದಿದೆ, ಮತ್ತು ಒಂದು ಈಶ್ವರ ದೇವಾಲಯವೂ ಇದೆ ಎಂಬುದನ್ನು ನೆನೆದರೆ ಆಂಧ್ರಪ್ರಾಂತದಲ್ಲಿ ಹುಟ್ಟಿ ಬೆಳೆದಿರಬಹುದಾದ ರೇವಣ್ಣನು ಶಿವಯೋಗಿ ಶಾಂತಿಮಯ್ಯಗಳ ಅನುಗ್ರಹವನ್ನು ಪಡೆದು ಅಲ್ಲಿ ತಪಸ್ಸನ್ನಾಚರಿಸಿ 'ಸಿದ್ಧ'ನಾಗಿರಬೇಕು; 'ಶಿವಯೋಗಿ'ಯಾಗಿರಬೇಕು; 'ನೊಸಲ ಕಣ್ಣ' ಪಡೆದಿರಬೇಕು; 'ತವನಿಧಿ'ಯನ್ನೀಯುವ ಬಲವನ್ನು ಹೊಂದಿರಬೇಕು; 'ಪವಾಡ ಸಿದ್ಧ' ನಾಗಿರಬೇಕು. ಇಂಥ ಅಸಾಧಾರಣವಾದ ಸಾಮರ್ಥ್ಯವನ್ನು ಗಳಿಸಿಕೊಂಡು ಅಲ್ಲಿಂದ ಮುಂದೆ ಹರಿಹರನು ಹೇಳುವಂತೆ—

ಲೋಕಮಂ ಪಾವನಂ ಮಾಡುವುದ್ಯೋಗದಿಂ
ಆಕಸ್ಮಿಕಂಗಳಂ ತೋರುವನುರಾಗದಿಂ

ದೇಶಸಂಚಾರಿಯಾಗಿ ಆಂಧ್ರ ಕನ್ನಡ ನಾಡುಗಳಲ್ಲಿ ಅವನು ತಿರುಗಾಡಿರಬೇಕು. ರಮ್ಯವೆನಿಸಿದ ಸ್ಥಳಗಳಲ್ಲಿ ನಿಂತು ನಿಂತು ತನ್ನ ತಪಸ್ಸಿದ್ಧಿಯನ್ನು ಇನ್ನೂ ಬೆಳಿಸಿಕೊಂಡಿರಬೇಕು.

**ರೇವಣ್ಣನ ಸಿದ್ಧಿ:-** ರೇವಣ್ಣಸಿದ್ಧನ ಸಿದ್ಧಿಯ ರೀತಿಯನ್ನು ಕುರಿತು ಶಾಸನಗಳೂ ಹರಿಹರನೂ ಮತ್ತು ಇನ್ನುಳಿದ ಅನೇಕ ಕವಿಗಳೂ ವಿಶೇಷ ತರಹದಿಂದ ಕೊಂಡಾಡಿರುವರು. 'ಶಿರಿವಾಳ ಶಾಸನದಲ್ಲಿ (೧೧೮೭) 'ಶಿವಸಿದ್ಧಚಕ್ರಿ, ಮೂಲೋಕ ಸಿದ್ಧ ಪ್ರಸಿದ್ಧರಪ್ಪ ಸಿದ್ಧರೇವಣಯ್ಯ' ಎಂದೂ ಚೌಡದಾನಪುರ ಶಾಸನದಲ್ಲಿ (ಸು. ೧೨೬೦) 'ಕಾರುಣಿಕರೆನಿಪ ಸಿದ್ಧರೇವಣದೇವ' ಎಂದೂ ಗೌರವ ಪದಗಳಿಂದ ಅವನು ಸಂಬೋಧಿಸಲ್ಪಟ್ಟಿದ್ದಾನೆ. ಹರಿಹರನು (ಸು. ೧೨೦೦) ಅವನನ್ನು 'ಕಾರುಣಿಕ ಸಿದ್ಧ, ಮಹಾಸಿದ್ಧ, ಸಿದ್ಧರದೇವ, ಸಿದ್ಧಕುಲಚಕ್ರವರ್ತಿ, ನಿರುಪಮಸಿದ್ಧ, ಪರಮ ಶಿವಯೋಗಿ, ಮುಕ್ಕಣ್ಣಸಿದ್ಧ, ಜ್ಯೋತಿಸಿದ್ಧರ ಸಿದ್ಧರಸ, ಅದ್ವಯ ಸಿದ್ಧ, ನಿರವಯದ ನಿರ್ಮಳ ಸಿದ್ಧ, ಸಿದ್ಧಕುಲಪತಿ, ಸಿದ್ಧಕುಲಶೇಖರ' ಎಂಬಿವೇ ಮೊದಲಾದ ಶಬ್ದಗಳಿಂದ ವರ್ಣಿಸುತ್ತಾನೆ. ರಾಘವಾಂಕನಿಗೆ (ಸು. ೧೨೦೦) ಅವನು 'ಅಪ್ರತಿಮ ಸಿದ್ಧಕುಲಚಕ್ರೇಶನು, ಶಿವಯೋಗಯುತನು, ತ್ರಿಕಾಲಜ್ಞಾನಿಯು.' ಬೊಮ್ಮರಸನು ಅವನನ್ನು 'ಆದಿಸಿದ್ಧ, ಸಕಲಸಿದ್ಧಿಗಳಾಣ್ಮ, ಶಿವಯೋಗಿಗಳ ದೇವ, ಶಿವಸಿದ್ಧಕುಲ ಚಕ್ರವರ್ತಿ, ಕ್ಷುದ್ರಮತ ಸಿದ್ಧ ಕೋಲಾಹಲ, ಯತಿ ಕುಲ ಚಕ್ರವರ್ತಿ' ಎಂದು ಕೊಂಡಾಡುತ್ತಾನೆ. ಎಳಂದೂರ ಹರೀಶ್ವರನು (ಸು. ೧೬೦೬) ಅವನಿಗೆ 'ಯೋಗೀಶ, ಸಿದ್ಧೇಂದ್ರ, ಮಹಾ ಕುಟಿಲಸಿದ್ಧರ ಗಂಡ' ಎಂದು ಕರೆಯುತ್ತಾನೆ. ಚೆನ್ನಬಸವ ಕವಿಯು (ಸು. ೧೭೦೦) ಅವನನ್ನು 'ಅತಿಶಯಸಿದ್ಧ, ಅಚ್ಚರಿಯ ಸಿದ್ಧ, ಮಹಾಸಿದ್ಧ, ಸಿದ್ಧಲಲಾಮಚೂಡಾಮಣಿ' ಇತ್ಯಾದಿಯಾಗಿ ಹೊಗಳುತ್ತಾನೆ. ಇವೆಲ್ಲ ಕೊಂಡಾಟದ ನುಡಿ

ಗಳಿಂದ ರೇವಣ್ಣಸಿದ್ಧನಿಗೆ ಶ್ರೇಷ್ಠ ತರಗತಿಯ ಒಂದು ಸಿದ್ಧಿಪ್ರಾಪ್ತಿಯಾಗಿತ್ತೆಂದು ಹೇಳಬೇಕು. ಇದಲ್ಲದೆ ಹರಿಹರನು ಹಾಗು ಅವನನ್ನು ಅನುಸರಿಸಿದ ಕವಿಗಳು ಅವನು 'ಗಗನದಿಂ ನಡೆತಂದನು.' 'ಜಲದಮೇಲೆ ನಲಿದು ಬರುತಿದ್ದನು' ಇತ್ಯಾದಿಯಾಗಿ ಹೇಳುವುದರಿಂದಲೂ ಮತ್ತು 'ಶರ ಖಡ್ಗ ಸಲಿಲ ವಹ್ನಿಸ್ತಂಭ ರಸಸಿದ್ಧಿ ಉರು ರಸಾಯನಸಿದ್ಧಿಯುಳ್ಳ ಕಾಪಾಲಿಕರ' ಜಯಿಸಿದನು ಎಂದು ಹೇಳುವುದರಿಂದಲೂ ರೇವಣ್ಣಸಿದ್ಧನು ಯೋಗಮಾರ್ಗದಿಂದ ಅಂಥದೊಂದು ಸಿದ್ಧಾವಸ್ಥೆಯನ್ನು ಹೊಂದಿದ್ದನೆಂದು ಹೇಳಬೇಕಾಗುವದು. ತಿಬೇಟ ದೇಶದಲ್ಲಿ ಇಂದಿಗೂ ಯೋಗಸಾಧನೆಯಿಂದ ದೇಹದ ಜಡತ್ವವನ್ನಳಿದು ಅತೀವೇಗದಿಂದ ಅಂತರಿಕ್ಷ ಗಮನಿಗಳಾದ ಯೋಗಿಗಳು ತಮ್ಮ ವೇಗವನ್ನು ಕಡಿಮೆ ಮಾಡಲೋಸುಗ ಮೈತುಂಬ ಭಾರವಾದ ಕಬ್ಬಿಣದ ಸರಪಳಿಗಳನ್ನು ಹಾಕಿಕೊಂಡು ತಿರುಗಾಡುವರೆಂಬುದನ್ನು ನೆನೆದರೆ[೧೩] ರೇವಣ್ಣಸಿದ್ಧನ ಈ ತರಹದ ಸಿದ್ಧಿಯ ಸಂಪತ್ತಿಯು ಕಾಲ್ಪನಿಕವೆಂದು ಹೇಗೆ ಹೇಳುವದು ?

**ಸಿದ್ಧನ ನೊಸಲಗಣ್ಣು** — ರೇವಣ್ಣಸಿದ್ಧನು 'ನೊಸಲಗಣ್ಣ'ನ್ನು ಪಡೆದು ಮುಕ್ಕಣ್ಣಸಿದ್ಧನೆನಿಸಿಕೊಂಡಿದ್ದನೆಂದು ಹೇಳಿದೆಯಷ್ಟೇ! ಅವನು ಪ್ರಾಣಿವಧೆ ಮಾಳ್ಪ ರಾಕ್ಷಸಮಿಥುನವನ್ನು ಸುಟ್ಟುರುಹಿದನು; ಗೋರಕ್ಷನ ಹೆಂಡತಿ ಚಿಕ್ಕಲಕ್ಕಾದೇವಿ ಎಂಬವಳು ಪಾಣಿಪಾತ್ರೆಗೆ ತಂದಿಕ್ಕಿದ ಹೊಸ ಕಠಾರಿಯನ್ನು ಕಣ್ದೆರೆದು ನೋಡಿ ಕರಗಿಸಿ ಅದನ್ನು 'ಲೋಹರಸಭಿಕ್ಷೆ' ಎಂದು ಕುಡಿದನು; ಮತ್ತು ಅವನಿಗೆ ಕುದಿವ ಓಗರವನ್ನಿಕ್ಕಿಸಿದ ಬಿಜ್ಜಳನ ಅರಮನೆಯು ಉರಿಯಿತು; ಇವೆಲ್ಲ ಅವನು ಪಡೆದಿದ್ದ ಬಿಸುಗಣ್ಣಿನ ಮಹಿಮೆಯಿಂದ ಜರುಗಿದುವು ಎಂದು ವರ್ಣಿತವಾಗಿದೆ. ಸೊನ್ನಲಿಗೆಯ ಸಿದ್ಧರಾಮ ಶಿವಯೋಗಿಯೂ ಸಹ ಇಂಥ ನೊಸಲಗಣ್ಣನ್ನು ಪಡೆದು ಅದನ್ನು ಅಲ್ಲಮ ಪ್ರಭುವಿನ ಮೇಲೆ ಪ್ರಯೋಗಿಸಿದನೆಂದು ಪ್ರಭುವು ಅದನ್ನು ತನ್ನ ಅಂಗಾಲಲ್ಲಿ ಅಡಗಿಸಿಕೊಂಡನೆಂದು ಪ್ರಭುಲಿಂಗಲೀಲೆ ಶೂನ್ಯಸಂಪಾದನೆ ಮೊದಲಾದ ಗ್ರಂಥಗಳಿಂದ ತಿಳಿದು ಬರುತ್ತದೆ. ಮತ್ತು ಈ 'ಹಣೆಗಣ್ಣ ಬೆಳಗ ಹೊಲಿಗೆ' ಯನ್ನು ಸಿದ್ಧರಾಮ ಶಿವಯೋಗಿಯು ಖರ್ಪರನೆಂಬ ಜೋಗಿಯ ಮೇಲೆ ಬಿಟ್ಟಿದ್ದನೆಂದು ರಾಘವಾಂಕನು ತಿಳಿಸುತ್ತಾನೆ.[೧೪] ಸಂಚಿಯ ಹೊನ್ನಮನೂ (ಸು. ೧೬೮೦) ಸಹ ಹದಿಬದೆಯ ಧರ್ಮದಲ್ಲಿ ಇಂಥ ಉರಿಗಣ್ಣನ್ನು ಪಡೆದ ಒಬ್ಬ ಯೋಗಿಯ ಕಥೆಯನ್ನು ಹೇಳುತ್ತಾಳೆ. ಈ ನೊಸಲಗಣ್ಣಿನ ರಹಸ್ಯವೇನು? ಕಣ್ಣಿನಲ್ಲಿ ಸೂರ್ಯನಲ್ಲಿರುವಂತೆಯೇ ನೈಜವಾದ ಒಂದು ಪ್ರಕಾಶ ಶಕ್ತಿಯಿದೆ. ಇದುವೆ ಕಣ್ಣಿನ ಕಳೆ.

---

೧೩ With Mystics and Magicians in Tibet: VI Psychic Sports.
—Alexandra David-Neel

೧೪ ಸಿ. ಚಾ. ೭—೩೦-೩೩

ಜನ ಸಾಮಾನ್ಯದ ಕಣ್ಣುಗಳ ಈ ಕಳೆಯು ಕಾಳಿಕೆಯಿಂದ ಮುಸುಕಿರುತ್ತದೆ. ಅನಿಮಿಷ ದೃಷ್ಟಿಯ ಯೋಗಾನುಸಂಧಾನದಿಂದ ಈ ಕಾಳಿಕೆ ಹರಿದು ಕಣ್ಣಿನ ಕಳೆಯು ಕರಿಗೊಂಡು ದಿವ್ಯತೇಜಸ್ಸು ಒಂದೇ ಸವನೆ ಹೊರಹೊಮ್ಮುತ್ತಿರುತ್ತದೆ. ಇದನ್ನು ಅಲ್ಲಮಪ್ರಭುವು

"ನಿಟಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ
ಘಟದೊಳಗೆ ತಾನಾಗಿ ತೊಳಗಿ ಬೆಳಗಿ।
ವಟವೃಕ್ಷದ ಕೆಳಗೆ ಲೋಕಾದಿಲೋಕಗಳ
ಘಂಟಿಕೆಯಂತಡಗಿದ ಪರಾತ್ಪರವಿದು॥ "*

ಎಂದು ವರ್ಣಿಸಿರುವನು.

ಇದರಲ್ಲಿ ಸಂಪಾದನೆಯ ತರಗತಿಗನುಸಾರವಾಗಿ ಲೋಕದ ಆಗಹೋಗುಗಳನ್ನು ತಡೆಯುವ ಮತ್ತು ತನ್ನಿಚ್ಛೆಯಲ್ಲಿ ಅವನ್ನು ತಿರುಗಿಸುವ ಸಾಮರ್ಥ್ಯವಿರುತ್ತದೆ. ಹಿಂದು ಇಂದು ಮುಂದುಗಳ ತಿಳಿಯು ಇದಕ್ಕಿರುತ್ತದೆ. ಜ್ಯೋತಿರ್ಲಿಂಗವೆಂದರೂ ಇದೇ. ಶಂಕರಾನಂದಯೋಗಿಯು (ಸು. ೧೮೦೦) ಈ ಜ್ಯೋತಿಲಿಂಗವನ್ನು ಕುರಿತು

ಕಡಲೊಳಗೆ ಕಲ್ಲೊಳಗೆ ಮರದೊಳಗೆ ಮಾನವರ
ಒಡಲೊಳಗೆ ಕಾಮಿಗಳ ಮನದೊಳಗೆ ಜ್ಞಾನಿಗಳ
ನುಡಿಯೊಳಗೆ ಯೋಗಿಗಳ ಕಣ್ಣೊಳಗೆ ರಾಜಿಸುತ
ಲಡಗಿ ಕೊಂಡಿರ್ಪಮಲತರ ಜ್ಯೋತಿಲಿಂಗ....॥೧೫

ಎಂದು ವರ್ಣಿಸಿರುವನು. ಇಲ್ಲಿ ಜ್ಯೋತಿಯು ಹೆಚ್ಚು ಹೆಚ್ಚು ಪರಿಸ್ಫುಟಗೊಳ್ಳುತ್ತ ಕೊನೆಗೆ ಯೋಗಿಗಳ ಕಣ್ಣುಗಳಲ್ಲಿ ಅದು ಹೇಗೆ ಪರಿಪೂರ್ಣಾವಸ್ಥೆಯನ್ನು ಹೊಂದಿ ಜಾಗ್ರತವಿರುವುದೆಂಬುದನ್ನು ಗಮನಿಸಬೇಕು. ಸಿದ್ಧರಾಗಲಿ ಯೋಗಿಗಳಾಗಲಿ ನೊಸಲಗಣ್ಣನ್ನು, ಪಡೆದಿದ್ದರೆಂದರೆ ಅವರಿಗೆ ತ್ರಿಕಾಲಜ್ಞಾನವಿತ್ತು, ತಮ್ಮಿಚ್ಛೆಯಲ್ಲಿ ಸೃಷ್ಟಿಯ ಆಗುಹೋಗುಗಳ ಗತಿಯನ್ನು ಮಾರ್ಪಡಿಸುವ ಸಾಮರ್ಥ್ಯ ದೃಷ್ಟಿಯು ಅವರಿಗಿತ್ತು ಎಂದು ತಿಳಿಯಬೇಕಲ್ಲದೆ ಅವರಿಗೇನು ಮೂರನೆಯ ಕಣ್ಣೊಂದು ಇರುತ್ತದೆ ಅದು ಹಣೆಯಲ್ಲಿ ಇರುತ್ತದೆ ಎಂದು ಭಾವಿಸಲಾಗದು. ರೇವಣ್ಣಸಿದ್ಧನಿಗೆ ಸಾಧ್ಯವಾದುದು ಇಂಥದೊಂದು ತಿಳಿಗಣ್ಣು.

**ರೇವಣ್ಣನ 'ತವನಿಧಿ':—** ಗಾಣದ ಕಲ್ಲಿಸೆಟ್ಟಿಗೆ ರೇವಣ್ಣಸಿದ್ಧನು ತವನಿಧಿಯನ್ನು ಕೊಟ್ಟನೆಂದು ಹರಿಹರಾದಿಗಳು ತಿಳಿಸುವರು. ದೇವರದಾಸಿಮಯ್ಯ ಶಂಕರ

* ಪ್ರಭುದೇವರ ಮಂತ್ರಗೋಪ್ಯ
ಇಲ್ಲಿ 'ಘಂಟಿಕೆ' ಇತ್ಯಾದಿ ಶಬ್ದಗಳಿಂದ ಹಠಯೋಗದ ಅನುಸಂಧಾನವು ಶಿವಯೋಗಕ್ಕೆ ಮಾರ್ಪಟ್ಟ ರೀತಿಯನ್ನು ತಿಳಿಯಬಹುದು

೧೫ ಕೈವಲ್ಯ ನವನೀತ ೧-೧೦

ದಾಸಿಮಯ್ಯ ಜೇಡರದಾಸಿಮಯ್ಯ ಇವರುಗಳ ಪ್ರಸಂಗದಲ್ಲಿ ಈ ತವನಿಧಿಯ ಪ್ರಸ್ತಾಪವು ಬರುವದು. ಅಲ್ಲದೆ, ಇನ್ನೂ ಅನೇಕ ಶರಣರ ಕಥೆಗಳಲ್ಲಿಯೂ ತವನಿಧಿಯ ಉಲ್ಲೇಖವು ದೊರೆಯುವದು. ದ್ರೌಪದಿಗೆ ಕೃಷ್ಣನು ಅಕ್ಷಯ ಪಾತ್ರೆಯನ್ನು ದಯಪಾಲಿಸಿದನೆಂದು ಕಥೆಯೊಂದು ಇರುವದು. ಮತ್ತು 'ನಿಧಿ' ಹೊಯ್ದು ಪೂಜೆ ಮಾಡು ಇತ್ಯಾದಿಯಾದ ಮಾತುಗಳೂ ಬಳಕೆಯಲ್ಲಿರುವವು. ಹಾಗಾದರೆ ಈ ತವನಿಧಿಯ ರಹಸ್ಯವೇನು? ಭಕ್ತರಿಗೆ ಯಾವುದಕ್ಕೂ ಕೊರತೆಯಾಗದಂತೆ ತಮ್ಮ ತಪಶ್ಶಕ್ತಿಯಿಂದ ಪ್ರಬಲವಾದ ಇಚ್ಛೆಯನ್ನು ಬೆರಸಿ ಕಾಳುಗಳನ್ನೊ ಇನ್ನಾವುದಾದರು ಒಡವೆಯನ್ನೊ ಅನುಗ್ರಹಿಸುವ ಕ್ರಮವದು. ಬಡತನದ ಗೋಳಿನಿಂದ ಬಳಲುತ್ತಿದ್ದ ತೆಲ್ಲಿಗನಪ್ಪ ಕಲ್ಲಿಸೆಟ್ಟಿಗೆ ಈ ತವನಿಧಿಯನ್ನು ರೇವಣ್ಣಸಿದ್ಧನು ನೀಡಿದುದರಿಂದ "ತವಿಲಾಯ್ತು ಬಡತನಂ ಧನಕನಕ ವಸ್ತು ವಾಹನವವಂಗುಂಟಾದುವು" ಎಂದು ಬೊಮ್ಮರಸನು ಹೇಳುವನು. ಇದು ಸಿದ್ಧನ ಸಿದ್ಧಿ ಸಾಮರ್ಥ್ಯದ ಇನ್ನೊಂದು ನಿಲವು.

**ಶಿವಯೋಗಿ ರೇವಣ್ಣ :—** ಹರಿಹರನೇ ಮೊದಲಾದವರು ರೇವಣ್ಣಸಿದ್ಧನನ್ನು 'ಪರಮ ಶಿವಯೋಗಿ, ಶಿವಯೋಗಿಗಳ ದೇವ, ಶಿವಯೋಗಲಲಾಮ' ಎಂದು ಕರೆದಿರುವರು. 'ಶಿವತತ್ವಕೋವಿದ, ಶೈವದೀಕ್ಷಾಗುರು, ಶಿವಸಿದ್ಧಾಂತ ವಲ್ಲಭ' ಎಂದೂ ಹೊಗಳಲ್ಪಟ್ಟಿರುವನವನು. ಶಿವಯೋಗಿ ಶಾಂತಿಮಯ್ಯಗಳಲ್ಲಿ ಅನುಗ್ರಹವನ್ನು ಹೊಂದಿ ಅವನ ಸಾಂಪ್ರದಾಯಕ್ಕೆ ಸೇರಿದನೆಂಬುದು ಸರಿಯೇ. ಆದರೆ ರೇವಣ್ಣಸಿದ್ಧನು ಆಚರಿಸಿದ ಶಿವಯೋಗವಾವುದು ? ಅವನು ಸ್ಥಾವರಲಿಂಗ ಪೂಜೆಯ ವಿಶಿಷ್ಟತೆಯಿಂದ ಬೆರೆತ ಶೈವಧರ್ಮವನ್ನು ಪ್ರಸಾರಗೊಳಿಸಿದನು. ಯೋಗಾಭ್ಯಾಸದ ಬಲವು ಅವನ ಮೈಗೊಂಡಿತ್ತು. ಈ ದೆಸೆಯಿಂದ ಅವನು ಶಿವಯೋಗಿಯು. ಮಂತ್ರ-ಹಠ-ಲಯ-ರಾಜ- ಶಿವಯೋಗ ಪಂಚಕದಲ್ಲಿ ಶಿವಯೋಗದ ಸ್ಥಾನವು ಉತ್ತರೋತ್ತರ ಆಧಿಕ್ಯದಿಂದ ಕೂಡಿ ಕೊನೆಗೆ ಬರುತ್ತದಷ್ಟೇ! ಈ ಶಿವಯೋಗದ ಲಕ್ಷಣ ನೆಲೆ ಕಲೆಗಳನ್ನು ಕುರಿತು ನಿಜಗುಣ ಹಾಗು ಸರ್ಪಭೂಷಣ ಶಿವಯೋಗಿಗಳು ಬಹು ಸರಸವಾಗಿ ಹಾಡಿರುವರು :

> ಪರತರ ಶಿವಲಿಂಗವೆಳಸಿ ನಿನಗಾಗಿ
> ಕರಕಂಜದೊಳು ಕಾಣಿಸಿತು ಯೋಗಿ ಯಜಿಸು ॥ ೧೬
> ಬೆರೆಯು ಬಾರದೆ ತಿಳಿದು। ಬೆರೆಯು ಬಾರದೆ
> ಮರೆದು ಬಾಹ್ಯವನ್ನು ತನ್ನ
> ಕರದಖಂಡ ತೇಜದೊಡನೆ ॥ ೧೭

ಎಂದು ತಾವು ಸಾಧಿಸಿದ ಶಿವಯೋಗ ಸಾಧನೆಯನ್ನು ಮತ್ತು ಸಂಪಾದನೆಯನ್ನು

---

೧೬ ಕೈವಲ್ಯ ಪದ್ಧತಿ ೪-೨.

೧೭ ಕೈವಲ್ಯ ಕಲ್ಪವಲ್ಲರಿ, ೪-೨೬.

ಕುರಿತು ಹಾಡಿದ ಆ ನಿಜಗುಣ ಮತ್ತು ಸರ್ಪಭೂಷಣ ಶಿವಯೋಗಿಗಳ ಶಿವಯೋಗದ ಆಚರಣೆಗೂ ಅದರಂತೆಯೇ.

ತೂಗಿರೆ ಶರಣರ ಸತಿಯರು ಶಿವ ।
ಯೋಗ ಸಂಪದದೊಳು ಬಿಡದೆ ಲಿಂಗವನು ॥ ೧೮

ಎಂದು ಕರದಿಷ್ಟಲಿಂಗವಿಡಿದು ಯೋಗಸಾಧನೆ ಮಾಡಿದ ಇತ್ತೀಚೆಗಿನ ಪೈಲಾರ ಬಸವಲಿಂಗ ಶಿವಯೋಗಿಯ ಶಿವಯೋಗದಾಚರಣೆಗೂ ಮತ್ತು ರೇವಣ್ಣಸಿದ್ಧನ ಶಿವಯೋಗದ ಆಚರಣೆಗೂ ಬಹಳೇ ಹೆಚ್ಚುಕಡಮೆಯಿದೆ. ಲಿಂಗವಂತರು ತಮ್ಮ ಇಷ್ಟಲಿಂಗವನ್ನು ಕರದಲ್ಲಿರಿಸಿ ಪಡೆಯುಕೊಳ್ಳುವ ಶಿವಯೋಗ ಸಂಪಾದನೆಯು ರೇವಣ್ಣಸಿದ್ಧನಿಗೆ ನಿಲುಕಿತ್ತೆಂಬ ಬಗೆಗೆ ಸಂಶಯವಿದೆ. ಯಾಕಂದರೆ ಅವನು ಶುದ್ಧ ಶೈವ ಮಾರ್ಗಾವಲಂಬಿ; ಸ್ಥಾವರ ಲಿಂಗ ಪೂಜಕನಾದ ಅವನು ಶಿವಮಂತ್ರಾನು ಸಂಧಾನಿಯಾಗಿ ಶಿವಯೋಗದ ಒಂದು ನಿಲವನ್ನು ಸಾಧಿಸಿಕೊಂಡಿರಬೇಕು. ಅದರಂತೆ ಇನ್ನುಳಿದ ಯೋಗಗಳ ಸೊಬಗನ್ನೂ ಸವಿದಿರಬೇಕು. ಆದರೆ ಕರದಲ್ಲಿ ಇಷ್ಟಲಿಂಗವಿಡಿದು ಆಚರಿಸುವ ಶಿವಯೋಗ ಸುಖವು ಅವನಿಗೆ ಎಷ್ಟೂ ನಿಲುಕಿರಲಿಲ್ಲವೆಂಬುದನ್ನು ಮರೆಯಲಾಗದು.

**ರೇವಣ್ಣನ ಯೋಗಾವಸ್ಥೆ :—** ಯೋಗಸಿದ್ಧರಿಗೆ ಬಾಲ್ಯ ಉನ್ಮತ್ತ ಪೈಶಾಚಿಕಗಳೆಂಬ ಮೂರು ಅವಸ್ಥೆಗಳಲ್ಲಿ ಆತ್ಮಗತ ಸತ್ವರಜಸ್ತಮೋ ಗುಣಗಳ ತಾರತಮ್ಯಾನುಸಾರವಾಗಿ ಒಂದು ಅವಸ್ಥೆಯು ಒದಗುವುದೆಂದು ಹೇಳುತ್ತಾರೆ. ಮಹಾ ಸಿದ್ಧನಾಗಿ ಹೊರಬಿದ್ದ ಬಳಿಕ ಲೋಕಕ್ಕೆ ಕಾಣುವ ಅವನ ವೇಷವು ಮರುಳ ವೇಷವು.

ಪಿಣ್ಯಾಕ ದೇವನೆಂಬುವ ನಾಮುವ ( ನಾಂತು )
ಲೋಕಕ್ಕೆ ತಾ ಮರುಳು ತನಗೆ ಲೋಕಂ ಮರುಳು
ತಾನಾಗಿ ಸುಳಿವುತಿರ್ದ್ದ ಸಿದ್ಧರೇವಣಂ
ಮತ್ತಂ ಪೊನ್ನಾಂಬಲವನೈದಿ ... ... ಕಾಂಚೀಪುರದೊಳೇಕಾಂಬ್ರನಾಥನಂ
.... .... ಕಂಡು....ಮರುಳನಂತೆ ಸುಳಿವುತಂ;
... ಸಿದ್ಧರ ದೇವನಾ ಪ್ರತಿಮೆಯಂ ನೋಡಿ
ಮಿಗೆ ತನ್ನ ಪುಲ್ಲಿಂಗದತ್ತ ಕೈಯಂ ನೀಡಿ
ತೆಗೆದು ತನ್ನಯ ವೀರ್ಯಮಂ ಮೂರ್ತಿಯೊಳಗೊತ್ತೆ

ಇತ್ಯಾದಿಯಾಗಿ ಹರಿಹರನು ತಿಳಿಸುವ ಮಾತುಗಳಿಂದ ರೇವಣ್ಣಸಿದ್ಧನಿಗೆ ಪೈಶಾಚಿಕ ಅವಸ್ಥೆ ಉಂಟಾಗಿತ್ತೆಂದು ಊಹಿಸಬಹುದು.

೧೮ ಶಿವಾನುಭವ ದರ್ಪಣ ಪದ ೧೦.

" ಸುಳಿದನಾ ಕಾಂಚಿಯೊಳು ಭಕ್ತಿ ಭಿಕ್ಷೆಯನೆ ಕೈಕೊಳುತೆ ಪೈಶಾಚಿಕಾಕಾರದಿಂ
ರೇವಣಸಿದ್ಧಯೋಗೀಂದ್ರನು."
" ಅದುಪೆಗೌಪಿನ ಮೆಯ್ಯ ಮಣ್ಣುಕಿಣ ಪೊದಳ್ದ
ಕಿರಿದಾಗಿ ಪರಿಢ ಶತಜೀರ್ಣ ಕಂಥೆಯ ಪೊದೆದು ಮುಸುಕಿದ ಜಡೆಗಳ ।
ಕರಿಗೊಂಡ ಪೈಶಾಚಿಕಾಕೃತಿಯು ಮೊಳೆನಗೆಯ
ಹೊರವೇಷವಿಂತು ರಾರಾಜಿಸಲು ... ..... ..... "೧೯

ಎಂದು ಬೊಮ್ಮರಸನು ತಿಳಿಸುವ ಮಾತುಗಳು ಇದನ್ನು ದೃಢಗೊಳಿಸುತ್ತವೆ.

**ರೇವಣ್ಣನ ಸಿದ್ಧಿ ಪ್ರಯೋಗ:—** ಯೋಗಸಿದ್ಧನಾದ ರೇವಣ್ಣನು ತನ್ನ ಸಿದ್ಧಿಯನ್ನು ಸೂರೆಗೊಂಡುದು (೧) ಜನ ಸಾಮಾನ್ಯರ ಅಭೀಷ್ಟೆಗಳನ್ನು ಪೂರೈಸಿ ಶಿವಧರ್ಮಕ್ಕೆ ಅವರ ಒಲುಮೆಯನ್ನು ಪಡೆಯುವದಕ್ಕಾಗಿ (೨) ದುಷ್ಟರಿಂದ ಶಿಷ್ಟರಿಗೊದಗುವ ಕಷ್ಟನಿವಾರಣೆಗಾಗಿ (೩) ಸಿದ್ಧಿಯ ಬಲದ ಬಲುಗರ ಹೊಡೆದ ಸಿದ್ಧರ ಪುಂಡತನವನ್ನು ಅಡಗಿಸುವದಕ್ಕಾಗಿ (೪) ರಾಜರ ಹಿತವನ್ನು ಬಯಸಿ ಅವರಿಗೊದಗಿದ ಕಂಟಕಗಳನ್ನು ಕಳೆಯುವದಕ್ಕಾಗಿ ಮತ್ತು (೫) ಅವರ ಆಶ್ರಯದಿಂದ ಅನ್ಯಮತ ಕೋಲಾಹಲಗೆಯ್ದು ಶೈವ ಧರ್ಮವನ್ನು ಪ್ರಸಾರಗೊಳಿಸುವದಕ್ಕಾಗಿ.

ವೀರಬಿಜ್ಜಳನ ಮಂಗಳವಾಡದಲ್ಲಿ 'ಹಿಂಡಿಯ ಮರುಳ' ನಾಗಿ ಗಾಣದ ಕಲ್ಲಿಸೆಟ್ಟಿಗೆ ಕಣ್ಗಳನಿತ್ತುದಾಗಲಿ, ಅಂಬಳಕವನ್ನು ಮೋಹಿಸಿ ಸೂಳೆ ಮಾಯಿದೇವಿಗೆ ಕಂಬಿಯ ಅಗ್ಗವಣಿಯನ್ನು ಹೊತ್ತು, ಮಾಸನೂರಿನ ಸುರಗಿಯ ಪ್ರಸಂಗದಲ್ಲಿ ಕೆರೆಯ ನೀರಿಗೋಸುಗ ಬಲಿಯಾಗಲಿದ್ದ ಆಕೆಯ ಮಗಳ ಹಾಗು ಅನೇಕ ಹೆಣ್ಗಳ ಸೆರೆಯನ್ನು ಬಿಡಿಸಿದುದಾಗಲಿ, ಸೊನ್ನಲಾಪುರದ ಚಾಮಲದೇವಿಯ ಭಕ್ತಿಗೆ ಶಿವಯೋಗಿ ಸಿದ್ಧರಾಮನ ಉತ್ಪತ್ತಿಯನ್ನು ಸೂಚಿಸಿದುದಾಗಲಿ, ಮೊರಡಿಯ ಮುದ್ದಗೌಂಡನರ್ಧಾಂಗಿ ಸುಗ್ಗವ್ವೆಯ ಶಿವಯೋಗಿಸಿದ್ಧನಿಹ ಗರ್ಭಕ್ಕೆ ವಂದಿಸಿದುದಾಗಲಿ, ಮಾಸನೂರಿನ ಶಿವಾಲಯದೊಳಿದ್ದ ದುಷ್ಟರ ಜೋಡಿಯನ್ನು ಕಳೆದುದಾಗಲಿ 'ಅಲ್ಲಲ್ಲಿ ತಟಾಕಂಗಳನು ಕಟ್ಟಿಸುತ್ತಂ ಶಿವಪುರಂಗಳ ಮಾಡಿಸುತ್ತಂ ಛತ್ರಂಗಳನು ನಿರ್ಮಿಸುತ್ತಂ, ಕುರುಡರ್ಗೆ ಕಣ್ಗಳಂ ಹೆಳವರ್ಗೆ ಕಾಲ್ಗಳಂ ಬಂಜೆಯರ್ಗೆ ಮಕ್ಕಳಂ ಕೆಟ್ಟರಸು ಮಕ್ಕಳ್ಗೆ ರಾಜ್ಯಮಂ ಕಂಡ ಕಂಡ ಬಡವರ್ಗೆ ಸಂಪದಂಗಳನೀವುತ್ತಿ" ದ್ದುದಾಗಲಿ ಶೈವಧರ್ಮ ಪ್ರಸಾರಕ್ಕೆ ಜನಸಾಮಾನ್ಯರ ಬೆಂಬಲವನ್ನು ಗಳಿಸುವುದಕ್ಕಾಗಿ ಅಲ್ಲವೇ?

**ರೇವಣ್ಣನ ಸಿದ್ಧಿಯ ಹೋರಾಟ:— (ಅ) ಗೋರಕ್ಷನೊಡನೆ —** ಭಾರತ ಭೂಮಿಯಲ್ಲಿ ಗುಜರಾತದ ಸೋಮನಾಥ ಸುಲಿಗೆಯಿಂದೀಚೆಗೆ ರೂಢ

೧೯ ರೇ. ಸಿ. ಪು. ೫-೫೧ ಮತ್ತು ರೇ. ಸಾಂಗತ್ಯ ೪-೭-೮ ಸಹ ನೋಡಿರಿ.

ವಾಗಿರಬೇಕಾದ 'ನಾಥ' ಮತ್ತು 'ಸಿದ್ಧ' ಪಂಥಗಳು ಬಹು ಪ್ರಖ್ಯಾತ ವಾದುವುಗಳು. ಆ ನಾಥ ಪಂಥದವರಿಗೆ 'ಆದಿನಾಥ' ನು ಹೇಗೆ ಮೊದಲಿಗನೊ ಹಾಗೆಯೇ 'ಸಿದ್ಧ' ಪಂಥದವರಿಗೆ 'ಆದಿಸಿದ್ಧ' ನು ಮೊದಲಿಗನು. ರೇವಣ್ಣ ಸಿದ್ಧನು 'ಆದಿಸಿದ್ಧ'ನೆಂದು ಬೊಮ್ಮರಸನು ಕರೆದಿರುವನು. ಎರಡೂ ಪಂಥದವರಿಗೆ ಹಠಯೋಗವೇ ಪೂರ್ಣಸಾಧನೆ, ಶಿವನೇ ಉಪಾಸ್ಯದೇವತೆ, ನಾನಾ ಮುಖವಾದ ಸಿದ್ಧಿ ಸಂಪಾದನೆಯೇ ಗುರಿ. ಮುಂದೆ ಈ ಎರಡೂ ಪಂಥದವರಲ್ಲಿ ಅವಾಂತರಭೇದ ಗಳು ತಲೆದೋರಿದುವು. ಅವರಿಗೆ ಕೇವಲ ಶಿವನೇ ಉಪಾಸ್ಯದೇವತೆಯಾಗಿರಲಿಕ್ಕಿಲ್ಲ. ಇತ್ತಂಡದ ಗುರಿಯೂ ಸಿದ್ಧಿಯನ್ನು ಸಂಪಾದಿಸುವದೇ ಆಗಿದ್ದರೂ ಅವರು ಪಡೆದು ಕೊಂಡ ಸಿದ್ಧಿಯ ರೀತಿಯನ್ನು ಬಗೆದು ರಾಘವಾಂಕನು ತನ್ನ ಸಿದ್ಧರಾಮ ಚಾರಿತ್ರ ದಲ್ಲಿ 'ವಿಕಾರಿ ಸಿದ್ಧರು' 'ಶಿವ ಸಿದ್ಧರು' ಎಂದು ಎರಡು ಪಂಗಡಗಳನ್ನು ಮಾಡು ವನು.[೨೦] ಇವರಲ್ಲಿ ಆಗಾಗ್ಗೆ ಪರಸ್ಪರ ಸಿದ್ಧಿಗಳ ಸ್ಪರ್ಧೆಗಳು ನಡೆಯುತ್ತಿದ್ದುವೆಂದು ಅಲ್ಲಲ್ಲಿ ದೊರೆಯುವ ಉಲ್ಲೇಖಗಳಿಂದ ತಿಳಿಯಬಹುದು. ಹಠಯೋಗ ಪ್ರದೀಪಿಕೆಯಲ್ಲಿ ನಾಥರ ಜೊತೆಗೆ ಸೇರಿಸಲ್ಪಟ್ಟ ಅಲ್ಲಮಪ್ರಭುವು ನಾಮಾಂಕಿತ ಹಠಯೋಗಿ ಯಾಗಿದ್ದಂತೆ ಶಿವಯೋಗಿಯೂ ಆಗಿದ್ದನು. ಅವನು ತನ್ನ ಶಿವಯೋಗ ಸಾಮರ್ಥ್ಯದಿಂದ ಗೋರಕ್ಷನ 'ತನುಸಿದ್ಧಿ' ಯನ್ನು ವಿಡಂಬಿಸಿ ಅವನಿಗೆ ಲಿಂಗದೀಕ್ಷೆಯನ್ನು ಮಾಡಿದನೆಂದು ಪ್ರಭುಲಿಂಗಲೀಲೆ ಶೂನ್ಯಸಂಪಾದನೆ ಮೊದಲಾದ ಗ್ರಂಥಗಳಿಂದ ಅರಿಯಬಹುದಾಗಿದೆ. ಕೊಲ್ಲಾಪುರದಲ್ಲಿದ್ದ 'ಕೌಟಿಲ್ಯ ವಿದ್ಯಾಸಿದ್ಧರ' ಒಡೆಯನಾದ 'ರಸರಸಾಯನ ಸಿದ್ಧಿ' ಯ ಈ ಗೋರಕ್ಷ (ಗೋರಕನಾಥ) ನನ್ನು ರೇವಣ್ಣನು ಸುರಗಿಯ 'ಲೋಹರಸಭಿಕ್ಷೆ' ಯ ಪ್ರಸಂಗದಲ್ಲಿ ಗೆದ್ದನೆಂದು ಹರಿಹರನೇ ಮೊದಲಾದವರು ತಿಳಿಸುತ್ತಾರೆ.

(ಆ) ಖರ್ಪರನೊಂ ನೆ-ಇದರಂತೆ ಅನೇಕ ಜನ ಸ್ತ್ರೀಯರನ್ನು ಕೆರೆಗೆ ಆಹಾರವಿತ್ತರೆ ಮಾಸನೂರಿನ ಸುರಗಿಯು ಕೈಸೆರೆಯಾಗುವದೆಂದು ಬಿಜ್ಜಳನಿಗೆ ಬೋಧಿಸಿದ ಖರ್ಪರ ನೆಂಬ ಇನ್ನೊಬ್ಬ ಜೋಗಿಯನ್ನು ರೇವಣ್ಣಸಿದ್ಧನು ಸೋಲಿಸಿದನೆಂದು ಹರಿಹರಾ ದಿಗಳು ಹೇಳುತ್ತಾರೆ. ರಾಘವಾಂಕನು ಸಿದ್ಧರಾಮ ಚಾರಿತ್ರದಲ್ಲಿ 'ಕುಟಿಲ ವಿದ್ಯಾ ಸಮುದ್ರ' ನೆಂಬ ಬಿರುದುಳ್ಳ ಈ ಖರ್ಪರನೂ ಸಿದ್ಧರಾಮ ಶಿವಯೋಗಿಯಿಂದ ಸೋಲಿಸಲ್ಪಟ್ಟನೆಂದು ತಿಳಿಸುತ್ತಾನೆ.[೨೧] ರೇವಣ್ಣಸಿದ್ಧನು ಭಂಗಿಸಿದ "ಕುಹಕಮಂ ಬಲ್ಲ ಕಪ್ಪರನೆನಿಪ್ಪ ಬಹು ಕುಟಿಲ ಕುಹಕದ ಜೋಗಿ ಒಪ್ಪುವ ಸಹಸ್ರ ಯೋಗಿಣಿ ಯರ್ಗೆ ಪತಿಯಾಗಿ" ಇದ್ದನೆಂದು ಹರಿಹರನು ಹೇಳುತ್ತಾನೆ. ಇವನ ಬಗೆಗೆ ಬೊಮ್ಮರಸನು ಕೊಂಕಣದೇಶದಿಂದೆ

೨೦ ಸಿ. ಚಾ. ೧-೯ ೨೧ ಸಿ. ಚಾ. ೭ – ೨೬ – ೩೧

ಬರುತಿದ್ದನಾ ಜೋಗಿ ಪೆರ್ಬುಲಿಯನಡರಿ ಭೀ
ಕರಭೂತವೇತಾಳನಿಕರ ಸೇವಿಸುತೆಯ್ದಿ
ವರ ಕುಟಿಲ ವಿದ್ಯೆಯೊಳ್ ಧೀರರೀರ್ಛೈನೂರು ಯೋಗಿಣಿಯೊಡನೆಲ್ಲರಿ
ಶರ ಖಡ್ಗ ಸಲಿಲ ವಹ್ನಿಸ್ತಂಭ ರಸಸಿದ್ಧಿ
ಯುರು ರಸಾಯನ ಸಿದ್ಧಿಯುಳ್ಳ ಕಾಪಾಲಿಕರ
ನೆರವಿಯಿಕ್ಕೆಲದೊಳೋಲೈಸಿ ........

ಬರುತ್ತಿತ್ತು ಎಂದು ಹೇಳುವನು. ೨೨ ರೇವಣ್ಣಸಿದ್ಧನ 'ಕುಂಡಲ ಕಂಥೆ ಲಾಕುಳಂ ಮೆಟ್ಟಿದಾವುಗೆ' ಮೊದಲಾದ ಕುರುಪುಗಳಿಂದ ಅವನು ಲಕುಲೀಶ ಶೈವ ಪರಂಪರೆಗೆ ಸೇರಿದವನೆಂದು ಊಹಿಸಲಾಗಿದೆ. ಇದರಿಂದ 'ಘುಟಿಕಾಸಿದ್ಧ'೨೩ ನಾದ ಕರ್ಪರನು ಕಾಪಾಲಿಕನೆಂದೂ ನಾಥ ಮತ್ತು ಸಿದ್ಧರ ನಡುವೆ ವಾದಗಳೇಳುತ್ತಿದ್ದಂತೆ ಕಾಪಾಲಿಕ ಸಿದ್ಧ ಮತ್ತು ಲಕುಲೀಶ ಸಿದ್ಧರ ನಡುವೆ ಸಹ ತಮ್ಮ ತಮ್ಮ ಸಿದ್ಧಿ ಪಂಥಗಳ ಮೇಲ್ಮೈಗಾಗಿ ಆಗಾಗ ಹೋರಾಟಗಳು ನಡೆಯುತ್ತಿದ್ದುವೆಂದು ಹೇಳಬಹುದು. ಈ ವಾದದಲ್ಲಿ 'ಪಾದರಸದಂತೆ ದುರುಳಳಿದು ಖರ್ಪರಂ ಜಾರಿದಂ ಕೊಂಕಣದ ಸರಣಿ ಪಥವಿಡಿದಾ ಪಥದೊಳು' ಎಂದು ಬೊಮ್ಮರಸನು ತಿಳಿಸುತ್ತಾನೆ.

(ಇ) **ವಿರೂಪಾಕ್ಷ ಸಿದ್ಧನೊಡನೆ** — ರೇವಣ್ಣಸಿದ್ಧನು ಮಂಗಳವಾಡದಲ್ಲಿದ್ದಾಗ ಅವನ ಬಳಿಗೆ ವಿರೂಪಾಕ್ಷ ಸಿದ್ಧನೆಂಬವನು ಬಂದಿದ್ದನೆಂದೂ ಅವನು 'ಮುನ್ನಿನ ವಿಭೀಷಣ ರೂಪಂ ಬಿಟ್ಟು ಭೀಷಣ ರೂಪಂ ಕೈಕೊಂಡಿದ್ದ'ನೆಂದೂ ಹರಿಹರನು ತಿಳಿಸುತ್ತಾನೆ. ವಿಭೀಷಣ ರೂಪವುಳ್ಳವನು ಲಂಕೆಯ ವಿಭೀಷಣನೆಂದೇ ಎಲ್ಲ ಬರೆಹಗಾರರು ಭ್ರಮಿಸಿರಬೇಕಲ್ಲವೆ? ಹಠಯೋಗ ಪ್ರದೀಪಿಕೆಯ ಹಠಯೋಗಿಗಳ ಗುಂಪಿನಲ್ಲಿ ವಿರೂಪಾಕ್ಷ ಸಿದ್ಧ ಎಂದು ಒಂದು ಹೆಸರು ಬರುತ್ತದೆ.೨೪ ಅವನೇ

---

೨೨ ರೇ. ಸಿ. ಪು. ೮—೯    ೨೩ ರೇ. ಸಾಂಗತ್ಯ ೧೦—೧೪

೨೪ ಶ್ರೀ ಆದಿನಾಥ ಮತ್ಸ್ಯೇಂದ್ರ ಶಾಬರಾನಂದ ಭೈರವಾಃ ।
ಚೌರಂಗೀ ಮೀನ ಗೋರಕ್ಷ ವಿರೂಪಾಕ್ಷ ಬಿಲೇಶಯಾಃ ॥
ಮಂಥಾನೋ ಭೈರವೋ ಯೋಗೀ ಸಿದ್ಧಿರ್ಬುದ್ಧಶ್ಚ ಕಂಥಡಿಃ ।
ಕೋರಂಟಕಃ ಸುರಾನಂದಃ ಸಿದ್ಧಪಾದಶ್ಚ ಚರ್ಪಟಿಃ ॥
ಕಾನೇರೀ ಪೂಜ್ಯಪಾದಶ್ಚ ನಿತ್ಯನಾಥೋ ನಿರಂಜನಃ ।
ಕಾಪಾಲೀ ಬಿಂದುನಾಥಶ್ಚ ಕಾಕಚಂಡೀಶ್ವರಾಹ್ವಯಃ ॥
ಅಲ್ಲಮಪ್ರಭುದೇವಶ್ಚ ಘೋಡಾ ಚೋಲೀ ಚ ಟಿಂಟಿಣಿಃ ।
ಭಾನುಕೀ ನಾರದೇವಶ್ಚ ಖಂಡಃ ಕಾಪಾಲಿಕಸ್ತಥಾ ॥
ಇತ್ಯಾದಯೋ ಮಹಾಸಿದ್ಧಾ ಹಠಯೋಗಪ್ರಭಾವತಃ ।
ಖಂಡಯಿತ್ವಾ ಕಾಲದಂಡಂ ಬ್ರಹ್ಮಾಂಡೇ ವಿಚರಂತಿ ತೇ ॥

ಹಠಯೋಗ ಪ್ರದೀಪಿಕಾ ೧—೫—೯

ಈ ವಿಭೀಷಣನೆಂದು ಕರೆಯಲ್ಪಟ್ಟ ಈ ವಿರೂಪಾಕ್ಷ ಸಿದ್ಧನಾಗಿರಬೇಕು. ಇವನು ನಾಥರ ಸಂಪ್ರದಾಯವನ್ನು ಬಿಟ್ಟು ಸಿದ್ಧರನ್ನು ಸೇರಲು ಬಯಸಿರಬೇಕೆಂದು ಊಹಿಸಬಹುದು. (ಹರಿಹರ ಮೊದಲಾದವರು ತಿಳಿಸುವ ಮತ್ಸ್ಯಕೇಶ್ವರಲಿಂಗ ಪ್ರತಿಷ್ಠಾಪನೆಗೂ ಮತ್ಸ್ಯೇಂದ್ರನಾಥನಿಗೂ ಸಂಬಂಧವಿರಬೇಕೆ?) ಮತ್ತು ರೇವಣ್ಣ ಸಿದ್ಧನ ಬಳಿಗೆ ಬಂದು ಮೂರುಕೋಟಿ ಶಿವಲಿಂಗ ಸ್ಥಾಪನೆಗೆ ಅರ್ಥಾತ್ ಶಿವಧರ್ಮ ಪ್ರಸಾರಣೆಗೆ ನೆರವಾಗಬೇಕೆಂದು ಬೇಡಿಕೊಂಡಿರಬೇಕು. ಆದುದರಿಂದಲೇ ವಿರೂಪಾಕ್ಷಸಿದ್ಧ ರೇವಣ್ಣ ಸಿದ್ಧರ ನಡುವೆ ಸಿದ್ಧಿಗಳ ಸೂರೆ ನಡೆದಿಲ್ಲವೆಂದು ಹೇಳಬೇಕಾಗಿದೆ.

**ರಾಜಪೂಜಿತ ರೇವಣ್ಣ:—** ರಾಜಪೂಜಿತನಾದ ರೇವಣ್ಣ ಸಿದ್ಧನು ರಾಜರಾಜ ಚೋಳನಿಗೆ (೧೧೪೬) ಇಲ್ಲವೆ ಕುಲೋತ್ತುಂಗ ಚೋಳನಿಗೆ (೧೧೭೮) ತನ್ನ ಮಹಿಮೆಯನ್ನು ತೋರಿಸಿರಬೇಕೆಂದು ಊಹಿಸಲಾಗಿದೆ. ಹರಿಹರನೂ ಬೊಮ್ಮರಸನೂ ಹೇಳುವ ರಾಜೇಂದ್ರ ಚೋಳನು ಈ ರಾಜರಾಜ ಚೋಳನೇ ಇರಬೇಕು. ಚೋಳರಾಜ್ಯದಲ್ಲಿ ರೂಢವಾಗಿದ್ದ ವೈಷ್ಣವ ಧರ್ಮವನ್ನು ಹಿಮ್ಮೆಟ್ಟಿಸಿ ಸಿದ್ಧನು ಶೈವಧರ್ಮವನ್ನು ಪ್ರಸಾರಗೊಳಿಸಿದನು. ಅದರಂತೆ ಉಜ್ಜಯಿನಿಯ (ಜಯಂತಿಯ) ವಿಕ್ರಮನು ಗುಪ್ತವಂಶದ ಗುತ್ತರಸ ಮನೆತನದ ವಿಕ್ರಮಾದಿತ್ಯನೆಂದು (೧೧೬೯–೧೧೯೧) ಮತ್ತು ಇವನಿಗೇ ರೇವಣ್ಣ ಸಿದ್ಧನು ಕಠಾರಿಯನೊಂದನಿತ್ತನೆಂದು ಕವಿಗಳು ತಿಳಿಸುತ್ತಾರೆ ಬನವಸೆ ತದ್ದೆವಾಡಿ (ಮಂಗಳವಾಡ) ಕಲ್ಯಾಣ ನಾಡುಗಳಲ್ಲಿ ಆಳಿದ ಬಿಜ್ಜಳನು ಒಬ್ಬನೇ. ಇವನು ಸಹ ಕಲ್ಯಾಣದಲ್ಲಿ ಚಕ್ರವರ್ತಿಯಾಗುವ ಪೂರ್ವದಲ್ಲಿ ರೇವಣ್ಣ ಸಿದ್ಧನ ಬೆಂಬಲವನ್ನು ವಿಪುಲವಾಗಿ ಕೋರಿದನೆಂದು ಮತ್ತು ಮಂಗಳವಾಡದಲ್ಲಿ ಅವನು ಆಳುವಾಗ ರೇವಣ್ಣ ಸಿದ್ಧನು ವಿಶೇಷ ತರಹದಿಂದ ಲೋಕಹಿತವನ್ನುಂಟುಮಾಡಿದನೆಂದು ಊಹಿಸಲಾಗಿದೆ.

ಕವಿಗಳು ತಿಳಿಸುವ ಅಗಸ್ತ್ಯನಾರೋ? ಇವನಿಗೆ ಶೈವಧರ್ಮೋಪದೇಶವನ್ನು ಮಾಡಿದ ಬಳಿಕ ರೇವಣ್ಣ ಸಿದ್ಧನು ತನ್ನ ಧರ್ಮಪ್ರಸಾರಣೆಗಾಗಿ ಕೊಲ್ಲಿಪಾಕಿ, ಕಂಚಿ, ಬನವಸೆ, ಕೊಲ್ಲಾಪೂರ, ಉಜ್ಜಯಿನಿ, ಮಾಸನೂರು, ಮಂಗಳವಾಡ ಮೊದಲಾದ ಪಟ್ಟಣಗಳನ್ನು ಕೇಂದ್ರಗಳನ್ನಾಗಿ ಮಾಡಿಕೊಂಡಿದ್ದಂತೆ ತೋರುತ್ತದೆ. ರೇವಣ ಸಿದ್ಧೇಶ್ವರ ಪುರಾಣದಲ್ಲಿ ಬೊಮ್ಮರಸನು ಇಂಥ ಅನೇಕ ಕೇಂದ್ರಗಳನ್ನು ತಿಳಿಸುತ್ತಾನೆ.[೨೫]

ಇಂತು ಶಿವಸಿದ್ಧಕುಲಚಕ್ರವರ್ತಿಯಾದ ರೇವಣ್ಣ ಸಿದ್ಧನು ತನ್ನ ಸಿದ್ಧಿ ಸಾಮರ್ಥ್ಯದಿಂದ ಅನೇಕ ಮಹತ್ತ್ವಂಗಳ ಮಾಡಿ ರಾಜಮನ್ನಣೆಯನ್ನು

೨೫ ಸಂಧಿ ೫–೬

ಪಡೆದುದಲ್ಲದೆ ಪ್ರಜಾನುರಾಗಿಯೂ ಆದನು. ಮತ್ತು ಸಿದ್ಧಿಯ ಬಲುಮೆಯಿಂದ ಕೊಬ್ಬಿದ 'ವಿಕಾರಿ' ಸಿದ್ಧರನ್ನು ಜಯಿಸಿ ಅವರಿಂದೊದಗಲಿದ್ದ ಲೋಕಕಂಟಕವನ್ನು ನಿವಾರಿಸಿದನು; ಶಿವಧರ್ಮವನ್ನು ಪಸರಿಸಿದನು.

**ರೇವಣ್ಣಸಿದ್ಧ ಪರಂಪರೆ:—** ಮಹಾ ಸಿದ್ಧನೆನಿಸಿಕೊಂಡಿದ್ದ ರೇವಣ್ಣಸಿದ್ಧನು ತನ್ನ ಕಾಲದಿಂದೀಚೆಗೆ ನಾಥರ ಪರಂಪರೆ ಇದ್ದಂತೆ ಸಿದ್ಧರ ಒಂದು ಪರಂಪರೆಯನ್ನೇ ಬಿಟ್ಟಿದ್ದನೆಂದು ಹೇಳಬಹುದು. ಏಕೆಂದರೆ ಮರುಳಸಿದ್ಧ, ಸೊನ್ನಲಿಗೆಯ ಸಿದ್ಧ(ರಾಮ), ಅಮುಗೆಯ (ಅಮಾಕ) ಸಿದ್ಧ, ತೋಂಟದ ಸಿದ್ಧ, ಸ್ವತಂತ್ರ ಸಿದ್ಧ, ಗುಮ್ಮಳಾಪುರದ ಸಿದ್ಧ, ಗೂಳೂರಸಿದ್ಧ, ಪಂಚವಣ್ಣಿಗೆಯ ಸಿದ್ಧ, ಸಂಪಾದನೆಯ ಸಿದ್ಧ, ಗುರುಸಿದ್ಧ, ಗವಿಸಿದ್ಧ, ಅರಣ್ಯಸಿದ್ಧ, ಕಾಡಸಿದ್ಧ, ಕರಿಸಿದ್ಧ, ಮಲ್ಲಿಕಾರ್ಜುನ (ಮುತ್ತಪ್ಪ)ಸಿದ್ಧ, ಇವರೇ ಮೊದಲಾದ ಶಿವಸಿದ್ಧಕುಲಕ್ಕೆ ರೇವಣ್ಣಸಿದ್ಧನೇ 'ಆದಿಸಿದ್ಧ'ನು. ಈಚೆಯ ಸಿದ್ಧರ ಸಾಂಪ್ರದಾಯದಲ್ಲಿ ಬದಲಾವಣೆಗಳು ಉಂಟಾದುವು. ಆದರೆ ಕನ್ನಡನಾಡಿನಲ್ಲಿ ನೆಲೆಸಿದ ಈ ಸಿದ್ಧಪರಂಪರೆಗೆಲ್ಲ ರೇವಣ್ಣಸಿದ್ಧನ ಸಿದ್ಧಿ ಚೈತನ್ಯವೇ ಮಾತೃಕೆಯು.

**ಸಿದ್ಧರು ಮತ್ತು ಶರಣರು:—** ಇಂತು ಪ್ರಬಲ ಸಿದ್ಧನಾದ ರೇವಣ್ಣನು ಶೈವಧರ್ಮ ಪ್ರಸಾರಣೆಯಲ್ಲಿ ಅಗ್ರಗಾಮಿಯಾಗಿದ್ದರೂ ಸಮಕಾಲೀನನಾದ ಅಥವಾ ಒಂದಿಷ್ಟು ವರುಷಗಳ ನಂತರ ಆ ಕಾರ್ಯವನ್ನೇ ಮುಂದುವರಿಸಿದ ಬಸವಣ್ಣ ಮೊದಲಾದ ಶಿವಾನುಭವಮಂಟಪದ ಶರಣರಿಂದ ಅದು ಏಕೆ ಕೊಂಡಾಡಲ್ಪಟ್ಟಿಲ್ಲ ಎಂಬುದೊಂದು ಸಮಸ್ಯೆಯು ಹಾಗೆಯೇ ಉಳಿದು ಬಿಡುವದು. ಶೈವದ ಕೊನೆಯ ಭಾಗವೆಂದು ಪ್ರಸಿದ್ಧವಾದ ವೀರಶೈವ ಧರ್ಮಕ್ಕಿಂತಲೂ ಬಸವಾದಿಗಳು ಪ್ರಸಾರಗೊಳಿಸಿದ ಲಿಂಗಮಾರ್ಗವು ಘನವಾದುದೆಂಬುದು ಅನುಭವಗಮ್ಯವಾದ ವಿಷಯವು. ಜನತೆಯ ಕಲ್ಯಾಣಕ್ಕಾಗಿಯೇ ತನ್ನ ಸಿದ್ಧಿಸತ್ವವನ್ನು ಸೂರೆಗೊಂಡು ಆನಂದಹೊಂದಿ ಅದೇ ತನ್ನ ಪ್ರಗತಿಯ ಚರಮ ಸೀಮೆಯೆಂದು ತಿಳಿದುಕೊಂಡಿರಬಹುದಾದ ಸನಾತನ ಸಂಪ್ರದಾಯದ ರೇವಣ್ಣಸಿದ್ಧನಿಗೆ ಪ್ರಗತಿಪರ ವಿಚಾರವುಳ್ಳ ಪುರೋಗಾಮಿಯಾದ ಶಿವಶರಣರ ತತ್ತ್ವಗಳು ಮೊದಲು ಮೊದಲು ಅಷ್ಟು ಅಂಟಿಕೊಂಡಿರಲಿಕ್ಕಿಲ್ಲ. ಆದರೆ ತನ್ನ ಪುತ್ರ (ಶಿಷ್ಯ?) ರುದ್ರಮುನಿಯು ಶಿವಾನುಭವ ಮಂಟಪದ ವಿಚಾರಗಳಲ್ಲಿ ಭಾಗತೆಗೆದುಕೊಳ್ಳುವ ಪೂರ್ವದಲ್ಲಿಯೇ, ಒಂದಿಷ್ಟು ವಿಚಾರ ಕ್ರಾಂತಿಯ ಸಂಸ್ಕಾರವನ್ನು ಪಡೆದಿರಬಹುದಾಗಿದ್ದರೂ ಆ ಸುಮಾರಿಗೆ ಅವನ ಕಾರ್ಯಕ್ಷೇತ್ರದ ಕೊನೆಯು ಲಿಂಗಮಾರ್ಗದಲ್ಲಿ ಪರಿಣಮಿಸಿರಬಹುದು.[೨೬]

---

೨೬ ತಾಳ್ದು ಕಾರುಣ್ಯಮಂ (ಹಾವಿನಹಾಳ ಕಲ್ಲಯ್ಯನ) ಭಕ್ತಿಗೆ ಮನಂಗೊಂಡು ।
ರುದ್ರಮುನಿದೇವಸಿಂ ಕರುಣಮಂ ಮಾಡಿಸುತೆ ।
ರುದ್ರನಣುಗಂ ಶೈವದೀಕ್ಷೆಯಂ ನೀಡಿಸುತೆ ॥ — ಹರಿಹರ

"ರುದ್ರಮುನಿವರನಿಂ...ದೀಕ್ಷೆಯಂ ಮಾಡಿಸಿದನು ವಿಶ್ವಾತ್ಮಕನು ಸಿದ್ಧೇಶನು"
— ಬೊಮ್ಮರಸ

ಎಂದು, ತಿಳಿಸುವ ಕವಿಗಳ ಮಾತುಗಳು ರೇವಣ್ಣನ ಈಗಿನ ಭಾವಪರಿವರ್ತನವು ಎಂಥದಿತ್ತು ಎಂಬುದನ್ನು ತಿಳಿಸುವವು.

ಹೀಗಿದ್ದರೂ ಈಗಿನಂತೆಯೇ ಆಗ ಸನಾತನಿಗಳು ಮತ್ತು ಸುಧಾರಕರು ಇವರಲ್ಲಿ ಪರಸ್ಪರ ವಿಚಾರಗಳ ಮೇಳವಿದ್ದಿರಲಿಲ್ಲ ಎಂಬುದನ್ನು ಲಕ್ಷಿಸ ಬೇಕು. ಈ ದೆಸೆಯಿಂದ ಒಬ್ಬರು ಇನ್ನೊಬ್ಬರ ಹೆಸರನ್ನು ಎತ್ತದೆ ಬಿಟ್ಟಿದ್ದರೂ ಇರಬಹುದು. ಆದರೂ ಅವನಿಗೆ "ವೀರಶೈವ ಪ್ರಮುಥಾಚಾರ್ಯ" ಇತ್ಯಾದಿಯಾಗಿ ಹೇಳುವರಲ್ಲ ಇದರ ರಹಸ್ಯವೇನು?

**ವೀರಶೈವದ ಉಗಮ:—** ಅಂಗದಮೇಲೆ ಲಿಂಗವಿರಿಸಿಕೊಂಡು ಇನ್ನುಳಿದ ಸ್ಥಾವರಕ್ಕೆ ಎರಗಬಾರದೆಂಬುದು ಶಿವಶರಣರ ಸಿದ್ಧಾಂತವಾದರೂ ಹೀಗೆ ಸ್ಥಾವರಕ್ಕೆ ಎರಗುವ ರೂಢಿಯು ಆಗಿನ ಜನಸಮೂಹದಲ್ಲಿ ರೂಢವಾಗಿತ್ತೆಂದು ವಚನಗ್ರಂಥ ಗಳಿಂದ ತಿಳಿದುಬರುತ್ತದೆ. ಅಂಗದ ಮತ್ತು ಅಂಗಳದ ಮೇಲಣ ಲಿಂಗ ಪೂಜೆಯ ನಡತೆ ಯಲ್ಲಿ ವೀರಶೈವದ ಉಗಮವನ್ನು ಕಾಣಬಹುದು. ಯಜ್ಞೋಪವೀತ ಲಿಂಗಧಾರಣ ಮಾಡಿಕೊಂಡಿದ್ದ ಆರಾಧ್ಯರ ಆಚರಣೆಯಲ್ಲಿಯೂ ವೀರಶೈವದ ಉಗಮವು ಕಂಡು ಬರುತ್ತದೆ. (ರೇವಣ್ಣಸಿದ್ಧನಿಗೆ ರೇವಣಾರಾಧ್ಯ ಎಂದೂ ಕರೆಯುವದರಿಂದ ಅವನು ಯಜ್ಞೋಪವೀತ ಲಿಂಗಧಾರಣೆಗಳನ್ನು ಮಾಡಿಕೊಂಡಿದ್ದ ಆರಾಧ್ಯ ಪಂಗಡದವ ನಿದ್ದಿರಬೇಕು). ಅಂಗದ ಮೇಲಿರಲಿ ಅಂಗಳದಲ್ಲಿರಲಿ ಸ್ಥಾವರವೇ ಅಧಿಕ ಎಂದು ಹೇಳುವ ಪಕ್ಷದವರಿಗೆ ಜಂಗಮದ ಅವಶ್ಯಕತೆಯೂ ಮಹತ್ತ್ವವೂ ಗೊತ್ತಾಗಿರ ಲಿಕ್ಕಿಲ್ಲ. ಸ್ಥಾವರಕ್ಕಿಂತ ಜಂಗಮವಧಿಕವೆಂದು ಹೇಳುವದು ಶಿವಶರಣರ ತತ್ತ್ವ ವಾದರೆ ಸ್ಥಾವರವೇ ಅಧಿಕವೆಂದು ಬಗೆಯುವದರಲ್ಲಿಯೂ ಸಹ ವೀರಶೈವದ ಉಗಮವನ್ನು ಕಾಣಬಲ್ಲೆವು. ರೇವಣ್ಣಸಿದ್ಧನು ಈ ತರಹದ ವೀರಶೈವ ತತ್ತ್ವದ ಮಟ್ಟಕ್ಕೆ ಬಂದಿರಲೂ ಸಾಕು. ಶಿವಶರಣರು ಮೈಮರೆಯಾದ ಬಳಿಕ ನೂರಿನ್ನೂರು ವರುಷಗಳಲ್ಲಿ ಪ್ರಬಲವಾಗಿ ಬೆಳೆದಿದ್ದ ಆಗಿನ ಸಮಾಜವನ್ನು ಪವಾಡಗಳ ಹೆಚ್ಚಳ ದಿಂದಲೇ ಸಾಗಿಸಿಕೊಂಡು ಹೋಗಿದ್ದ ಸಮಾಜಸೂತ್ರಧಾರಿಗಳಿಗೆ ಮುಂದೆ ಆದರಂತೆ ಕರೆದೊಯ್ಯುವ ಭಾರವು ಜಡವಾಗಿರಬೇಕು. ಬೇರೆಬೇರೆ ಪಂಗಡಗಳಿಂದ ಬಂದು ಕೂಡಿದ್ದ ಸಮಾಜದ ಜನರಿಗೆ ಶಿವಶರಣರ ಅನುಭವವು ತಪ್ಪಿ ಪವಾಡಗಳ ಬೆಳಕಿನಿಂದಲೇ ಸಾಗುವದೂ ಸಾಕಾಗಿರಬೇಕು.

ಹೀಗೆ ಸಮಾಜದ ಗಾತ್ರವು ಹೆಚ್ಚಾಗಿ ಸೂತ್ರವು ತಪ್ಪಿದ ಬಳಿಕ ಕೈಸೋತ ಸಮಾಜಕ್ಕೆ ಹಿನ್ನೋಟವೂ ಒದಗಿರಬೇಕು. ಮುನ್ನಡೆ ನಿಲುಕದೆ ಹಿನ್ನಡೆಗೆ ಸಿಲುಕದೆ ಇರುವ ಸಮಾಜ ಪುರುಷನು ಇದ್ದಲ್ಲಿಯೇ ಇರಬೇಕೆಂದರೆ ಅದೆಷ್ಟು ದಿವಸ ಉಳಿಯು ವದು? ಅಂತೂ ಹರಿದು ಬಂದ ಪೂರ್ವಾಶ್ರಯಕ್ಕೆ ಒಮ್ಮೆ ಸಮಾಜವು ಅಂಟಿ ಕೊಂಡಿತು. ಪ್ರಗತಿಪರ ದೃಷ್ಟಿಯನ್ನು ಕಳೆದುಕೊಂಡಿತು. ಎರಡರ ನಡುವಣ ಹಾದಿ ಯೊಂದನ್ನು ಹುಡುಕಿ ಶಿವಸೂತ್ರ ಶಿವಗೋತ್ರ ಶಿವಕುಲ ಇತ್ಯಾದಿಗಳ ತಿಳಿವಳಿಕೆ ಅಭಿಮಾನಗಳನ್ನು ಬದಿಗಿರಿಸಿ ತಾವು ಹಿಂದೆ ಯಾವ ಪಂಗಡಗಳಿಂದ ಬಂದು ಲಿಂಗವಂತ ಸಮಾಜದಲ್ಲಿ ಸೇರಿದ್ದರೋ ಆಯಾ ಸಮಾಜದಲ್ಲಿ ರೂಢವಾಗಿದ್ದ ಸೂತ್ರ

ಗೋತ್ರ ಪ್ರವರಾದಿಗಳನ್ನು ಒಂದಿಷ್ಟು ಮಾರ್ಪಡಿಸಿ ಜೋಡಿಸಿಕೊಂಡು ಲಿಂಗವಂತಿಕೆಯನ್ನು ಕೈಕೊಂಡು ಸಮಾಜವು ಸಾಗುವದಾಯಿತು. ಸಮಾಜರಚನೆಯ ಸಂಧಿಯ ಕಾಲಕ್ಕೆ ಸಿದ್ಧಿಪ್ರಯೋಗಗಳನ್ನು ಮಾಡಿ ಮಹತ್ಕಾರ್ಯಗಳನ್ನೆಸಗಿ ಮಹದುಪಕಾರ ಮಾಡಿದ ರೇವಣ್ಣನನ್ನು ಈಗ ಮರೆಯುವದು ಹೇಗೆ? ಅಂತೆಯೇ ವೀರಶೈವ ಪ್ರಮಥಾಚಾರ್ಯ, ವೀರಶೈವ ಮತಸ್ಥಾಪಕ, ರೇವಣಾಸಿದ್ಧ ಪ್ರಭೋ ಎಂದು ಅವನನ್ನು ಕರೆದು ಮನ್ನಿಸಿದುದೂ ಆಯಿತು. ಶಿವಶರಣರನ್ನು ಕೊಂಡಾಡಿದುದೂ ಆಯಿತು; ಶರಣರು ಮೈಮರೆಯಾದ ಬಳಿಕ ಸಮಾಜವು ಹೀಗೆ ಶರಣ–ಸಿದ್ಧರ ನಂಬುಗೆಯ ಹಾದಿಯಲ್ಲಿ ಸಾಗಿದುದಾಯಿತು.

**ಸಿದ್ಧಿ ಮತ್ತು ಅನುಭವಗಳ ಪರಸ್ಪರ ಆಧಿಕ್ಯ:—** ಒಂದು ಸಂಗತಿಯನ್ನು ಇಲ್ಲಿ ಮರೆಯುವಂತಿಲ್ಲ. ಲಿಂಗವಂತ ಕವಿಗಳು, ಸಮಾಜದ ಹಿಂದಿನ ಹಿರಿಯರು ತಮ್ಮ ಕೃತಿಗಳ ಆದಿಯಲ್ಲಿ ಶಿವಶರಣರನ್ನು ಸ್ತುತಿಸಿದ ತರುವಾಯವೇ ರೇವಣ್ಣಸಿದ್ಧಾದಿಗಳನ್ನು ಸ್ತುತಿಸುವರು. ಅಂದರೆ ಅನುಭವಿಗಳೂ ಸಿದ್ಧರೂ ಹೀಗೆ ಈರ್ವರೂ ಸಮಾಜಕ್ಕೆ ಬೇಕು ಎಂಬ ಮಾತಿದು. ಆದರೆ ಅನುಭವವಿಲ್ಲದ ಸಿದ್ಧಿಯು ಸಂಸಾರ ವ್ಯಾಪ್ತಿಗೆ ತೊಡಕಿಸುವಂತೆ ಸಿದ್ಧಿಯಿಲ್ಲದ ಅನುಭವವೂ ಸಂಶಯಕ್ಕೀಡುಮಾಡುವದೆಂಬುದನ್ನು ಲಕ್ಷಿಸಬೇಕು. ಈ ತರಹದ ಕೊಂಡಾಟದಿಂದ ಅನುಭವಿಗಳಿಂದ ಆದಷ್ಟು ಉಪಕೃತಿಯು, ಲೋಕಕಲ್ಯಾಣವು ಸಿದ್ಧರಿಂದ ನೆರವೇರಲಿಲ್ಲ; ಮತ್ತು ನೆರವೇರುವದಿಲ್ಲವೆಂಬುದು ಸ್ಪಷ್ಟವಾದುದು. ಅದರಂತೆ ಸಂಸಾರವ್ಯಾಪ್ತಿಗೆ ಈಡುಮಾಡುವ ಧರ್ಮವುಳ್ಳ ಸಿದ್ಧಿಗಿಂತ ಸಮರಸವನ್ನುಂಟುಮಾಡುವ ಸಾಮರ್ಥ್ಯವುಳ್ಳ ಅನುಭವವು ಘನವೆಂಬುದೂ ಇದರಿಂದ ಸ್ಪಷ್ಟವಾದುದು. ಯಾಕಂದರೆ ಅನುಭವದಿಂದ ಸಿದ್ಧಿಯನ್ನು ಹೊಂದುವದು ಸಾಧ್ಯವಿದ್ದಂತೆ ಸಿದ್ಧಿಯಿಂದ ಅನುಭವಪಡೆಯುವದು ಸಾಧ್ಯವಿಲ್ಲ. ಆದುದರಿಂದ ಸಿದ್ಧಿಗಿಂತ ಅನುಭವವೇ ಅಧಿಕವಾದುದು. ಸಿದ್ಧಿಯು ಗಾತ್ರವೆನಿಸಿದರೆ ಅನುಭವವು ಸೂತ್ರವಾಗುವದು. ಈ ಸೂತ್ರ ಮತ್ತು ಈ ಗಾತ್ರ ಇವುಗಳ ಸಂಗಮದಲ್ಲಿ ಸಮಾಜ ಪುರುಷನಿಗೆ ನೇತ್ರವುಂಟು. ಇದುವೆ ಅನುಭವ ಸಿದ್ಧಿಯು. ಸಮಾಜ ಪುರುಷನಿಗೆ ಅಲ್ಲಮಪ್ರಭುವು ಇಂಥ ನೇತ್ರವು. ಯಾಕಂದರೆ ಅವನಿಗೆ ಅಂಥ ಅನುಭವಸಿದ್ಧಿಯುಂಟಾಗಿತ್ತು.

ಕಣ್ಣಿಗೆ ಕಣ್ಣು ಕಣ್ಣೊಳು ಕಣ್ಣು ಕಣ್ಣೇ ನೇತ್ರ ।
ನೇತ್ರವೇ ಸೂತ್ರ ಸೂತ್ರವೇ ಲಿಂಗ ಲಿಂಗವೇ ಗುಹ್ಯ ।
ಗುಹ್ಯಕ್ಕೆ ಗುಹ್ಯ ಗೌಪ್ಯಕ್ಕೆ ಗೌಪ್ಯ ರಹಸ್ಯಕ್ಕೆ ರಹಸ್ಯ ।
ಈ ನೇತ್ರ ಮಹಿಮೆಯಂ ಗುಹೇಶ್ವರ ಬಲ್ಲನಲ್ಲದೆ।
ಕಣ್ಣಗೆಟ್ಟಣ್ಣಗಳೆತ್ತ ಬಲ್ಲರು ನೋಡಯ್ಯಾ ಗುಹೇಶ್ವರಾ॥ ೨೭

---

೨೭ ಲಿಂಗ ಸೂತ್ರ ನಿರ್ಣಯ ಸೂತ್ರ ೨.

ಎಂ[illegible]ನದಲ್ಲಿ ಅನುಭವ ಸಿದ್ಧಿಯ ಕ್ರಮವು ನಿರೂಪಿತವಾಗಿರುವುದಲ್ಲದೆ ನೇತ್ರದ ಮ[illegible]ಮೆಯೂ ಮೂಡಿದೆ. ಮತ್ತು ಅಲ್ಲಮ ಪ್ರಭುವಿನ ಘನತೆಯೂ ವ್ಯಕ್ತವಾಗಿದೆ.

**ಪವಾಡಸಿದ್ಧ ಮತ್ತು ಅನುಭವಸಿದ್ಧ:**— ಅಲ್ಲಮಪ್ರಭುವು ಭಕ್ತಿಯಿಂದೊಡ[illegible]ಡಿದ ಯೋಗಪಂಚಕದ ಅನುಭವವನ್ನು ಕರದಿಷ್ಟದಲ್ಲಿ ಕಂಡು ಸಮ್ಯಕ್ ದೃಷ್ಟಿಯನ್ನು ಹೊಂದಿ ಪ್ರಸಾದ ಕಾಯವೆನಿಸಿದ ವ್ಯೋಮ ಶರೀರಿಯಾದನು. ಅವನು ಗೋರಕ್ಷ ಮೊದಲಾದ 'ತನುಸಿದ್ಧ' ರೆನಿಸಿದ 'ವಿಕಾರಿಸಿದ್ಧರ' ವಿಕಾರವನ್ನು ಮತ್ತು ಸಿದ್ಧರಾಮ ಮೊದಲಾದ 'ಶಿವಸಿದ್ಧ' ರ ಉರಿಗಣ್ಣನ್ನು ಮಾಣಿಸಲು ಬಲ್ಲಿದನಾದನು. ಅನುಭವಸಿದ್ಧನೆಂದು ಕೀರ್ತಿಕಾಯನಾದನು. 'ವಿಕಾರಿ' ಸಿದ್ಧರಿಗಾಗಲಿ 'ಶಿವ' ಸಿದ್ಧರಿಗಾಗಲಿ ರಸದ ಘುಟಿಕೆಯಿಂದ ವಜ್ರಕಾಯವನ್ನು ಸಂಪಾದಿಸಿಕೊಳ್ಳುವುದರಲ್ಲಿಯೇ ಗತಿಯಿದೆ. ಅನುಭವಸಿದ್ಧನಾದ ಅಲ್ಲಮ ಪ್ರಭುವಿಗೆ 'ನಿಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ' ಯ ಅನುಭವವು ತನ್ನ ಕಾಯದ ಪ್ರತಿಯೊಂದು ರೋಮರಂಧ್ರದಲ್ಲಿ ಇಳಿದುದನ್ನು ಕಂಡು ಅದನ್ನು ಪ್ರಕಾಶಕಾಯವೆನಿಸಬೇಕೆಂಬುದೇ ಗುರಿಯು. ರೇವಣ್ಣಸಿದ್ಧನ ಸಿದ್ಧಿ ಪ್ರಯೋಗದ ರೀತಿಯನ್ನು ನೋಡಿದರೆ ಅವನು ಪವಾಡಸಿದ್ಧನೆಂದೇ ಹೇಳಬೇಕು; ಮತ್ತು ಅದನ್ನು ಸೂರೆಗೆಯ್ದು ಆನಂದಗೊಳ್ಳುವುದರಲ್ಲಿಯೇ ಅವನಿಗೆ ಗತಿಯಿರುವುದೆಂದು ತಿಳಿಯಬೇಕು. ಈ ತರಹದ ಸಿದ್ಧಿಯ ಬಳಕೆಯು ತಮ್ಮನ್ನೂ ತಮ್ಮ ಒಡನಾಡಿಗಳನ್ನೂ ಪ್ರಕೃತಿಯ ಜಂಜಡದಿಂದ ಬಿಡಿಸಲಾರದು. ಆದುದರಿಂದ ರೇವಣ್ಣಸಿದ್ಧನು ಪೃಥ್ವಿತತ್ತ್ವ ಸಮರಸಿಯೆಂದು ಹಿಂದೆಯೇ ಊಹಿಸಿದೆ. ಅಲ್ಲಮಪ್ರಭುವಿನ ಅನುಭವಸಿದ್ಧಿಯ ರೀತಿಯೇ ಬೇರೆ ತರಹದ್ದು. ಬಲ್ಲಿದರೆಂಬವರ ಬಲ್ಲತನದಲ್ಲಿರುವ ಕುಂದುಕೊರತೆಗಳನ್ನು ತೋರಿಸಿ ತಿದ್ದಿ ಮುಂದಿನ ದುಡಿಮೆಯ ಕ್ರಮಕ್ಕೆ ನಿಲ್ಲಿಸುವ ಸಿದ್ಧಿಪ್ರಯೋಗವವನದು. ಇಲ್ಲಿ ಭೌತ ಸಂಗತಿಗಳ ಸುಖರತಿಗೆ ಆಶ್ರಯವಿಲ್ಲ. ವ್ಯೋಮಕಾಯ ಸಿದ್ಧ— ಬಯಲೊಡಲಿನ ಯೋಗಿಯಾದ ಅವನು ತನ್ನ ಆ ಹೆಸರಿನಿಂದಲೇ ಆಕಾಶತತ್ತ್ವ ಸಮರಸಿಯೆಂದು ಸೂಚಿತವಾಗುತ್ತದೆ. ಬಯಲಿನಲ್ಲಿ ಎಲ್ಲವು ಅಡಕವಾಗಿರುವುದರಿಂದ ಅಲ್ಲಮಪ್ರಭುವಿನ ಅನುಭವಸಿದ್ಧಿಗೆ ನಿಲುಕದೆ ಇರುವುದು ಯಾವುದೂ ಇಲ್ಲ. ಸಿದ್ಧರಲ್ಲಿ 'ವಿಕಾರಿಸಿದ್ಧ'ರಿಗಿಂತ 'ಶಿವಸಿದ್ಧ'ನೆನಿಸಿದ ರೇವಣ್ಣನ ಸ್ಥಾನವು ಘನವಾದುದು ಎಂಬುದನ್ನು ಒಪ್ಪುವದಾದರೂ ಸಿದ್ಧಿ ಮತ್ತು ಅನುಭವ ಇವುಗಳಿಂದ ರೇವಣ್ಣ ಮತ್ತು ಅಲ್ಲಮ ಇವರ ನಿಲವನ್ನು ಅಳೆಯುವದಾದರೆ ಪವಾಡಸಿದ್ಧನು ಅನುಭವಸಿದ್ಧನ ತೂಕಕ್ಕೆ ಎಷ್ಟೂ ಸಮಬಾರನು. ಈ ದೆಸೆಯಿಂದ ಸಿದ್ಧರಲ್ಲಿ ರೇವಣ್ಣನ ಸ್ಥಾನವು ಎಲ್ಲಿರುವದೆಂಬುದು ಸ್ಪಷ್ಟವಾದುದು. ಅವನ ಸಿದ್ಧಿಯ ಮಹತ್ವವು ಎಂಥದು ಎಂಬುವದು ತಿಳಿಯುವದು.

**ನವಕಲ್ಯಾಣ ಮಠ, ಧಾರವಾಡ**